ಮೈಂಬಳ ಶಂಕರನಾರಾಯಣ ನಾವಡ

ಶ್ರೀ ಚೆಲ್ವನಾರಾಯಣ ಶತಕಂ

ಶ್ರೀ ಕೃಷ್ಣ ವಿಜಯ

ಕನ್ನಡ ಪದ್ಯಾವಳಿ

ಚಂಡ ಕೌಶಿಕ ನಾಟಕಂ.

ಕ. ಪ. 4

# ಶ್ರೀಚೆಲ್ವನಾರಾಯಣಶತಕಮ್.

(ಸಟಿಪ್ಪಣಂ.)

ಮತ್ತು

ಮನುಷ್ಯನ ಸಪ್ತವಯೋವಸ್ಥೆಗಳು.

---

ಸಚಿತ್ರ ಕರ್ಣಾಟಕ ವಚನರಾಮಾಯಣ, ವಚನಭಾಗವತ,
ಶ್ರೀಮತೀಪರಿಣಯ, ಸ್ವಪ್ನವಾಸವದತ್ತ ಮುಂತಾದ
ಅನೇಕಗ್ರಂಥಕರ್ತರಾದ
ಪಂಡಿತ. ದೇವಶಿಖಾಮಣಿ ಅಳಸಿಂಗರಾಚಾರ್ಯರಿಂದ
ವಿರಚಿತವು.

ತೃತೀಯಮುದ್ರಣ.

ಮದ್ರಾಸು
ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ,
ಆರ್. ವೆಂಕಟೇಶ್ವರ ಕಂಪೆನಿಯರಿಂದ
ಪ್ರಕಟಿಸಲ್ಪಟ್ಟಿದೆ.

---

1925.



Price. 0—7—0.] [ಬೆಲೆ. 0—7—0,



ಶ್ರೀಃ.

# ಶ್ರೀ ಚೆಲ್ವನಾರಾಯಣ ಶತಕಮ್.

---

್ರೀಮದ್ಯಾದವಶೈಲಶೃಂಗನಿಲಯಂ ಶ್ರೀಭೂಮಿನೀಳಾಪ್ರಿಯಂ ।
ೂೀಮೋತ್ತಂಸಮುಖಾಮರೇಂದ್ರಮಕುಟೀನೀರಾಜಿತಾಂಘ್ರಿದ್ವಯಂ॥
ೀಮಾತೀತಗುಣಾಶ್ರಯಂ ಶ್ರಿತಜನತ್ರಾಣೈಕಬದ್ಧಾಶಯಂ ।
್ರೀಮಾನ್ಯಂದಯೆಗೆಯ್ಗೆ ನಮ್ಮೊಳೊಲವಿಂದಾಯುಷ್ಯಮಂ ಶ್ರೀಯುಮಂ॥

ಿಸರಂ ಕೇಳ್ದೊಡನುಬ್ಬ್ರ್ ನಕ್ಕು "ಮಿವನಾರಜ್ಞಾತಗೋತ್ರಂ ಪ್ರಿಯ ।
ಿಸಿದಂ ಸತ್ಕವಿಸಾಧ್ಯಮಪ್ಪ ಸುಮಹಾಕಾರ್ಯಕ್ಕೆ" ನುತ್ತೆನ್ನನೇ ॥
ಸದೀ ಕಾವ್ಯಮನೋದಿ ನೋಡಿ ಗುಣಮಂ ಕೈಕೊಳ್ವ ಸಂತರ್ಗೆ ಸಂ।
ಿಸದಿಂಬಾನಭಿವಂದಿಪೆಂ ಯದುಗಿರಿ ಶ್ರೀ ಚೆಲ್ವನಾರಾಯಣಾ! ॥ ೨

## ಸಜ್ಜನಸ್ವಭಾವಂ.

ಿರರಂ ನಾಡೆ ಪೊಗಳ್ವರಾತ್ಮಗುಣಮಂ ಪ್ರಖ್ಯಾಪಿಸಲ್, ಪೆರ್ಚ್ರದೈ ।
ರಿಯಂ ಪುಲ್ಗೆಣೆಯಾಗಿ ಭಾವಿಸಿದೊಡಂ ತದ್ವಾರದಿಂ ತಗ್ಗುವರ್ ॥
ರಿದುಂ ಮೇಲ್ಮೆಯನೊಂದೆ ತಗ್ಗಿ ನಡೆಯುತ್ತಿರ್ಪರ್, ಕರಂ ನೋಡೆ, ಸ।
ತ್ಪುರುಷರ್ ಚಿತ್ರಚರಿತ್ರರಲ್ತೆ! ಧರೆಯೊಳ್ ಶ್ರೀಚೆಲ್ವನಾರಾಯಣ ॥ ೩

ನಲಜ್ವಾಲೆಯೊಳಿಟ್ಟು ಕಾಯಿಸಿ, ವಿರೂಪಂಗೆಯ್ದು ಕಟ್ಟಿಟ್ಟು, ಮಂ ।
ಿನದಿಂ ಮಂಥಿಸಿ ಸಾರಮಂ ತೆಗೆದೊಡಂ ವೈವರ್ಣ್ಯಮಂ ತಾಳದಂ ॥
ನಿವಾಲ್ ಮತ್ತಿನಿದಾಗಿ ಶುದ್ಧಗುಣದಿಂ ಸುಸ್ನೇಹಮಂ ತೋರ್ಪುದೆಂ।
ಿನೆ ಸದ್ಭಂಗಿ ವಿಚಿತ್ರಮಲ್ತೆ ಧರೆಯೊಳ್ ಶ್ರೀ ಚೆಲ್ವನಾರಾಯಣ ॥ ೪

ಗರಳೋಗ್ರಾಹಿ ಕರಾಳ ವಕ್ತ್ರಕುಹರಗ್ರಾಸಕ್ಕೆ ತಾಂ ಸಿಲ್ಕಿಯುಂ
ಧರೆಯಂ ತಣ್ಪಿಪನಿಂದು ತಿಂದುಳಿದ ತನ್ನರ್ಧಾವಶಿಷ್ಟಾಂಗದಿಂ ||
ಪರಿಶುದ್ಧಾತ್ಮರನಿಪ್ಪ ಸಂತರಿಳೆಯೊಳ್ ತಾಂ ಬಾಧೆಗೀಡಾದೊಡಂ |
ಪೆರರಂ ತೋಷಿಸದಿರ್ಪ್ಪರೇ ! ಯದುಗಿರಿ ಶ್ರೀ ಚೆಲ್ವನಾರಾಯಣ || ೫

ತರುಗಳ್ ಪಣ್ಗಳನುಣ್ಬುವೇಂ?ಸರಸಿಗಳ್ತಾಂತೋಯಮುಂಪೀರ್ವ್ವವೇಂ?
ಧರೆ ಸಸ್ಯಂಗಳ ತಾನೆ ಮೆಲ್ವುದೆ? ಮೃಗಂ ಮೆಯ್ಗಂಪನೋಲೈಸಿ ಕ||
ಸ್ತುರಿಯಂ ತಾಳ್ದುದೆ!ಕೋಕಿಲಂನುಡಿವುದೇಂ ತನ್ನೊಳ್ ಸುಖಾಪೇಕ್ಷೆಯಿಂ
ಧರೆಯೊಳ್ ಸದ್ವಿಭವಂ ಪರಾರ್ಥಮೆ ವಲಂ! ಶ್ರೀ ಚೆಲ್ವನಾರಾಯಣ || ೬

ಉರಿಯೊಳ್ ಕಾಸುತೆ ಕಲ್ಲೊಳಿಟ್ಟರೆದಯಸ್ಸಂಘಟ್ಟದಿಂ ಘಟ್ಟಿಸು |
ತ್ತಿರೆಯುಂ ಕುಂದದೆ ಮೇಲ್ಮೆಯಾಂಪ ಕನಕಂ ನಿಸ್ಸಾರಗುಂಜಾಫಲೋ||
ತ್ಕರಮಂ ತನ್ನೊಡನಿಟ್ಟು ತೂಗೆ ಭರದಿಂ ತಾಂ ಬಳ್ಕಿ ಬೀಳ್ವಂತೆವೋಲ್ |
ಪಿರಿಯರ್ ನೀಚರ ಸಾಮ್ಯಮಂ ಸಹಿಸರೈ! ಶ್ರೀ ಚೆಲ್ವನಾರಾಯಣ || ೭

ಹರಿಣಾಂಕಂ ಮಲಿನಂ, ಜಡಪ್ರಕೃತಿ, ಮೇಣ್ ವಕ್ರಂ,ಕ್ಷಯಾವಿಷ್ಟನಂ
ತಿರೆ ದೋಷಾಕರನೆಂಬುದಂ ತಿಳಿದೊಡಂ ಸುಪ್ರೇಮದಿಂದಾತನಂ ||
ಶಿರದೊಳ್ ತಾಳ್ದಿದನೀಶನುತ್ತಮಗುಣರ್ ತಮ್ಮಾಶ್ರಯಂಬೆತ್ತುಬಂ |
ದರೊಳೇಂ ದೋಷಗುಣಂಗಳಂ ಬಗೆವರೇ? ಶ್ರೀ ಚೆಲ್ವ || ೮

ಸುಡೆ ಸೌವರ್ಣದ ವರ್ಣಮೇಂ ಕಿಡುಗುಮೇ? ಗೋಕ್ಷೀರಮಂ ನಾಡೆ ಕಾ
ಸಿಡೆ ಸುಸ್ವಾದ್ಯಮದಾಗದೇ? ವರಮಣಿವ್ರಾತಂಗಳಂ ಶಾಣೆಯೊಳ್ ||
ಕಡೆಯಲ್ ಕಾಂತಿವಿಶೇಷಮೇನೊಗೆಯದೇ? ಧೀರರ್ ಕರಂ ಬಾಧೆವ |
ಟ್ಟೊಡಮೇಂ ಪೆರ್ಚ್ಚದೆ ಕುಂದನೊಂದುವರೆ ಪೇಳ್? ಶ್ರೀ ಚೆಲ್ವನಾರಾ||೯

ಕರವೀರಂಗಳೆನಿತ್ತೊ ತೋರ್ಪ್ಪವಿಳೆಯೊಳ್ ಚೂತಂಗಳಲ್ಲಲ್ಲಿ!ಮೇಣ್ |
ಧರೆಯಂ ತಣ್ಪಿಪ ಚಂದ್ರನೊರ್ವ್ವನೆ ವಲಂ ನಾನಾಗ್ರಹವ್ಯೂಹದೊಳ್||
ನೆರೆದೆತ್ತೆತ್ತಲುಮಿರ್ಪುವಶ್ಮಮವರೊಳ್ ಸದ್ರತ್ನಮುಂ ದುರ್ಲಭಂ |
ವಿರಳರ್ ಲೋಕದೊಳುತ್ತಮರ್ ಯದುಗಿರಿಶ್ರೀಚೆಲ್ವನಾರಾಯಣ || ೧೦

## ದುರ್ಜನಸ್ವಭಾವಂ.

ಕಲೆಗುಂದುತ್ತಿರಲೆಯ್ದುವಂ ದಿನದಿನಕ್ಕಂ ಮಿತ್ರಸಾನ್ನಿಧ್ಯಮಂ ।
ಕಲೆಯಿಂ ಪೂರಿತನಾಗುತನಾಗುತತಿದೂರಕ್ಕೆಯ್ದುವಂ ಚಂದ್ರಮಂ ॥
ಸಲೆ ದಾರಿದ್ರ್ಯದೆ ಮಿತ್ರನಾಶ್ರಯಣಮುಂ ಶ್ರೀಯೊಳ್ ಪರಿತ್ಯಾಗಮುಂ।
ಮಲಿನಾತ್ಮರ್ಗ್ಗಿರ್ಪದೆ ಸಾಜಮೈ! ಯದುಗಿರಿ ಶ್ರೀಚೆಲ್ವನಾರಾಯಣ ॥ ೧೧

ಉರುಕಾಂತಾರದ ಮಧ್ಯದೊಳ್ ವಸಿಸುವೆಂ ವಾತಾಶನಂ ನಾನೆನು ।
ತ್ತುರಗಂಸನ್ಮುನಿವೃತ್ತಿಯಂ ಮೆರೆದೊಡಂ ವಕ್ತ್ರಾಂತದೊಳ್ಕ್ಷ್ವೇಳಮಂ
ಎರಡುಂಜಿಹ್ವೆಯನ್ನೈದೆ ಜಿಹ್ಮಗತಿಯಂ ತಾಳ್ದಂತೆವೊಲ್ ದುರ್ಜನರ್ ।
ನೆರೆ ಸಾಮ್ಯಾಕೃತಿದೋರಿ ವಂಚಿಪರಲಾ! ಶ್ರೀಚೆಲ್ವನಾರಾಯಣ ॥ ೧೨

ಪ್ರಿಯದಿಂ ಪೋಷಿಪನಾವನಾವನಸಿಯಿಂ ಪೋಳ್ಗ್ಗಯ್ವನಾವಂ ಸುವೋ ।
ಚ್ಚಯದಿಂದಚ್ಚಿರ್ಪನೆಲ್ಲರೊಳ್ ಕಟುವೆ ತಾನಾಗಿಕ್ಕುರ್ಮಾನಿಂಬಮಾ!
ರಯ ನೀಡುಂ ಸದಸದ್ವಿಚಾರರಹಿತರ್ ಮತ್ತಾರೊಳಂ ತಮ್ಮ ದು ।
ರ್ನಯಮಂ ತೋರದೆ ಮಾಣ್ಬರೇ? ಯದುಗಿರಿ ಶ್ರೀ ಚೆಲ್ವನಾರಾಯಣ॥೧೩

ಸುಜನಗ್ಗೊರ್ಂದೆ ರಸಜ್ಞೆ!ಭೋಗಿಗೆರಡುಂ!ಮತ್ತಾ ತ್ರಿಶೀರ್ಷಂಗೆ ಮೂ।
ರಜನೊಳ್ ನಾಲ್ಕು!ಪುರಾರಿಗೈದು!ಕುವರಂಗಾರಗ್ನಿಗೇಳ್ ಮೇಣ್ ಪುಲ॥
ಸ್ತ್ಯಜವಕ್ತ್ರಾಂತದೆ ಪತ್ತು! ಮತ್ತೆ ಪಣಿಪಂಗಿರ್ಛಾರ್ಸಿರಂ!ದುರ್ಜನ ।
ವ್ರಜಕಾ ಜಿಹ್ವೆಯೆನಿತ್ತೊ ಕಾಣೆನಕಟಾ ! ಶ್ರೀ ಚೆಲ್ವ ॥ ೧೪

ಎರಡುಂಪಕ್ಷದೆ ರಾಜಿಪೆಂ ವಿಮಲಪುಷ್ಟಾಂಗಂ ಸದಾಮೀನರಾ ।
ಶಿರತಂ ನೇಸರಿನಂಜೆನೆಲ್ಲದೆಸೆಗಂ ಪೋಪೆಂ ದ್ವಿಜಾಧೀಶನಾಂ ॥
ಸರಿಯಲ್ಲಂ ಶಶಿಯೆನ್ನೊಳೆಂದು ಬಕಮುಂ ತಾಂ ಚಂದ್ರನಂ ನಿಂದಿಪಂ ।
ತಿರೆ ನೀಚಾತ್ಮಕರೇಡಿಪರ್ ಮಹಿತರಂ ಶ್ರೀ ಚೆಲ್ವ ॥ ೧೫

ಬಡವರ್ ವಿತ್ತದೆ ಶೂರರಂಜಲಿಗಳಿಂ ಭೀತರ್ ಭಯೋತ್ಪಾದದಿಂ ।
ಮೊಡೆಯರ್ ಸತ್ಪರಿಚರ್ಯೆಯಿಂ ಬುಧಜನರ್ ವಿಶ್ವಾಸದಿಂ ಬಾಲರೊ ॥

ಳ್ನುಡಿಯಿಂ ಸಾಧ್ಯರೆನಿಪ್ಪರಾರಯೆ ಕರಂ ಮೂರ್ಖಾತ್ಮರಂ ತಿರ್ದ್ದಿ ತ ।
ರ್ಪ್ಪೊಡೆ ಮತ್ತಾವುದುಪಾಯವೋ ತಿಳಿಯೆನಾಂ ! ಶ್ರೀ ಚೆಲ್ವ ॥ ೧೬

ಪನೆಯೊಳ್ ದುರ್ವಿಷವಿರ್ಕುಮಾ ಫಣಿಗೆಮೇಣ್ ವಾಲಾಗ್ರದೊಳ್ ವೃಶ್ಚಿಕ
ಕ್ಕನೆ ಸೋಂಕುತ್ತಿರೆ ಕೊಲ್ವುವಿಂತಿವೆರಡುಂ ಜೀವೌಘಮಂ ನಾಡೆ ದು॥
ರ್ಜನಜಿಹ್ವಾಗ್ರದೊಳಿರ್ಪುದೊಂದು ವಿಷಮತ್ಯುಗ್ರಂ ವಚೋರೂಪದಿಂ ।
ದಿನಿಸುಂ ಸೋಂಕದೆ ಕೊಲ್ವುದೈ! ಯದುಗಿರಿ ಶ್ರೀ ಚೆಲ್ವ ॥ ೧೭

ಭರದಿಂದೆಳ್ದಿದಿರ್ವಂದು ಕೈಮುಗಿದು ಮೇಣರ್ಧಾಸನಂಗೊಟ್ಟು ಸಾ ।
ದರದಿಂದಂ ಬಿಗಿದಪ್ಪಿ ಬಾ! ಪ್ರಿಯಸಖಾ! ಬಾರೆಂದು ಕಣ್ಣೀರ್ ಪೊದ॥
ಳ್ದಿರಲಂತರ್ವಿಷರಾಗಿ ಮೇಲೆ ಮೃದುವಾಗ್ಜಾಲಂಗಳಂ ಚೆಲ್ವ ಧೂ ।
ರ್ತರ ನಾಟ್ಯಾಭಿನಯಂ ಮಹಾದ್ಭುತವಲಾ! ಶ್ರೀ ಚೆಲ್ವ ॥ ೧೮

ನಯನಾನಂದನನಿಂದುವಂ ತುಡುಕುವಂ ಸ್ವರ್ಭಾನು! ಮೇಣ್ ಸತ್ಫಲೋ।
ಚ್ಛ್ರಯದಿಂ ಶೋಭಿಪ ಭೂರುಹಪ್ರತತಿಯಂ ತಾಂ ಸುಟ್ಟಪಂ ವಹ್ನಿ ಸು॥
ಪ್ರಿಯದಿಂ ಪೋಷಿಪುವಲ್ತೆ ತನ್ನೊಳಹಿಯಂ ಶ್ರೀಗಂಧವೃಕ್ಷಂಗಳಾ ।
ರಯಲಜ್ಞರ್ ಬಗೆಯರ್ ನಯಾನಯಗಳಂ ಶ್ರೀ ಚೆಲ್ವ ॥ ೧೯

ತರುಣಾಬ್ಜವ್ರಜದೊಳ್ ಮಹೋಗ್ರದ ಸಿಡಿಲ್,ಶ್ರೀಗಂಧವೃಕ್ಷಂಗಳೊಳ್।
ಗರಳೋಗ್ರಾಹಿಗಣಂಗಳೊಳ್ಮಡುಗಳೊಳ್ ನಕ್ರಾಳಿ,ಮೇಣ್ ಕ್ಷೀರಸಾಗ॥
ರದೊಳ್ ಘೋರವಿಷಂ,ಮಹಾನಿಧಿಗಳೊಳ್ ಭೂತಂಗಳೊಂದಿರ್ಪ್ಪವೊಲ್
ನೆರೆದಿರ್ಪ್ಪರ್ ಖಲರುತ್ತಮರ್ಕ್ಕಳೆಡೆಯೊಳ್ ಶ್ರೀ ಚೆಲ್ವ ॥ ೨೦

## ಉದ್ಯಮಪ್ರಶಂಸನಂ.

ಒಡನಾಕಾಶದ ಗಂಗೆಯಂ ಪೊಡವಿಗೀಳ್ತರ್ಪ್ಪೆಂದು ಸಂಕಲ್ಪದಿಂ ।
ಮೃಡನಂ ಮೆಚ್ಚಿಸಿ ಮತ್ತವಂ ಕಬರಿಯೊಳ್ ಕಟ್ಟಿಟ್ಟೊಡಂ ಜನ್ಹುತಾಂ॥
ಪೊಡೆಯೊಳ್ ಪೂಳ್ದೊಡಮಂತದಂಬಿಡದೆ ಕೊಂಡುಯ್ದಂದಿಲೀಪಾತ್ಮಜಂ
ಪಿಡಿಯಲ್ ಸಾಧಿಸರೇ ಮಹಾತ್ಮರಿಳೆಯೊಳ್, ಶ್ರೀ ಚೆಲ್ವ ॥ ೨೧

ಅಣುಮಾತ್ರಂಗಳೆನಿಪ್ಪ ಬೆಳ್ಳಿರುವೆಗಳ್ ತಂತಮ್ಮೊಳೊಂದಾಗಿ ಮೃ ।
ತ್ಕಣವೊಂದೊಂದನೆ ಸೇರಿಸಲ್ ಕ್ರಮದೆ ತಾಂ ಪೆರ್ಬ್ಬತ್ತಮಪ್ಪಂತನು।
ಕ್ಷಣಮುಂ ಮಾಣದೆ ವಿದ್ಯೆಯಂ ಧನಮುಮಂ ಸಂಪಾದಿಸಲ್ ಮತ್ತದೋ
ರಣದಿಂ ಪೆರ್ಚ್ಚದೆ ಪೋಪುದೇ? ಮದುಗಿರಿ ಶ್ರೀ ಚೆಲ್ವ ॥ ೨೨

ಮದನಂ ಗೆಲ್ದಪನಲ್ತೆ! ಮೂಜಗಮುಮಂ ಪುಷ್ಪೌಘದಿಂ ಜಾನಕೀ ।
ಹೃದಯೇಶಂ ಕಣೆಗೆಯ್ದನೊಂದೆತೃಣಮಂ ಶಕ್ರಾತ್ಮಸಂಜಾತನೊಳ್ ॥
ಸದೆದಂ ಫೇನದೆ ವೃತ್ರನಂ ಹರಿಯೆನಲ್ "ಬಲ್ಲರ್ಗ್ಗೆ ಪಲ್ಲೇ ನಿಜಾ ।
ಯುಧ" ಮೆಂದಾಡುವ ಮಾತದೇಂ ಪುಸಿಯೆ ಪೇಳ್? ಶ್ರೀಚೆಲ್ವ॥ ೨೩

ಕಳಿವೂಗಳ್ ಕಣೆ! ಯಿಕ್ಷುದಂಡಮೆ ಧನುರ್ದಂಡಂ, ಧುರಕ್ಕೈಯ್ದೆ ಬೆಂ ।
ಬಲವಾತಂಗೆ ಜಡಾತ್ಮನೊರ್ವ್ವನಿಸಿತುಂ ನಿಸ್ಸಾರಮಾಗಿರ್ದ್ದೊಡಂ ॥
ಬಲವದ್ದೋರ್ವಲಮಾತ್ರದಿಂದೆ ಮದನಂ ಮೂಲೋಕಮಂ ಗೆಲ್ದಪಂ ।
ಕಲಿ ತಾನಾಗೆ ಸಹಾಯಮಂ ಬಗೆವನೇ? ಶ್ರೀ ಚೆಲ್ವ ॥ ೨೪

ಬನದೊಳ್ ಗರ್ಜಿಸಿ ಬರ್ಪ್ಪ ಪೆರ್ಬ್ಬುಲಿಗಳಂ ಸನ್ನಾಹದಿಂ ಸೀಳ್ದಪರ್ ।
ಪೊನಲೊಳ್ ಪೊಕ್ಕ ಕರಾಳನಕ್ರತತಿಯಂ ಕೈಗಾಂತು ತಂದಪ್ಪರಂ ॥
ತನುವಿಂದಾಗಸಕೇಳ್ವ ಪಕ್ಷಿಚಯಮಂ ಸಾಧಿಪ್ಪರಾರಯ್ಯೆ ಮೇ ।
ದಿನಿಯೊಳ್ ಸಾಹಸಿಕರ್ಗ್ಗದಾವುದರಿದೈ ? ಶ್ರೀ ಚೆಲ್ವ ॥ ೨೫

ಧರೆಯೊಳ್ ನಿದ್ರಿಪರೊರ್ಮೆಯೊರ್ಮೆ ಪಡುವರ್ ಪರ್ಯಂಕದೊಳ್ ಶಾಖೆಯುಂ
ತಿರಿತಂದುಣ್ಬರದೊರ್ಮೆಯೊರ್ಮೆ ಸುಖದಿಂಮೃಷ್ಟಾನ್ನಮಂ ಭುಂಜಿಪರ್॥
ಧರಿಪರ್ ಕಂಥೆಯನೊರ್ಮೆಯೊರ್ಮೆ ತಳೆವರ್ ಕೌಶೇಯಮಂ ಕಾರ್ಯತ
ತ್ಪರರೇಂ ದುಃಖಸುಖಂಗಳಂ ಬಗೆವರೇ ? ಶ್ರೀ ಚೆಲ್ವ ॥ ೨೬

## ಧನಪ್ರಶಂಸನಂ.

ಪುರುಹೂತಪ್ರಮುಖಾಮರೇಂದ್ರರಸಿಬರ್ ತ್ರೈಲೋಕ್ಯವಿಖ್ಯಾತರಾ ।
ಗಿರೆಯುಂ, ಪೊನ್ನುಡೆಯುಟ್ಟು ಸಿಂದ ಹರಿಯುಂ,ಪೊಂಬೆಟ್ಟಮಂ ತಾಳ್ದಶಂ॥

ಕರನುಂ, ಪೊಂಬಸಿರಾಂತ ಪದ್ಮಭವನೆಂಬೀಮೂವರೇ ಪೂಜ್ಯರಾ ।
ಗಿರೆ ಪೊನ್ನುಳ್ಳರೆ ಪೂಜ್ಯರಲ್ತೆ ಧರೆಯೊಳ್! ಶ್ರೀ ಚೆಲ್ವ ॥ ೨೭

ವರವಿದ್ಯಾಬಲಮಂ ಕುಲೋನ್ನತಿಯುಮಂ ಸೌಶೀಲ್ಯಮಂ ನೋಡದೈ ।
ಸಿರಿಯೊಂದಿದ್ದೊಡೆ ಸರ್ವರುಂ ತಮಗೆ ತಾವೊಲ್ದೈದುವರ್ ಗಂಗೆಯಂ॥
ಶಿರದೊಳ್ ತಾಳ್ದೊಡಮೀಶನಂ ತೊರೆದವಳ್ ರತ್ನಾಕರಕ್ಕೆಯ್ದುವಳ್ ।
ಸಿರಿಯೊಳ್ ಸರ್ವಜನಾನುರಾಗವೊಗೆಗುಂ ಶ್ರೀ ಚೆಲ್ವ॥ ೨೮

ನರರೂಪಂದೊರೆದಿಕ್ಕೆ! ವಂಚಿಸುಗೆ ಮೇಣ್ ಧರ್ಮಕ್ರಿಯಾಭಿಜ್ಞರಂ।
ತರಿದುಂ ತಾಯ್ತಲೆಯಂ, ಪರಿತ್ಯಜಿಸಿಯುಂ ಗರ್ಭಾಢ್ಯೆಯಂ ಪತ್ನಿಯಂ ॥
ಸುರೆಯಂ ಸೇವಿಸಿ, ಜಾರನಾಗಿ, ಜನರಂ ಕೊಲ್ಲುತ್ತಮೆಂತಿರ್ದೊಡೇಂ ।
ಸಿರಿಯಾಣ್ಮಂ ಸಲೆ ಸೇವ್ಯನಲ್ತೆ! ಧರೆಯೊಳ್ ಶ್ರೀ ಚೆಲ್ವ ॥ ೨೯

## ದಾರಿದ್ರ್ಯಂ.

ಶಮಮಂ ಮೆಟ್ಟಿ ಸುಶೀಲಮಂ ಸದೆದು ಮೇಣ್ ಸೌಜನ್ಯಮಂ ನೀಗಿ ಮಾ।
ನಮನೀಡಾಡಿ ಸುಖಂಗಳಂ ತೊಲಗಿಸುತ್ತಾನಂದಮಂ ತೂಳ್ದಿ ಧೈ ॥
ರ್ಯಮನಟ್ಟುತ್ತುರೆ ತೇಜಮಂ ತವಿಸಿ ನಾಣಂ ಕೀಳ್ವ ದಾರಿದ್ರ್ಯದಿಂ ।
ದಮೆ ಸರ್ವೋತ್ತಮಸದ್ಗುಣಂಗಳಳಿಗುಂ! ಶ್ರೀ ಚೆಲ್ವ ॥ ೩೦

ಎಡೆಯೊಳ್ ಶುಷ್ಕಸರಂಗಳಿರ್ದೊಡಮವಂ ಕಣ್ಣೆತ್ತಿಯುಂ ನೋಳ್ಪುದಿ ।
ಲ್ಲೊಡನೆಯ್ದುತ್ತೆ ತುಳುಂಕಿ ತೇಲ್ವ ಕಡಲೊಳ್ಬೀಳ್ಗುಂ ನದೀಸಂಘಮೆಂ॥
ದೊಡೆ ಪೇರ್ಸಿರಿಯಿಂದಮುಬ್ಬಿದ ಮಹಾಭಾಗ್ಯೋನ್ನತರ್ಗಲ್ಲದೀ ।
ಬಡವರ್ಗೆತ್ತಣ ಭಾಗ್ಯಮೈ? ಯದುಗಿರಿ ಶ್ರೀ ಚೆಲ್ವ ॥ ೩೧

ಕಡೆದಾಗಳ್ ಕಡಲಿತ್ತನಾ ಹರಿಗೆ ಕನ್ಯಾರತ್ನಮಂ ರತ್ನಮಂ ।
ಪಡೆದಿತ್ತಂ ಸುಧೆಯಂ ಸುರದ್ರುಮಮುಮಂ ದೇವಾಧಿಪಗ್ಗೊಲ್ಮೆಯಿಂ॥
ಸುಡಲೆಯ್ತರ್ಪ ವಿಷಕ್ಕೆ ಭಿಕ್ಷುವೆ ವಲಂ ತಾಂ ಭಾಗಿಯಾದಂ ಗಡಾ ।
ಬಡವಂಗುತ್ತಮವಸ್ತುವಂ ಕುಡುವರಾರ್ ? ಶ್ರೀ ಚೆಲ್ವ ॥ ೩೨

ಕಡುಪಿಂ ಕಾಡೊಳಗುಣ್ಮಿ ಪೊಣ್ಮಿದನನಲಂಗುದ್ರೇಕಮಂ ಮಾಡಿ ಬೆಂ।
ಬಿಡದೆಯ್ತಂದೊಡನಾಡಿಯಾಗಿ ಪವನಂ ಸಾಹಾಯ್ಯಮಂ ಮಾಡುಗುಂ॥
ಸೊಡರೊಳ್ ಮತ್ತದೆ ವಹ್ನಿ ಕಾರ್ಶ್ಯದಿನಿರಲ್ ತಾಂ ನಂದಿಪಂ ಬೇಗದಿಂ।
ಬಡವಂಗೆತ್ತಣ ಮಿತ್ರನೈ? ಯದುಗಿರಿ ಶ್ರೀ ಚೆಲ್ವ ॥ ೩೩

ತನಗಾಯ್ತೈವೊಗಮೆಂದು ತಾನೆ ತಿರಿತಂದುಣ್ಬಾ ಹರಂಗೊರ್ವೊದಲ್।
ತನಯಂ ಪುಟ್ಟಿದನೊರ್ವನಾನೆಮೊಗದಿಂ ಮತ್ತೊರ್ವ್ವನಾದಂ ಷಡಾ ॥
ನನದಿಂ, ಚಂಡಿಕೆಯಾದಳಾತ್ಮಸತಿಯುಂ, ತಾನೆಂದೊಡೇವೇಳ್ವೆನಾಂ ।
ಧನಹೀನರ್ಗ್ಗೆ ಕುಟುಂಬಕಷ್ಟಮಮಿತಂ ಶ್ರೀ ಚೆಲ್ವ ॥ ೩೪

ಗುಣಸಂದೋಹನಿಯುಕ್ತಮಾದೊಡಮಧಃಪಾತಕ್ಕೆ ಪಕ್ಕಾಗಿ ತಾಂ ।
ಮಣಿಗುಂ ಕೂಪದೊಳಲ್ತೆ! ರಿಕ್ತದಶೆಯಂ ತಾಳ್ದಿರ್ದ್ದ ಕುಂಭವ್ರಜಂ ॥
ಗುಣಮಂಮಾಣ್ದೊಡಮೇಂಸುಪೂರ್ಣಕಲಶಂನಿಲ್ಕುಂಶಿರೋಭಾಗದೊಳ್
ಗುಣಮಂ ಲೆಕ್ಕಿಪರಾರೊ! ರಿಕ್ತರೆಡೆಯೊಳ್ ಶ್ರೀ ಚೆಲ್ವ ॥ ೩೫

ಧನಹೀನಂ ಧೃತಿಹೀನನಪ್ಪನದರಿಂದಕ್ಕುಂ ತಿರಸ್ಕಾರಮುಂ ।
ಜನರಿಂದಂ ಪರಿಭೂತನಾಗೆ ಮನದೊಳ್ ನಿರ್ವೇದಮಂ ಪೊಂದುಗುಂ ॥
ಮನಮುದ್ವಿಗ್ನಮದಾಗೆ ಶೋಕಮದರಿಂ ಬುದ್ಧಿಭ್ರಮಂ ಬುದ್ಧಿನಾ ।
ಶನದಿಂ ನಾಶಮೆ ನಿರ್ಧನಂಗಹುದೆಲೈ ! ಶ್ರೀ ಚೆಲ್ವ ॥ ೩೬

## ಸಜ್ಜನ ದಾರಿದ್ರ್ಯಂ.

ಧುರದೊಳ್ ಮೃತ್ಯುವನಾಂಪನೆಂಬಭಯದಿಂತಾಂ ಸೇರಿರಳ್ ಶೂರರೊಳ್
ಪೆರರ್ಗೀಡಾಗಿಪನೆಂದು ನಾಣ್ಚಿ ಬಿಡುವಳ್! ವೈಮುಖ್ಯದಿಂ ದಾನಿಯಂ ॥
ನೆರೆಯಳ್ ಪಂಡಿತರಂ ಸರಸ್ವತಿಯೊಳಾ ಸಾಪತ್ನ್ಯವಿದ್ವೇಷದಿಂ ।
ಸಿರಿ ನಿಲ್ವಳ್ ನೆರೆ ಲುಬ್ಧರೊಳ್ ಯದುಗಿರಿ ಶ್ರೀ ಚೆಲ್ವ॥ ೩೭

ಕುಲಮುಂ ದೋರ್ಬಲಮುಂ ಕಲಾವಿಭವಮುಂ ಕೌಶಲ್ಯಮೆಂಬೊಳ್ಗುಣಂ।
ಗಳನೆಲ್ಲಂ ನೆರೆ ನೋಡಿ ದುರ್ಗತಿಯೆನಿಪ್ಪಾ ಕನ್ನೆಯಂ ಮತ್ತವ ॥

ಗೊರ್ಲಿದೀವಂ ವಿಧಿಯೆಂದೆನಲ್ ಪಳಿಯಲೇಕಿನ್ನಾತನಂ ಸದ್ಗುಣಾ ।
ವಳಿಯಂ ನೋಡದೆ ಕನ್ನೆಯಂ ಕುಡುವರಾರ್? ಶ್ರೀ ಚೆಲ್ವ ॥ ೩೮

## ಔದಾರ್ಯಂ.

ಕಡಿದಿತ್ತಂ ನಿಜದೇಹಮಂ ಶಿಬಿನೃಪಂ, ಜೀಮೂತವಾಹಾಖ್ಯನುಂ ।
ದಿಡದಿಂ ಜೀವವನಿತ್ತನಸ್ಥಿಯನೆ ತಾಂ ಕೊಟ್ಟಂ ದಧೀಚಿದ್ವಿಜಂ ॥
ಪಡಿವಾತೇಂ ನಿಜಚರ್ಮಮಂ ಸುಲಿದು ಕೊಟ್ಟಂ ಕರ್ಣನಿಂದ್ರಂಗೆನಲ್ ।
ಕುಡುವಗ್ಗಾರ್ಗವುದದೇಯಮೈ ? ಯದುಗಿರಿ ಶ್ರೀ ಚೆಲ್ವ ॥ ೩೯

ಪಸಿದಗ್ಗಿರ್ೀವೊಡೆ ಪಣ್ಗಳಿಲ್ಲ! ಬಿಸಿಲೊಳ್ ಬಂದಗ್ಗೆರ್ ಸಂತಾಪವಾ ।
ರಿಸೆ ಸಚ್ಛಾಯೆಯುಮಿಲ್ಲ ! ಸೂಡೆ ಸುಮಮಿಲ್ಲಿಂತಾದೊಡಂ ನಾಗವ ॥
ಲ್ಲಿ ಸಮಸ್ತಾವನಿಯಂ ಸ್ವಪರ್ಣದೊಳೆ ತಾಂ ಸಂತೋಷಿಪಂತಿತ್ತುತೋ!।
ಷಿಸಲೇನಿದ್ದುರ್ದೆ ಕಾಲಬೇ ? ಯದುಗಿರಿ ಶ್ರೀ ಚೆಲ್ವ ॥ ೪೦

ಗಿಡದೊಳ್ ಪಣ್ಗಳನಾನಲರ್ಥಿಪರದಾರ್ ದೈನ್ಯೋಕ್ತಿಯಿಂ ? ಜೀವನಂ ।
ಬಡೆಯಲ್ ಜೇಳ್ಪರಬಾರೊ ಪೇಳ್ ಜಲಧರವ್ರಾತಂಗಳಂ? ಕಾಂತಿಯುಂ ॥
ಕುಡಲೇನರ್ಥಿಗಳರ್ಥನಾವಚನಮಂ ಕೈಕೊಳ್ವನೇ ಭಾಸ್ಕರಂ? ।
ಕುಡುವರ್ ಕೇಳಿಸಿಕೊಳ್ವರೇ? ಯದುಗಿರಿ ಶ್ರೀ ಚೆಲ್ವ ॥ ೪೧

ತವೆ ಘೋರಾರವದಿಂದೆ ತನ್ನೊಳುಲಿಗುಂ ಕಾಕಾಳಿ ಮೇಣ್ ಕೋಕಿಲಂ।
ಕಿವಿಗಿಂಪಾಗಿರೆ ಪಾಡುಗುಂ, ಕಪಿಗಳುಂ ಕಿಳ್ತಿಕ್ಕುಗುಂ ಶಾಖೆಯಂ ॥
ಇವರೊಳ್ ತಾಂ ಸಮದೃಷ್ಟಿಯಿಂದೆ ಫಲಮೀಗುಂಚೂತಮೌದಾರ್ಯಮು।
ಳ್ಳವರೀಂವಂದರಿಮಿತ್ರಭಾವವೆಣಿಸರ್ ಶ್ರೀ ಚೆಲ್ವ ॥ ೪೨

ರಸೆಗೊಳ್ಜೀವನಮೀವ ಮೇಘಕೆ ನಿಜಕ್ಷಾರಂಬುವಂ ಕೊಟ್ಟು ಸಂ ।
ತಸದಿಂ ಪೋಷಿಪ ವಾರ್ಧಿಯೊಳ್ ಸುಮಧುರಸ್ರೋತಸ್ಸಮೂಹಂಗಳೆ ॥
ಣ್ದೆಸೆಯಿಂ ಬಂದಡರ್ವಂತೆ ಪಾತ್ರದೊಳಣಂ ತನ್ನುಳ್ಳುದಂ ಸಾರ್ಚಲೆ ।
ಣ್ದೆಸೆಯಿಂದೈಸಿರಿ ಸೇರಿ ಬಪ್ಪುದು ವಲಂ! ಶ್ರೀ ಚೆಲ್ವ ॥ ೪೩

## ಕಾರ್ಪಣ್ಯಂ.

ನೆರೆ ತೃಷ್ಣಾತುರನಾಗಿ ಬಂದು, ಕೆರೆಲುದ್ಧಂ ನೀರೊಳಾಳ್ದುಂ ಶುನಂ ।
ಬರೆ ಪೀರಲ್ಕಳವಿಲ್ಲದಂತೆ ಜಲಮಂ ಜಿಹ್ವಾಗ್ರದಿಂ ನೆಕ್ಕುಗುಂ ॥
ಕೆರೆಗಳ್ ತುಂಬಿ ತುಳುಂಕೆ ಕಾಕನಿವಹಂ ಕುಂಭೋದಮಂ ಪೀರ್ಗುಮೈ।
ಸಿರಿಯಿದ್ದೇನ್? ಕೃಪಣರ್ಕಳುಂಡರಿವರೇ ? ಶ್ರೀ ಚೆಲ್ವ ॥ ೪೪

ಹರಿ ದೈವಂ ತಮಗೆಂದು, ಮತ್ತೆ ಹರನೆಂದುಂ, ಶಕ್ತಿಯೆಂದುಂ, ಜಿನೇ ।
ಶ್ವರನೆಂದುಂ ಜನರೊಲ್ದು ಭಾವಿಸುತಿರಲ್ ತಮ್ಮಿಷ್ಟದೈವಂಗಳಂ ॥
ಪರದೈವಂ ಧನವೊಂದೆ! ಲೋಭನಿಚಿತಸ್ವಾಂತಗ್ಗೆ!ಮೇಣ್ ಸ್ವೋದರಂ।
ಭರಿಗಾತ್ಮೋದರವೊಂದೆ ದೈವಮಿಳೆಯೊಳ್! ಶ್ರೀ ಚೆಲ್ವ ॥ ೪೫

ಪನೆಗಳ್ ಕ್ರೂರವಿಷಾಢ್ಯಮಾಗೆ ಫಣಿಯೊಳ್ ಸದ್ರತ್ನಮಿದ್ದೇನ್?ಜನ ।
ಗ್ಗೆನಿಸುಂ ಸ್ವಾದ್ಯಮದಲ್ಲದಿರ್ಪ್ಪ ಕಡಲೊಳ್ ತಣ್ಣೀರೆನಿತ್ತಿರ್ದೊಡೇಂ॥
ಘನವಿದ್ಯಾತಿಶಯಂ ಪೊದಳ್ದು ಫಲಮೇಂ ನೀಡುಂ ಸಭಾಭೀರುವೊಳ್? ।
ಧನಮಿರ್ದೇನತಿಲುಬ್ಧರೊಳ್? ಯದುಗಿರಿ ಶ್ರೀ ಚೆಲ್ವ॥ ೪೬

## ಧನಗರ್ಹಣಂ.

ಧನಲುಬ್ಧರ್ ಬಹು ದೈನ್ಯದಿಂದೆ ಬಳಲ್ವರ್ ತತ್ಸಂಗ್ರಹೋದ್ಯೋಗದೊಳ್।
ಧನಿಕರ್ ಸ್ವೀಯಧನಪ್ರಣಾಶಭಯದಿಂ ಬೇವರ್ ದಿವಾರಾತ್ರಮುಂ ॥
ಧನನಾಶಂ ತಮಗಾಗೆ ನಷ್ಟಧನರುಂ ಶೋಕಿಪ್ಪರಾಜೀವಮುಂ ।
ಧನಮೆಂದುಂ ನೆರೆ ದುಃಖಹೇತುವೆ ವಲಂ! ಶ್ರೀ ಚೆಲ್ವ ॥ ೪೭

ಇದೆ ತಾನದ್ಭುತಮದ್ಭುತಂ! ಕನಕಮೆಂಬಾಖ್ಯಾತಿಯಂ ತಾಳ್ದ ಮಾ ।
ತ್ರದೆ ತನ್ನಂ ಪಡೆದುಣ್ಬವರ್ಗ್ಗೆ ಪುದಿದೊಂದುನ್ಮಾದಮಂ ಬೀರುತಿ ॥
ರ್ಪ್ಪುದು ದುತ್ತೂರಕುಜವ್ರಜಂಗಳೆನೆ ಮತ್ತಾರಯ್ವೊಡಿನ್ನಾಸುವ ।
ರ್ಣದ ಮಾಹಾತ್ಮ್ಯಮದೆಂತುಟೋ ! ಯದುಗಿರಿ ಶ್ರೀ ಚೆಲ್ವ ॥ ೪೮

ನಿರುತಂ ಮತ್ತತೆ, ನಂಟರೊಳ್ ಪರಿಭವಂ, ನಿಷ್ಕಾರಣಕ್ರೋಧಮುಂ ।
ನೆರೆ ದುರ್ಮಾನಮನಾದರಂ ಗುರುವೊಳೌದಾಸೀನ್ಯಮುಂಮಾನ್ಯರೊಳ್॥
ಪಿರಿದುಂ ಲುಬ್ಧತೆ, ಪೆರ್ಚಿದಾಶೆ, ಪರದಾರಾಸಕ್ತಿ, ದುರ್ವೃತ್ತಿಯೈ ।
ಸಿರಿಯುಳ್ಳರ್ಗಿವು ಸಾಜಮೈ! ಯದುಗಿರಿ ಶ್ರೀ ಚೆಲ್ವ ॥ ೪೯

## ದುಷ್ಪ್ರಭುಗಳ್.

ಧರೆಯಂ ಪುಟ್ಟಿಸಿದಾತನೊರ್ವನದನಾಂತಿರ್ಪಾತನೊರ್ವಂ ಕರಂ ।
ಪೊರೆವಾತಂ ಪೆರನೊರ್ವನಿಂತವರವರ್ ಸ್ವಸ್ವಾಧಿಕಾರಂಗಳಾಂ ॥
ತಿರೆ, ತತ್ಕೋಟಿಕಲಾಂಶಮಾತ್ರಕೊಡೆಯರ್ ತಾಮೆಂಬ ದುರ್ಭಾವದಿಂ ।
ದೊರೆಗಳ್ ದುರ್ಮದದಿಂದೆ ಬೀಗಿ ಬೆರೆವರ್ ಶ್ರೀ ಚೆಲ್ವ ॥ ೫೦

ಸಿತಸೌಧಾಗ್ರದೊಳೊರ್ಮೆ ನಿಂದು ನಲಿಯಲ್ ಕಾಕಾಳಿ ತನ್ಮಾತ್ರದಿಂ ।
ಕ್ಷಿತಿಯೊಳ್ ಸರ್ವಖಗೇಂದ್ರನೆಂದೆನಿವುದೇ ? ನೀಚಾತ್ಮರಿಂತೊರ್ಮೆ ಪೂ ॥
ಜ್ಯತೆಯೊಂದಿಲ್ಲದೆ ಪಕ್ಷಪಾತಬಲದಿಂ ತಾಮೆಯ್ದಿದೊಂದುನ್ನತ ।
ಸ್ಥಿತಿಯಿಂದುತ್ತಮರಪ್ಪರೇ? ಯದುಗಿರಿ ಶ್ರೀ ಚೆಲ್ವ ॥ ೫೧

ಅಧಿಕಾರಂ ಸಿರಿ ಮತ್ತೆ ಯೌವನಮೆನಿಪ್ಪೀ ಸನ್ನಿಪಾತಂ ಖಲಂ ।
ಗೊದವಲ್ ಕರ್ಣಮದಿರ್ದೊಡಂ,ಬಧಿರನುಂ,ಕಣ್ಣಿರ್ದುಮಂಧಂ,ಸುವಾ॥
ಗ್ವಿಧುರಂ ನಾಲಗೆಯಿರ್ದುಮೆಂದೆನಲವಂಗೀ ವ್ಯಾಧಿಯುಂ ನೀಗಿಸಲ್।
ವಿಧಿಯಾವೌಷಧಮಂ ನಿಮಿರ್ಚಿದನೊ! ಪೇಳ್ ಶ್ರೀಚೆಲ್ವ ॥ ೫೨

ನಿಜವಕ್ತ್ರಾಗ್ರದೆ ಪಿಂಡಮೀವವರೆಗಂ ನೀಡುಂ ಮೃದುಸ್ವಾನಮಂ ।
ನಿಜದಿಂ ತೋರುತದಿಲ್ಲದಿರ್ದೊಡೆ ಕಟುಧ್ವಾನಂಗಳಿಂದಂ ಜನ ॥
ವ್ರಜಮಂ ಬೆರ್ಚಿಸುತಿರ್ಪ ದುಷ್ಪ್ರಭುಗಳಾರಯ್ಯಲ್ ಮೃದಂಗಕ್ಕೆ ಪೂ
ರ್ವಜರೋ ? ಮೇಣನುಜಾತರೋ ? ತಿಳಿಯೆನಾಂ ಶ್ರೀ ಚೆಲ್ವ ॥ ೫೩




657. ಸತ್ರಯಾಗದಲ್ಲಿ ದೇವತೆಗಳು ದಕ್ಷನನ್ನು ಗೌರವದಿಂದ ಬರಮಾಡಿಕೊಂಡು ನಮಸ್ಕರಿಸಿದಾಗಲೂ, ಶಿವನುಮಾತ್ರ ತನ್ನನ್ನು ಗೌರವಿಸದಿದ್ದುದಕ್ಕಾಗಿ ದಕ್ಷನು ಅವನನ್ನು ಧಿಕ್ಕರಿಸಿದುದು.

## ರಾಜಾಶ್ರಯಗರ್ಹಣಂ.

ತರುಮೂಲಂ ನೆಲೆಯಾಗೆ, ತಣ್ಣೆಳದಳಿರ್ಮೆಲ್ವಾಸೆ ಪರ್ಯಂಕಮಾ |
ಗಿರೆ, ಪಾಕಂಗೊಳೆ ತಾನೆ ಬೀಳ್ವ ಫಲಮಂ ಕೈಕೊಂಡು,ನೀರಳ್ಕೆಯಿಂ ||
ತೊರೆಯೊಳ್ ತೀರ್ಚುತೆ ಸಂತಸಂಬಡದೆ ತಾನೈಶ್ವರ್ಯದಿಂದುಬ್ಬಿದಾ |
ದುರಹಂಕಾರಿಗಳಲ್ಲಿ ದೈನ್ಯವಡಲೇಂ? ಶ್ರೀ ಚೆಲ್ವ || ೫೪

ಗರಳೋಗ್ರಾಹಿ ವಧೂಮುಖಾಗ್ರಮನಲಂಪಿಂದೆತ್ತಿ ಮುತ್ತಿಕ್ಕುವಂ |
ತಿರೆ, ಖಡ್ಗಾಗ್ರದ ಜೇನ್ಗೆ ನಾಲಗೆಯನಿಕ್ಕುತ್ತಾಸೆಯಿಂ ನಕ್ಕುವಂ |
ತಿರೆ, ಮೇಣ್ ಪೆರ್ವಸಿವಾಂತ ಪೆಣ್ಬುಲಿಗಳಂ ತಳ್ತಪ್ಪಿಕೊಳ್ವಂತೆವೊಲ್ |
ಧರೆಯೊಳ್ ದುಷ್ಪ್ರಭುಸೇವೆ ಕಷ್ಟಮೆ ವಲಂ| ಶ್ರೀ ಚೆಲ್ವ || ೫೫

"ಎಲೆ!ನೀಂಚಂದ್ರನುಪೇಂದ್ರನಿಂದ್ರ"ನೆನುತಂಮಿಥ್ಯಾಸ್ತವಾರಂಭದೊಳ್ |
ಖಲಭೂಪರ್ಕಳ ಮುಂದೆ ನಿಂದು ಕವಿಗಳ್ ಮಿಥ್ಯೋಕ್ತಿಯಂ ಪೇಳೆ ತ||
ತ್ಫಲರೂಪಂ ತಮಗಾವಗಂ ಬಡತನಂ ಬೆನ್ನೀರಿರಲ್ಕೀಯ್ತದಾ |
ಯಿಳೆಯಾಣ್ಮರ್ಕಳ ಲಾಭ್ಯಮಂ ಪಳಿಯಲೇಂ ಶ್ರೀ ಚೆಲ್ವ || ೫೬

## ಬಂಧುಸ್ವಭಾವಂ.

ಸಿರಿಯೇ ತನ್ನೊಡವುಟ್ಟಿದಾಕೆ| ಜನಕಂ ರತ್ನಾಕರಂ! ಮೇಣ್ ಸಹೋ |
ದರರಾ ಸ್ವರ್ದ್ರುಗಳಾಗಿಯುಂ, ಪ್ರತಿಗೃಹದ್ವಾರಂಗಳೊಳ್ ಗೋಳಿಡು ||
ತ್ತೆರೆಗುಂ ಭಿಕ್ಷೆಯನಲ್ತೆ*ಶಂಖತತಿಯಿನ್ನಾರಿದ್ದೊಡೇನಪ್ಪುದೈ |
ಸಿರಿ ಸೇರ್ಗುಂ ನಿಜಪೂರ್ವಪುಣ್ಯವಶದಿಂ ಶ್ರೀ ಚೆಲ್ವ || ೫೭

ಮಗನೇ ಮೃತ್ಯು ಹಿರಣ್ಯಕಂಗೆ ! ಪಿತನೇ ದ್ವೇಷ್ಯಂ ಶುನಶ್ಶೇಫನೊ |
ನುಗೆ!ಮೇಣ್ ಮಾವನೆ ವೈರಿಯಿಂದುಗೆ! ಗಿರೀಶಂ ವೈರಿ ಮಾವಂಗೆ!ವಾ ||
ಲಿಗೆ ನೈಜಾನುಜನೇ ವಿರೋಧಿಯೆನಿಸಲ್ತಂತಮ್ಮ ದುಷ್ಕರ್ಮಬಂ |
ಧಗಳೊಳ್ಬಂಧುಗಳೇ ವಿರೋಧಿಗಳಲಾ ! ಶ್ರೀ ಚೆಲ್ವ || ೫೮

ಉರಗಂ ಸಾರ್ದುದು! ಪಕ್ಕಿಪಾರಿದುದಳಿಲ್ಬಿಟ್ಟೋಡಿಪೋದತ್ತು!ಮೇಣ್|
ಗರಿಯೆತ್ತಿತ್ತು ಶುಕಾಳಿ! ಸಾರ್ದುವಳಿಗಳ್ಪಾರಾವತಂ ಪೋದುದಾ |
ತರುಮೂಲಕ್ಕುರಿ ಸೋಂಕಲುಂಡುದಣಿದುಂಕೈಬಿಟ್ಟುಪೋದಂತೆವೋಲ್|
ನೆರೆ ಕಷ್ಟಂ ಬರಲೆನ್ನರುಂ ತೊರೆವರ್ಕೈ!ಶ್ರೀ ಚೆಲ್ವ || ೫೯

ಸಿರಿಯಿಂ ಶೌರಿಯುಮೀಶನಿಂದುಕಲೆಯಿಂ, ಪೀಯೂಷದಿಂದಂ ಸುರರ್ |
ಹರಿ ಕಲ್ಪದ್ರುಮದಿಂದೆ ತುಷ್ಟಿವಡೆದುಂ ವಾರಾಶಿಯೊಳ್, ಮತ್ತದಂ||
ಭರದಿಂ ಕುಂಭಜನೀಂಟಬಾಗಳವನಂ ಮಾಣೆಂದರಿಲ್ಲೊರ್ವರುಂ |
ನೆರೆ ಕಷ್ಟಂ ಬರಲಾಪ್ತರುಂ ತೊರೆವರ್ಕೈ ಶ್ರೀ ಚೆಲ್ವ || ೬೦

## ಕುಲಮದಗರ್ಹಣಂ.

ಕೆಸರೊಳ್ ಪುಟ್ಟಿ ಸುಗಂಧಮಂ ಪಡೆಯದೇನಬ್ಜವ್ರಜಂ? ಪಾಲ್ಗಡ |
ಲ್ಬಸಿರೊಳ್ಪುಟ್ಟಿದ ಮಾತ್ರದಿಂದೆವಿಷಮೇನಾಸ್ವಾದ್ಯಮೇಲೋಕದೊಳ್?
ಮಸೆದಾಚಂದನದಿಂದಮೆಳ್ದನಲನೇಂ ತಣ್ಪೇವುದೇ? ಪುಟ್ಟಿಬ್ಬಾ |
ಬಸಿರಿಂಬಾಂಪರೆ ಪೇಳ್ ಗುಣಾವಗುಣಮಂ? ಶ್ರೀ ಚೆಲ್ವ || ೬೧

ಕುಲದೊಳ್ಪುಟ್ಟಿದ ಬಾಲನೊರ್ವನಡಿಯಿಂ ಸೋಂಕುತ್ತೆ ಪೆಣ್ಮಾಡಿದಂ |
ಶಿಲೆಯೊಂದಂ, ಕುಲನಾಥನಾದ ದಿನಪಂ ಸರ್ವಾಶ್ಮಸಂಜಾತಮಂ ||
ತುಳಿವಂ ಪಾದಸಹಸ್ರದಿಂದನುದಿನಂ ಪೆಣ್ಗೆಯ್ದನಿಲ್ಲಾವುದಂ! |
ಕುಲದಿಂದೇಂ? ನಿಜಶಕ್ತಿಯಿಂದೆ ನೆಗಳ್ವರ್ ಶ್ರೀ ಚೆಲ್ವ || ೬೨

ಪಲವಾನುಂ ಸೊರೆವಣ್ಗಳೊಂದೆತರುವೊಳ್ ಪುಟ್ಟಿರ್ದೊಡಂ! ದೈನ್ಯದಿಂ
ದಲೆಗುಂ ಭಿಕ್ಷೆಯನಾನಲೊಂದು! ಸರಸಸ್ವಾನಂಗಳಂ ಗೆಯ್ವುದೊಂದೊ||
ಲವಿಂಮದ್ಯವ ಪೀವ್ರುದೊಂದು!ಕಡಲಂ ದಾಂಟಿಪ್ಪುದೊಂದಾದವೊಲ್
ಕುಲವೊಂದಾದೊಡೆ ಶೀಲವೊಂದೆನಿಪುದೇ?ಶ್ರೀ ಚೆಲ್ವ|| ೬೩

## ಸ್ಥಾನ ಮಹಾತ್ಮ್ಯಂ.

ಾನೋದ್ದಂಡ ವಿಶಾಲಗಂಡ ವನವೇತಂಡಂಗಳಂ ನೀರೊಳಾ ।
ಸ್ಥಾ ನಕ್ರಂ ಸೆಳೆದುಯ್ದು ಮಂತದೆ ಜಲಂಬಿಟ್ಟಾ ನೆಲಕ್ಕೈಯ್ದಿರಲ್ ॥
ಶ್ವಾನಂ ಕಚ್ಚುರ್ತಲತ್ತಲಿತ್ತಲೆಳೆದೀದಾಡುತ್ತಮಿರ್ಕ್ಕುಂ! ನಿಜ ।
ಸ್ಥಾನಭ್ರಂಶಮೆ ನಾಶಮಲ್ತೆ ಧರೆಯೊಳ್ ಶ್ರೀ ಚೆಲ್ವ ॥ ೬೪

ಪಡೆಗುಂ ಕ್ಷಾರತೆಯಂ ಪಯೋದಸಲಿಲಂ ವಾರಾಶಿಯೊಳ್ ಬೀಳೆ, ಪಾ ।
ಲ್ಗಡಲೊಳ್ ಬಿಳ್ದೊಡೆ ಪಾಲೆನಿಪ್ಪುದದೆ ತಾಂ,ಮುಕ್ತಾಫಲಂಶುಕ್ತಿಯೊಳ್
ಕಿಡೆ ಸಪ್ತಚ್ಛದಪರ್ಣದೊಳ್ ಜಲಮದೇ ಕರ್ಪೂರಮಪ್ಪಂತೆವೋಲ್ ।
ಪಡೆವರ್ ಸ್ಥಾನವಿಶೇಷದಿಂ ಮಹಿಮೆಯಂ, ಶ್ರೀ ಚೆಲ್ವ ॥ ೬೫

ಲನೊಳ್‌ಪೇಳ್ದ ರಹಸ್ಯವಾರ್ತೆಯೆಲರೊಳ್ಪೊಳ್ದಿಟ್ಟಸೌಗಂಧ್ಯಮುಂ ।
ಸಲೆ ಸತ್ಪಾತ್ರದೊಳಿತ್ತ ದಾನಮುಮಣಂ ಸಚ್ಛಿಷ್ಯನೊಳ್ಪೇಳ್ದ ಸ ॥
ತ್ಕಲೆಯಂಬಿಂತಿವು ನೀಡುಮಲ್ಪಮೆನಿಸಿದ್ದುಂ ಪಾತ್ರಮಾಹಾತ್ಮ್ಯದಿಂ ।
ಜಲದೊಳ್ ತೈಲದ ಬಿಂದುವಂತೆ ಪರಿಗುಂ! ಶ್ರೀ ಚೆಲ್ವ ॥ ೬೬

## ಐಕಮತ್ಯಂ.

ಕ್ಷಣವೊಂದಾಗೆ ಪಿಪೀಲಿಕಾನಿವಹಮುಂ ಕಾಳಾಹಿಯಂ ಭಕ್ಷಿಕುಂ
ತೃಣಸಂದೋಹಮೆ ರಜ್ಜುವಾಗಿ ತಡೆಗುಂ ಮತ್ತೇಭಮಂ, ಮೇಣ್ ಪಯಃ॥
ಕಣವೊಂದಾಗಿ ಪಯೋಧಿಯೆಂದೆನಿಸುಗುಂ ತಂತವ್ಮೊಳನ್ಯೋನ್ಯದಿಂ ।
ಕೊಣೆಗೊಂಡಿರ್ಪ್ಪ ನರರ್ಗ್ಗದಾವುದರಿದೈ! ಶ್ರೀ ಚೆಲ್ವ ॥ ೬೭

ಜದಿಂದಿದ್ದನುಜಾತನೊಳ್ ಮುಳಿದು ನಾಶಂಗೊಂಡನಾ ವಾಲಿ! ಧ ।
ರ್ಮಜನೊಳ್ ವೈರವನಾಂತು ಮೃತ್ಯುವಶನಾದಂ ಕೌರವಂ!ಮೇಣ್ಪುಲ॥
ಸ್ತ್ಯಜನುಂ ತನ್ನನುಜಾತನೊಳ್ಪಗೆತನಂಜೆತ್ತೆಯ್ದಿದಂ ಮೃತ್ಯುವಂ ।
ಸ್ವಜನದ್ವೇಷಮೆ ಕಷ್ಟಮಲ್ತೆ ಧರೆಯೊಳ್? ಶ್ರೀ ಚೆಲ್ವ ॥ ೬೮

ಪಲವಾತೇಂ! ಸೊರೆವಣ್ಣಗಳುಂ ಸರಿಗೆಯುಂ ಶುಷ್ಕೇಂಧನವ್ರಾತಮೀ ।
ಪಲವುಂ ಕೂಡಿರೆ ವೀಣೆಯಾಗಿ ಜಗಮಂ ರಂಜಿಪ್ಪುವೀಮೂರೆ ಬೇ ॥
ರುಳಿಯಲ್ ಭಿಕ್ಷೆಯಪಾತ್ರವೊಂದು! ಕಟಿಸೂತ್ರಕ್ಕೊಂದು! ಕಾಷ್ಠಕ್ಕೆನಲ್
ಪಲರೊಂದಾಗಿರೆ ಚಂದವಲ್ತೆ ಧರೆಯೊಳ್! ಶ್ರೀ ಚೆಲ್ವ ॥ ೬೯

## ಮೃದುವಚನಂ.

ಘೃತಸಿಕ್ತಾಮೃತಕಲ್ಪಮಂ ಕಬಳಮಂ ಕೈನೀಡಿ ಬಾಯ್ಗಿತ್ತೊಡಂ ।
ಖತಿಗೊಂಡಂಕುಶದಿಂದೆ ತಳ್ತಿರಿದೊಡಂ ಕಣ್ಣೆತ್ತಿಯುಂ ನೋಡದು ॥
ಧೃತಿಯಿಂದಿಪ್ಪುದು ಮತ್ತಹಸ್ತಿ! ಪೊಗಳಲ್ ಕೈಕೊಳ್ವುದಾಮೋದದಿಂ।
ದಿತರೋಪಾಯದೆ ಸಾಮಮೇ ವರಮಲಾ! ಶ್ರೀ ಚೆಲ್ವ ॥ ೨೦

ನಿಯತಂ ವರ್ಣಮುಮೊಂದೆ ರೂಪಮುದೆ! ಮೇಣ್ಮಾಕಂದಮೇಕಾಶ್ರಯಂ।
ವಿಯದುತ್ಪಾತದ ರೀತಿಯೊಂದೆ! ಪಿಕಕಾಕಂಗಳ್ಗೆನಲ್ಕೋಕಿಲೋ ॥
ಚ್ಚಯಮಂ ಲಾಲಿಪರೆಲ್ಲರುಂ ಕರಟಮಂ ವಾಗ್ದೋಷದಿಂ ದೂಷಿಪರ್ ।
ಪ್ರಿಯವಾಕ್ಯಕ್ಕೆಣೆಯಿನ್ನದಾವುದಿಳೆಯೊಳ್? ಶ್ರೀ ಚೆಲ್ವ ॥ ೨೧

## ತೃಷ್ಣಾಗರ್ಹಣಂ.

ತೊಳಲ್ವರ್ ದುರ್ಗವನಾಂತದಲ್ಲಿ, ಬಳಲ್ವರ್ ದೇಶಾಂತರಾವಾಸದಿಂ ।
ದಳಲ್ವರ್ ಕರ್ಷಣಖೇದದಿಂ, ಮುಳುಗುವರ್ದುರ್ವಾರವಾರಾಶಿಯೊಳ್॥
ಕಳೆವರ್ನಾಡೆ ನಿಜಾಯುವಂ ಖಲಕುಭೃತ್ಸೇವಾಸಮುದ್ಯೋಗದಿಂ ।
ಪಲವುಂ ತೃಷ್ಣೆಯ ಕಾರ್ಯಮೆಂದರಿವೆನಾಂ! ಶ್ರೀ ಚೆಲ್ವ ॥ ೨೨

ಧನಹೀನರ್ ಧನಮಂ, ಧನಾಢ್ಯರಿಳೆಯಂ, ಭೂವಲ್ಲಭರ್ ಚಕ್ರವ ।
ರ್ತನಮಂ, ಚಕ್ರಿಗಳಿಂದ್ರನೈಸಿರಿಯನಿಂದ್ರಂ ಬ್ರಹ್ಮಭೋಗಂಗಳಂ ॥
ವನಜೋದ್ಭೂತನುಮೈದೆ ಕಾಂಕ್ಷಿಪನಲಾ ! ಸಾಯುಜ್ಯಮಂ ನಿನ್ನೊಳೆಂ!
ದೆಸಲಿನ್ನಾಸೆಗೆ ಪಾರಮಾವುದಕಟಾ ! ಶ್ರೀ ಚೆಲ್ವ ॥ ೨೩

### ಭಿಕ್ಷುಕಸ್ವಭಾವಂ.

ಸಲೆ ದಂಭೋನ್ನತಿತೋರ್ಪ್ಪಪರ್, ಪರಿಚಯಂಬೆತ್ತಂತೆ ಸಲ್ಲಾಪಿಪರ್ |
ಚಲವಿಂ ಮುದ್ದಿಡುವರ್ ಗೃಹಾರ್ಭಕರುಮಂ,ಮಿಥ್ಯಾಸ್ತವಂ ಗೆಯ್ದಪರ್|
ತಿಳಿವೆಂ ಗಾರುಡಮಂತ್ರತಂತ್ರಗಳನೆಂಬರ್! ದಿಷ್ಟಮಂ ಪೇಳ್ವರೀ |
ಪಲವುಂ ಭಿಕ್ಷುಕರಾಡುವಾಟಮೆ ವಲಂ! ಶ್ರೀ ಚೆಲ್ವ || ೨೪

ಪುರುಷಂಗೊರ್ಮೆ ವಿಪತ್ತಿ ಬಂದೊಡವಿರಲ್ ಪ್ರಾರಬ್ಧಕರ್ಮಂಗಳಿಂ|
ದೊರೆವರ್ ದುರ್ಗ್ರಹಯೋಗಮೆಂದು ಗಣಕರ್,ಪಿತ್ತಾನಿಲ ಶ್ಲೇಷ್ಮಸಂ||
ಕರಮೆಂಬರ್ ಭಿಷಜರ್, ಪಿಶಾಚಮೆ ದಲೆಂಬರ್ ಮಾಂತ್ರಿಕರ್ ತತ್ವದಿಂ|
ದರಿಯಲ್ ಯಾಚ್ಞೆಯೊಳಿಂತಿದೊಂದು ತೆರನೈ! ಶ್ರೀ ಚೆಲ್ವ || ೨೫

### ಜನಾಪವಾದಂ.

ನಳಿನಾಪ್ತಂ ನಿಜಕಾಂತಿಯಿಂದೆ ತಮಮಂ ತೂಳ್ದಟ್ಟಿ, ಕಣ್ಗಾಣದೀ |
ನೆಲನಂ ಕಾಣಿಸಿ, ಲೋಕಬಂಧುವೆನುತಂ ಪ್ರಖ್ಯಾತಿಯಂ ತಾಳ್ದಿಯಂ ||
ಪಳಿಗುಂ ಗೂಗೆಗಳರ್ಕನಂ ದಿವದೆ ತಾಂ ಕಣ್ಗಾಣದಾಖೇದದಿಂ |
ನೆಲನಂ ಮೆಚ್ಚಿಸಲಪ್ಪುದೇ ? ಯದುಗಿರಿ ಶ್ರೀ ಚೆಲ್ವ || ೨೬

ಹರಿ ಜಾರಂ ದ್ರುಹಿಣಂ ವಿರಿಂಚಿ, ಹರನುಂ ಭಿಕ್ಷಾರ್ಥಿ, ಮೇಣ್ ಪನ್ನಗೇ|
ಶ್ವರನುಂ ಜಿಹ್ಮಗನಾಶ್ರಯಾಶನನಿಲಂ, ದೋಷಾಕರಂ ಚಂದ್ರಮಂ||
ಸುರಪಂ ಗೋತ್ರವಿಭೇದಿ, ಭಾನು ತಪನಂ ತಾನೆಂದು ಪೇಳ್ಗುಂ ಜನಂ |
ಧರೆಯೊಳ್ ತಪ್ಪದು ನಿಂದೆಯಾರ್ಗಮೆ ವಲಂ| ಶ್ರೀ ಚೆಲ್ವ || ೨೭

### ಹೇಯ ಗುಣಂಗಳ್.

ಧರೆಯೊಳ್ ತಮ್ಮೊಡವುಟ್ಟಿಯುಂ ತ್ರಿಭುವನಶ್ಲಾಘ್ಯಂಗಳಾಗಿರ್ಪವೆಂ|
ದುರೆ ಮಾತ್ಸರ್ಯಮನೊಂದಿ ವೇಣುನಿವಹಂ ಶ್ರೀಗಂಧವೃಕ್ಷಂಗಳಂ ||
ಉರಿಪಲ್ತಮ್ಮೊಳೆ ಕಿಚ್ಚನೆಳ್ಚಿಸೆ ಪೊದಲ್ತಾಂ ದಗ್ಧಮಪ್ಪಂತೆ ಮ |
ಚ್ಚರಮೇಂ ಕೊಲ್ಲದೆ ಕಾವುದೇ? ಯದುಗಿರಿ ಶ್ರೀ ಚೆಲ್ವ || ೨೮

ನೆರೆ ಕೋಪೋನ್ನತಿಯಿಂ ಹಿರಣ್ಯನಳಿದಂ, ಪೌಲಸ್ತ್ಯನುಂ ಕಾಮದಿಂ ।
ಕುರುವೀರಂ ಘನಲೋಭದಿಂ, ದಶರಥಂ ಸ್ವಾಪತ್ಯಸಂಮೋಹದಿಂ ॥
ಪುರುಹೂತಂ ಮದದಿಂದೆ, ಚೈದ್ಯನೃಪನುಂ ಮಾತ್ಸರ್ಯದಿಂ ಕೆಟ್ಟ ನಿ ।
ನ್ನರಿಷಡ್ವರ್ಗದೆ ಹಾನಿಯೊಂದದಪರದಾರ್ ? ಶ್ರೀ ಚೆಲ್ವ ॥ ೭೯

ಅತಿದಾನವ್ರತದಿಂದೆ ಕರ್ಣನತಿಕೋಪೋದ್ರೇಕದಿಂ ಚೈದ್ಯನಂ ।
ತತಿಮಾನೋನ್ನತಿಯಿಂ ಸುಯೋಧನತಿಕಾಮೋದ್ರೇಕದಿಂ ರಾವಣಂ ॥
ಅತಿಯಾಗುಂಡುದರಿಂದೆ ವಹ್ನಿಯಳಲ್ದಂ, ಮತ್ತಾವುದುಂ ಲೋಕದೊಳ್ ।
ಮಿತಿಮೀರಲ್ ಗತಿಗೇಡೆಲ್ಲೈ ಯದುಗಿರಿಶ್ರೀ ॥ ೮೦

ಎಣಿಸಲ್ಬೆಳ್ವಳು†ವೂರ್ಣನಾಭಮುಮಣಂ ತನ್ನೊಳ್ಪೊದಳ್ದಿರ್ದ ಸ
ದ್ಗುಣಮಂ ವಿಸ್ತರಿಪಂದು ನಾಡೆಯುಮಧಃಪಾತಕ್ಕೆ ಪಕ್ಕಾಗುತಾ ॥
ಗುಣಮಂ ತನ್ನೊಳಡಂಗಿಸಲ್ ಕ್ರಮದೆ ತಾಂ ಮೇಲೇಳ್ವವೊಲ್ತಮ್ಮ ಸ
ದ್ಗುಣಮಂ ತಾಮೆ ಪೊಗಳ್ದು ಪೆರ್ಮೆವಡೆಯರ್ ಶ್ರೀ ಚೆಲ್ವ ॥ ೮೧

## ಸದ್ಗುಣ ಪ್ರಶಂಸನಂ.

ಎಣಿಸಲ್ ಕೇದಗೆ ತೀಕ್ಷ್ಣಕಂಟಕಶತವ್ಯಾವಿದ್ಧಮಾಗಿರ್ದೊಡಂ ।
ಫಣಿಗಳ್ತಾಶ್ರಯಮಾದೊಡಂ ಬಗೆಯದಾ ಸೌಗಂಧ್ಯಮಾತ್ರಕ್ಕೆ ಬಂ ॥
ಡುಣಿಗಳ್ಬಂದೆರಗುತ್ತೆ ಪಾಡಿ ಪೊಗಳ್ಗುಂ ಸಮ್ಮೋದದಿಂದಾವಗಂ ।
ಗುಣಮೊಂದಿರ್ದೊಡೆ ದೋಷಮಂ ಬಗೆವರಾರ್ ಶ್ರೀ ಚೆಲ್ವ ॥ ೮೨

ಒಣಗಿರ್ದಾರ್ದ ಸೊರೆವಣ್ಣುಮಂತೊಣಗಿದಾ ಕಾಷ್ಠಂಗಳುಂ ನಾಡೆ ।
ಸದ್ಗುಣದಿಂ ಸೇರೆ ನೃಪಾಂಗನಾಭುಜಶಿರಃಪ್ರಾಂತಂಗಳಂ ಪತ್ತುಗುಂ ॥
ಗುಣವಿಚ್ಛೇದಮನೊಂದೆ ಜಾರಿ ಕೆಡುಗುಂ ನಲ್ಮುತ್ತು ಮಾತಾಣದಿಂ ।
ಗುಣದಿಂ ಭೂಷಣಮಿನ್ನದಾವುದಿಳೆಯೊಳ್ ಶ್ರೀ ಚೆಲ್ವ ॥ ೮೩

## ಅಹಂಕಾರ ಖಂಡನಂ.

'ಎನಗಾರ್ ಸಾಟಿ! ಸುರೇಂದ್ರರಂ ಜರಿದೆನಾ' ನೆಂದಿರ್ದ್ದ ಪೌಲಸ್ತ್ಯನಂ
ಮೊನೆಯೊಳ್ ತೋಳ್ಗಳಸಂಖ್ಯಬಾಹುವವನಂ ಕೊಂದಿಕ್ಕಿದಂ ಯೋಗಿಯಾ
ತನ ಗೆಲ್ದಂ ನರನಾತನಂ ಶಿಶುಗಳಿರ್ವ್ವರ್ ಗೆಲ್ದರಿಂತಾಗಿರಲ್ |
ತನಗಿನ್ನುತ್ತಮರಿಲ್ಲಮೆಂದವರೇ? ಶ್ರೀ ಚೆಲ್ವ || ೮೪

ರಸೆಯೊಳ್ ಸತ್ಪಥಮೆಂದು ಶೂನ್ಯನಭಮುಂ ವಿಖ್ಯಾತಮಾದಂತೆ, ಮ |
ತ್ತೆ ಸಹಸ್ರಾಂಶುಗೆ ಸಾಟಿಯಾಗಿ ಪುಳುವುಂ ಖದ್ಯೋತನೆಂದಾದವೊಲ್ ||
ಕೆಸರೊಳ್ ಬಿದ್ದಿಹ ಕಪ್ಪೆಯುಂ ಹರಿಯೆನುತ್ತಂ ಖ್ಯಾತಿಯಾಂತಂತೆ, ಪೆ |
ರ್ಚಸರಾಂತಿರ್ಪ್ಪುದೆ ಪೆರ್ಮೆಯೇ! ಯದುಗಿರಿ ಶ್ರೀಚೆಲ್ವ, || ೮೫

ನೆಲದೊಳ್ಸರ್ವಸುಪುಷ್ಪಸಂಚಯಮುಮಂ ಬಿಚ್ಚುರ್ತ್ತೆ,ಮೇಣ್ಸಸ್ಯಸಂ
ಕುಲಮಂ ಪೆರ್ಚಿಸುತೋಷಧೀಶನೆನುತುಂ ಪ್ರಖ್ಯಾತಿಯುಂ ತಾಳ್ದಿಯುಂ||
ನಳಿನೀಬೃಂದಮನಿಂದು ಬಿರ್ಚಲರಿಯಂ ನೈಜಾಂಶುಜಾಲಂಗಳಿಂ |
ಸಲೆ ಸರ್ವಜ್ಞರದಾರೊ. ಪೇಳ್? ಯದುಗಿರಿ ಶ್ರೀಚೆಲ್ವ || ೮೬

## ಕಾಲಚರಿತಂ

ಕ್ಷಿತಿಭೃತ್ಕೂಟದೊಳಿರ್ಕ್ಕುನಾತ್ಮನಗರಂ, ಕೂರಾಳ್ಗಳುಂ ರಕ್ಕಸರ್ |
ವಿತತಾಗಾಧದುರಂತವಾರಿಧಿಯಗುಳ್ ತಾನುಂ ತ್ರಿಲೋಕಾಧಿಪಂ ||
ಹತನಾದಂ ನರವಾನರಪ್ರಕರದಿಂ ಪೌಲಸ್ತ್ಯನಾಗ್ಗರ್ದೊಡೇಂ |
ಕ್ಷಿತಿಯೊಳ್ ಕಾಲಮಲಂಘ್ಯಮೈ! ಯದುಗಿರಿ ಶ್ರೀಚೆಲ್ವ || ೮೭

'ತನಗಿನ್ನಪ್ಪುದು ರಾಜ್ಯಭಾರಮದರೊಳ್ ಸಾಮ್ರಾಜ್ಯಭೋಗಂಗಳಂ |
ಮನವಂದಂತೆವೊಲುಣ್ಬೆ'ನೆಂದೆಣಿಸುತಂ ಶಯ್ಯಾಗ್ರದೊಳ್ ನಿದ್ರಿಸಲ್ ||
ವನವಾಸಂ ತನಗೆಂದರೇಳ್ವನಿತರೊಳ್ ಶ್ರೀಜಾನಕೀಜಾನಿಗೆಂ |
ದೆನೆ ಮುಂದೇನಹುದೆಂಬುದಂ ತಿಳಿವರಾರ್? ಶ್ರೀ ಚೆಲ್ವ || ೮೮

ವೈವಾಖ್ಯಾನಂ.

ಇದರೊಳ್ ವ್ಯಾಧಶರಂಗಳಿಲ್ಲ! ಪುದಿದಾದಾವಾನಲಜ್ವಾಲೆಯಿ |
ಲ್ಲಿದರೊಳ್ ಕ್ರೂರಮೃಗಂಗಳಿಲ್ಲೆನುತೆ ತಾನಾಲೋಚಿಸುತ್ತಂ ಶಶಂ ||
ವಿಧುವಂ ಸೇರಿರಲಲ್ಲಿ ರಾಹುವದನಕ್ಕೀಡಾದುದೆಲ್ಲಿದ್ದೊಡೇಂ |
ವಿಧಿಯಂ ವಂಚಿಸಲಪ್ಪುದೇ ? ಯದುಗಿರಿ ಶ್ರೀ ಚೆಲ್ವ || ೮೯

ಅಧಿಕಾರಂ ತನಗಾಗೆ ದೇವಗಣದೊಳ್, ಯಜ್ಞಾಂತದೊಳ್ ದಕ್ಷಿಣಾ |
ವಿಧಿಗೀಮೂಜಗಮಾಗಿಸುತ್ತೆ, ಮನವೊಲ್ದೀವಂಪು ಸತ್ಪಾತ್ರದೊಳ್ ||
ಮಧುವಿದ್ವೇಷಿಯೆ ನಿಂದು ಬೇಡೆ, ಬಲಿ ತಾನೀಯುತ್ತೆ ಬಂಧಂಗೊಳಲ್ |
ವಿಧಿಯಂ ಮೀರ್ವ್ವನದಾವನೈ? ಯದುಗಿರಿ ಶ್ರೀ ಚೆಲ್ವ || ೯೦

ಪಾಪಪುಣ್ಯಂಗಳ್.

ಕಡಲೊಳ್ಮುಯ್ಗರೆದಿದ್ದೊಡಂ, ಪೊಡವಿಯೊಳ್ಪೊಕ್ಕಿದ್ದೊಡಂ, ಮತ್ತೆ ಬಾ|
ನೆಡೆಯೊಳ್ ಬಂದೆರಗಿದ್ದೊಡಂ, ಭರದೆ ತಾಂ ಪಾತಾಳದೊಳ್ಪೊಕ್ಕುನಿಂ||
ದೊಡಮೇಂ! ಮೇರುಮಹಾಮಹೀಧ್ರಶಿಖರಕ್ಕೇರಿದ್ದೊಡಂ, ತನ್ನ ಬೆಂ|
ಬಿಡದೆಯ್ತುಪ್ಪುದು ಪಾಪಪುಣ್ಯಮೆರಡುಂ ಶ್ರೀ ಚೆಲ್ವ || ೯೧

ಸಿರಿಯಿರ್ದ್ದಲ್ಲಿಯೆ ನಿಲ್ವುದಂಗನೆಯರುಂ ನಿಲ್ವರ್ ಗೃಹದ್ವಾರದೊಳ್ |
ಗುರುಮಾನ್ಯರ್ ಪುರವೀಧಿಯೊಳ್ಪರಿಜನಂಗಳ್ಗ್ರಾಮಸೀಮಾಂತದೊಳ್||
ತೊರೆವರ್ ಮತ್ತನಿಬರ್ ಶ್ಮಶಾನದೆಡೆಯೊಳ್, ಮೇಣ್ ಪುಣ್ಯಪಾಪಂಗಳೆಂ|
ಬೆರಡೇ ತನ್ನೊಡವಪ್ಪುವಲ್ತೆ ಕಡೆಯೊಳ್! ಶ್ರೀ ಚೆಲ್ವ || ೯೨

ಸಾಮಾನ್ಯನೀತಿಗಳ್.

ಗರುವಂಬಿಟ್ಟೆರೆ ಬಿಜ್ಜೆಗರ್, ಧನಿಕರುಂ ಮಾಲೋಭಮಂ ಮಾಣ್ದಿರಲ್ |
ದೊರೆಗಳ್ದುರ್ಮ್ಮದಮಂಬಿಡಲ್, ಮುನಿಜನಂಮುಂಗೋಪಮಂಮಾಣೆ, ಮ
ಚ್ಚರಮಂ ಮಾಣ್ದಿರೆ ಕಬ್ಬಿಗರ್, ತರುಣಿಯರ್ ಕೌಟಿಲ್ಯಮಂ ನೀಗೆ, ಸಾ|
ಗರಮೆಲ್ಲಂ ಸವಿಯಾದವೊಲ್ ಸೊಗಯಿಕುಂ! ಶ್ರೀ ಚೆಲ್ವ || ೯೩

ಕನಕಂ ಕುಂದದ ಸೌರಭಾತಿಶಯದಿಂ ಕೂಡಿರ್ದ್ದವೊಲ್, ಮತ್ತೆ ಚಂ।
ದನಮುಂ ನಾಡೆ ಸುಗಂಧದಿಂದೆಸೆವ ಪುಷ್ಪವ್ರಾತಮಂ ತಾಳ್ದವೊಲ್ ॥
ಇನಿದಾಗಿರ್ಪ್ಪ ಫಲಂಗಳಂ ತಳೆದವೊಲ್ ಪುಂಡ್ರೇಕ್ಷುದಂಡಂಗಳುಂ।
ವಿನಯಂಗೂಡಿದ ವಿದ್ಯೆ ಶೋಭಿಪುದಲಾ! ಶ್ರೀ ಚೆಲ್ವ॥ ೯೪

ಸತತಂ ಪಂಡಿತಭಾಷಣಂ, ಸಕಲಶಾಸ್ತ್ರಾನ್ವೇಷಣಂ, ಸರ್ವಸು।
ಕ್ಷಿತಿಪಾಸ್ಥಾನನಿಷೇವಣಂ, ರಸಿಕರೊಳ್ ಸಾಮೋದಸಂಭಾಷಣಂ ॥
ವಿತತಾನೇಕವಿದೇಶಸಂಚರಣಮೆಂಬೀಯೆಲ್ಲಮುಂ ಮಾನವ।
ಗ್ಗತಿಚಾತುರ್ಯಮನೀವುದೈ ಶ್ರೀ ಚೆಲ್ವ ॥ ೯೫

ಪಾರಾವಾರಪರೀತಮಾದ ಪೃಥಿವೀಪ್ರಾಂತಗಳೊಳ್ ಸತ್ಕಲಾ।
ಧೀರಂಗೈಸಿರಿಯಿಲ್ಲಮಂತದುಮಿರಲ್ ಸೌಜನ್ಯಮಿಲ್ಲಾತನೊಳ್ ॥
ಓರಂತೀಕ್ಷಿಸಿ ನೋಡಲೊರ್ವ್ವನೆಡೆಯೊಳ್ ಶೀಲಂ ಧನಂ ವಿದ್ಯೆಯೀ।
ಮೂರುಂ ಸೇರ್ವ್ವುದು ಪೂರ್ವಪುಣ್ಯವಶಮೈ, ಶ್ರೀ ಚೆಲ್ವ ॥ ೯೬

ಕಲಿ ಭೀಮಂ ನೆರೆಕಲ್ತ ಪಾಕಕಲೆಯಿಂದಜ್ಞಾತಮಂ ನೀಗಿದಂ।
ನಲನುಂ ನೀಗಿದನಶ್ವಚೋದನಕಲಾನೈಪುಣ್ಯದಿಂ ಕಷ್ಟಮಂ ॥
ಕಳೆದಂ ನಾಟ್ಯದ ವಿದ್ಯೆಯಿಂದಮೆ ನರಂ ನೀಡುಂ ವಿಪದ್ವ್ರಾತಮಂ ?
ತಿಳಿದೋದಾವುದುಮೊಂದುಕಾಲಕಹುದೈ ಶ್ರೀ ಚೆಲ್ವ ॥ ೯೭

ಘೃತಸೂಪಾನ್ವಿತ ಭೋಜ್ಯವಸ್ತುವಿರಲಾತಂಗೂಟದೊಳ್ ಶಕ್ತಿಯಂ।
ವಿತತೈಶ್ವರ್ಯಮಿರಲ್ ಸುಪಾತ್ರದೆಡೆಯೊಳ್ದಾನಂಗುಡಲ್ಶಕ್ತಿಯುಂ॥
ಪ್ರತಿಭಾವೈಭವಮುರ್ಬ್ಬಿರಲ್ ಸುಕವಿತಾಬಂಧಂಗಳೊಳ್ ಶಕ್ತಿಯುಂ।
ಕ್ಷಿತಿಯೊಳ್ ಪೂರ್ವಸುಕರ್ಮಲಭ್ಯಮೆ ವಲಂ ಶ್ರೀ ಚೆಲ್ವ ॥ ೯೮

ಉಲಿಗುಂ ಕರ್ಣಕಠೋರಮಾದ ರವದಿಂ, ಹೇಯಂಗಳಂ ಭಕ್ಷಿಕುಂ।
ಮಲಿನಂ ರೂಪದೊಳಿಂತು ದೋಷಶತದಿಂ ಕೂಡಿರ್ದ್ದೊಡಂ ಕಾಕಸಂ॥
ಕುಲಮನ್ನ್ಯೋನ್ಯ ಕುಟುಂಬವತ್ಸಲತೆಯಿಂ ಸುಶ್ಲಾಘ್ಯಮಪ್ಪಂತೆವೊಲ್ !
ನೆಲದೊಳ್ ನಿರ್ಗ್ಗುಣಮೊಂದುಮಿಲ್ಲಮೆಣಿಸಲ್ ! ಶ್ರೀ ಚೆಲ್ವ ॥ ೯೯

ಕೆಲವಂ ಕಲ್ಪಿಸಿ ಬುದ್ಧಿಯಿಂದೆ, ಕೆಲವಂ ಸತ್ಕಾವ್ಯದಿಂದಾಯ್ದು, ಮೇಣ್।
ಕೆಲವಂ ಸ್ವಾನುಭವಂಗಳಿಂದಮರಿದುಂ ಪ್ರತ್ಯಕ್ಷದಿಂ ಕಂಡುಮೀ ॥
ಪಲವಂ ಕೂಡಿಸಿ ಪೇಳ್ದನೀಕೃತಿಯನಾಂ ನಿನ್ನಾಖ್ಯೆಯಿಂದೆಂದೊಡಿ।
ನ್ನಿಳೆಯೊಳ್ ಕೀರ್ತ್ಯಪಕೀರ್ತಿ ನಿನ್ನದೆ! ವಲಂ! ಶ್ರೀ ಚೆಲ್ವ ॥ ೧೦೦

ರಸೆಯೊಳ್ ಪೂರ್ವಕವೀಂದ್ರರೊಲ್ದುಸಿರ್ದ ಸತ್ಕಾವ್ಯಂಗಳೊಳ್ಭಾವತನಾ।
ರಿಸಿ ಪೇಳ್ದೀಕೃತಿಯೇವುದೆಂದು ಪಳಿಯಲ್ವೇಡಾರುಮೀಕಾವ್ಯಮಂ ॥
ಉಸಿರ್ವೆಂ ತತ್ವಮ "ನತ್ರಭೀಷ್ಮಶತ" ಮೆಂಬೀನ್ಯಾಯದಿಂ ಮುನ್ನಿನಾ।
ರಸಿಕರ್ ಪೇಳದುದೊಂದುಮಿಲ್ಲ ಧರೆಯೊಳ್! ಶ್ರೀ ಚೆಲ್ವ ॥ ೧೦೧

ಕ್ಷಿತಿ ಸಸ್ಯಾಳಿ ಸಮೃದ್ಧಮಕ್ಕೆ! ಸುಜನರ್ ಸಮ್ಮೋದದಿಂದಿರ್ಕೆ! ಭೂ।
ಪತಿಗಳ್ ನ್ಯಾಯರತರ್ಕಳಕ್ಕೆ! ಧರೆಯೊಳ್ ಧರ್ಮಂನೆಗಳ್ದಿರ್ಕೆ! ಮೇಣ್॥
ಮತಿಯೊಳ್ ಮಚ್ಚರಮಿಲ್ಲದೋದುಗೆ! ಕವೀಂದ್ರರ್ ಕಾವ್ಯಮಂ! ಮತ್ತಮೀ
ಕೃತಿ ಸರ್ವೋನ್ನತಮಕ್ಕೆ! ನಿನ್ನ ಕೃಪೆಯಿಂ! ಶ್ರೀ ಚೆಲ್ವ ॥ ೧೦೨

ಶ್ರೀಮದ್ವೇವಶಿಖಾಮಣೀ ತಿರುಮಲಾಚಾರ್ಯಂ ನೆಗಳ್ವಂ ಗುಣೋ।
ದ್ದಾಮಂ ಕೋಮಲಕಾವ್ಯಬಂಧಚತುರಂ ಯದ್ವದ್ರಿನಾಥಾಶ್ರಯಂ ॥
ಆ ಮಾಚಾರ್ಯನ ಸೂನು ತದ್ವರಕೃಪಾಸಂಪ್ರಾಪ್ತವಿದ್ಯಂ ಬುಧ।
ಸ್ತೋಮಂ ಮೆಚ್ಚುವವೊಲ್ ನೆಗಳ್ದನಳಸಿಂಗಾಚಾರ್ಯನೀಕಾವ್ಯಮಂ ॥

ಸಂಪೂರ್ಣಮ್.



# SEVEN AGES OF MEN·

## ಮನುಷ್ಯನ ಸಪ್ತವಯೋವಸ್ಥೆಗಳು.

---

ಕಂ|| ಇಳೆಯೆಂಬ ನಾಟ್ಯರಂಗದೊ |
ಳಿಳಿದು ನರರ್ ಭಿನ್ನವೇಷಭಾಷಾದಿಗಳಿಂ ||
ನಿಲೆ ನಟಿಸಿ ಪೋಪ ನಾಟಕ |
ದೊಳಗಣ ಸಪ್ತಾಂಕಸಂಗ್ರಹಾರ್ಥಮನೊರೆವೆಂ || ೧

ಮ. ಸ್ರ|| ಬೆರಲಂ ಬಾಯ್ಗಿಟ್ಟು, ಜೊಲ್ನೀರುಗುತಿರೆ, ಮಲ
ಮೂತ್ರಂಗಳೊಳ್ ಮಿಂದು, ಧಾತ್ರೀ |
ಕರದೊಳ್ ಮೇಣ್ ತನ್ನ ತಾಯ್ತಂದೆಗಳ ತೊಡೆಯೊ
ಳೋಲಾಡಿ, ಮಣ್ತಿಂದು, ಮತ್ತೋ ||
ಕರಿಸುತ್ತೋರೊರ್ಮೆ ಚೀರಿಟ್ಟಳುತವೊಡನೆ ನಿ
ರ್ವ್ಯಾಜದಿಂ ನಕ್ಕುವೋರಂ |
ತಿರೆ ತನ್ನಾಪ್ತರ್ಗೆ ಸಮ್ಮೋಹಮನೊದವಿಪ
ನಾದ್ಯಂಕಕೃತ್ಯಂಗಳಿಂದಂ || ೨

ಸಿರುತಂ ತನ್ನಾಟಪಾಟಂಗಳೊಳೆಳಸಿರೆ,
ತಾಯ್ತಂದೆಗಳ್ ಕೋಪದಿಂದ |
ಬ್ಬರಿಸಲ್,ದೀನಾನನಂ ಪುಸ್ತಕಮನಿರುಕಿ ಕಾಂಕುಳ್ಗೆ,
ಮೆಲ್ವಜ್ಜೆಯಿಂ ತಾಂ||
ಗುರುಸಾನ್ನಿಧ್ಯಕ್ಕೆ ಪೋಗುತ್ತನುದಿನದೆ ನಿಜಾ
ಸಕ್ತಿ ಪೆರ್ಚಲ್ಕೆ, ವಿದ್ಯಾ |
ತುರನಾಗಿರ್ಪ್ಪೊಂದವಸ್ಥಾತತಿಯನಭಿನಯಿಪ್ಪಂ
ದ್ವಿತೀಯಾಂಕದಿಂದಂ || ೩

ಕರದೊಳ್ ಬಿಚ್ಚುಗಟ್ಟ ಕೋಶಾವಳಿಯಮರೆ,ವಿವಾ
ಹಾತುರಂ ಚಿತ್ತದೊಳ್ ಸಂ ।
ದಿರೆ, ಮೇಣ್ ಪಾಠಾಕ್ಷರಂಗಳ್ ತುಟಿಯೊಳುದಿರೆ,
ಶೃಂಗಾರವಾರ್ತಾಶ್ರವಕ್ಕಾ ॥
ತುರಿಸಲ್ ಕರ್ಣದ್ವಯಂ, ಭೋಗದೊಳಧಿಕಾ
ಸಕ್ತಿಯುಂ ವಿದ್ಯೆಯೊಳ್ ಬೇ ।
ಸರಮುಂ ಮೇಲ್ಮೇಲೆ ಪೆರ್ಚುತ್ತಿರಲಿದೆ ಧರೆಯೊಳ್
ತತ್ತೃತೀಯಾಂಕ ಕೃತ್ಯಂ ॥ ೪

ಒಗೆತಪ್ಪ ಶ್ಮಶ್ರುಜಾಲಂಗಳನುಗುಗೊನೆಯಿಂ
ದಾವಗಂ ತಿರ್ದುತಿರ್ಪಂ।
ಮಿಗೆ ದರ್ಪೋದ್ರೇಕದಿಂ ಮೂಗೆಡೆಯೊಳೆ ಮುನಿಸಂ
ದಾಳ್ದು, ಹುಂಕಾರದಿಂ ಮೂ ॥
ಜಗಮುಂ ತಾಂ ಪುಲ್ಗೆಣೆಪ್ಪಂ, ಧರೆಯೊಳೆಣಿಸೆ ಸಂ
ಸಾರಮೇ ಸಾರಮೆಂಬೀ ।
ಒಗೆಯಿಂ ಭೋಗಾಬ್ಧಿಯೊಳ್ ಮುಂದರಿಯದಿಹುದೆ ತಾಂ
ತಚ್ಚತುರ್ಥಾಂಕಸಾರಂ ॥ ೫

ಚಲದಿಂ ಬೀಗಿರ್ಪ ತನ್ನೊಂದಿನಿಯಳ ಮುನಿಸಂ
ತಿರ್ಪುವೊಂದಾತುರಂ, ಮೇ ।
ಣೆಳಗೂಸಂ ಕಾವುದೊಂದುಬ್ಬೆಗಮುಮಿತರ
ಬಾಲಕ್ಕಳಂ ಸಂತವಿಪ್ಪೊಂ ॥
ದಳಲುಂ,ತನ್ನೊಂದುಸೊಕ್ಕಂ ಮುರಿದಿಡೆ, ನಿಜಸಂ
ಸಾರದೊಳ್ ಹೇಯಭಾವಂ ।
ಬಳೆಯಲ್ ಚಿಂತಾಗ್ನಿಯಿಂ ಬೆಂದುಡುಗಿಹುದಿದೆ ತಾಂ
ಪಂಚಮಾಂಕಾರ್ಥಸಾರಂ ॥ ೬

ಬಡವಾದಂಗಾಂಗಮೆಲ್ಲಂ ಸಡಿಲ್ದು ಸೆರೆಗಳುಬ್ಬೆಳೆ,
ಮೇಣ್ ಮೆಯ್ಯೊಳ್ ವಲ್ ಜೋ ।
ಲಿಡೆ, ನಾಸಾಗ್ರಕ್ಕೆ ಕಣ್ಗನ್ನಡಿಯಡರೆ,ನವಿರ್
ನಾಡೆ ಬೆಳ್ಪೇರೆ,ಕೈಯೊಳ್ ॥
ಪಿಡಿದಪ್ಪೊಂದೂರುಗೋಲಿಂ ತಡಬಡಿಸುತೆ, ವಿ
ತ್ತಾರ್ಜನೋದ್ಯೋಗದಿಂ ತ ।
ಳ್ತಿಡಿಪಾಶಾಪಾಶಬದ್ಧಂತೊಳಲ್ವುದೆ ನರನೊಳ್
ತೋರ್ಪ ಷಷ್ಠಾಂಕಕೃತ್ಯಂ ॥ ೭

ನಡೆಯಲ್ ಕಾಲ್ ಬಾರದೇಳಲ್ ನಡು ಮುರಿವುದು!
ಮೇಣ್ ಮಂಜು ಮೂಡಿತ್ತು ಕಣ್ಣೊಳ್ ।
ನುಡಿಯಲ್ ಮೇಲುಬ್ಬಸಂ ಬಂದಡರ್ವುದು! ನಡುಕಂ
ಗೊಂಡುದಂಗಾಂಗಮೆಲ್ಲಂ ॥
ಪಡಿವಾತೇಂ? ಬಂಧುಮಿತ್ರರ್ ನಿಜಪರಿಚರಣ
ಶ್ರಾಂತಿಯಿಂ ಮೂದಲಿಪ್ಪಾ ।
ನುಡಿಯಿಂ ತಾಂ ನಾಡೆ ನೊಂದೊಂದೆಡೆಯೊಳುಡುಗಿರ
ಲ್ಕಿಂತಿದೇ ಸಪ್ತಮಾಂಕಂ ॥ ೮



# ಶ್ರೀ ಚೆಲ್ವನಾರಾಯಣಶತಕಮ್.

## ಟಿಪ್ಪಣಿ.

ಶತಕವೆಂದರೆ. ನೂರುಪದ್ಯಗಳುಳ್ಳ ಒಂದು ಸಣ್ಣ ಕಾವ್ಯವು. ಇಂತಹಕಾವ್ಯಗಳು ಪ್ರಾಯಕವಾಗಿ ನೀತಿ ಧರ್ಮ ಬೋಧಕಗಳಾಗಿವೆ. ಕರ್ಣಾಟಕಭಾಷೆಯಲ್ಲಿ ಪೂರ್ವಕವಿಗಳು ಮಾಡಿದ ಶತಕಗಳು ಹಲವುಂಟು. 16 ನೇ ಶತಮಾನದ ವೀರಭದ್ರನೆಂಬ ಒಬ್ಬಕವಿಯೇ ಐದು ಶತಕಗಳನ್ನು ರಚಿಸಿರುವನು. ಅಪರಾಜಿತೇಶ್ವರ, ರತ್ನಾಕರಾಧೀಶ್ವರಶತಕ ಮುಂತಾದ ಬೇರೆ ಅನೇಕಶತಕಗಳೂ ಪ್ರಚಾರದಲ್ಲಿವೆ. ಆದರೆ ತೆಲುಗಿನಲ್ಲಿ ಈಗ ಪ್ರಚಾರದಲ್ಲಿರುವ ಶತಕಗಳ ಸಂಖ್ಯೆಯನ್ನು ಹೋಲಿಸಿನೋಡಿದರೆ, ಕನ್ನಡಭಾಷೆಯಲ್ಲಿ ಅಂತಹ ಕಾವ್ಯಗಳು ಬಹು ಸ್ವಲ್ಪವೆನ್ನಬಹುದು. ಈಗ ಕನ್ನಡದಲ್ಲಿ ಶತಕವೆಂದರೆ ಥಟ್ಟನೆ ಜನಗಳ ಸ್ಮರಣೆಗೆ ಬರುವುದು ಸೋಮೇಶ್ವರಶತಕವು; ಬೇರೆ ಯಾವುದೂ ಅಷ್ಟೊಂದು ಪ್ರಸಿದ್ಧಿಗೆ ಬಂದಿಲ್ಲ. ಸೋಮೇಶ್ವರಶತಕವು ಅಷ್ಟು ಪ್ರಸಿದ್ಧಿಗೆ ಬರುವುದಕ್ಕೆ ಅದರ ಸುಲಭಶೈಲಿಯೇ ಕಾರಣವು. ಅದರಲ್ಲಿ ಸುಲಭವಾಗಿ ಅರ್ಥವಾಗುವ ಸಣ್ಣ ಸಣ್ಣ ವಾಕ್ಯಗಳು ವಿಶೇಷವಾಗಿದ್ದು, ಅವೆಲ್ಲಾ ಗಾಥೆಗಳಂತೆ ರೂಢಿಯಲ್ಲಿವೆ. ಆದರೆ ಆ ಕಾವ್ಯರಚನೆಯಲ್ಲಿ ಕವಿಯು ವ್ಯಾಕರಣನಿಯಮವನ್ನಾಗಲಿ, ಛಂದೋನಿಯಮವನ್ನಾಗಲಿ, ಅಷ್ಟಾಗಿ ಗಮನಿಸಿಲ್ಲ. ಈ ಚೆಲ್ವನಾರಾಯಣಶತಕವು, ಬಹಳಮಟ್ಟಿಗೆ ಆ ನಿರ್ಬಂಧಕ್ಕೊಳಪಟ್ಟಿರುವುದಲ್ಲದೆ, ಸೋಮೇಶ್ವರಶತಕದಂತೆಯೇ ಇದರಲ್ಲಿಯೂ, "ಕುಡುವರ್ ಕೇಳಿಸಿಕೊಳ್ವರೇ?" "ಇತ್ತು ತೋಷಿಸಲೇನಿದ್ದರ್ಗವೆ ಸಾಲವೇ?" "ಧನಮಿದ್ದರ್ಗೇನ ತಿಲುಬ್ಧರೊಳ್" "ಸಿರಿಯಿದ್ದರ್ಗೆಂ ಕೃಪಣಕ್ಕರ್ಗಳುಂಡರಿವರೇ?" "ಕುಲವೊಂದಾದೊಡೆ ಶೀಲವೊಂದೆನಿಪುದೇ?" "ಪಲರೊಂದಾಗಿರೆ ಚಂದವೈ" "ಸ್ಥಾನಭ್ರಂಶಮೆ ನಾಶಮೈ" ಈರೀತಿಯಲ್ಲಿ ಗಾಥೆಗಳಂತೆ ಜನಗಳ ಬಾಯಲ್ಲಿ ರೂಢಿಗೆ ಬರಬಹುದಾದ ನೀತಿವಾಕ್ಯಗಳು ವಿಶೇಷವಾಗಿವೆ. ಇದರಲ್ಲಿ ಪ್ರತಿಪದ್ಯವೂ ಗ್ರಂಥಕರ್ತನಿಗೆ ಇಷ್ಟದೈವವಾದ ಶ್ರೀ ಚೆಲ್ವನಾರಾಯಣಸ್ವಾಮಿಯ ಅಂಕಿತದಿಂದ ಕೊನೆಗಾಣುತ್ತದೆ. ಆದುದರಿಂದ ಇದಕ್ಕೆ "ಚೆಲ್ವನಾರಾಯಣಶತಕ"ವೆಂದು ಹೆಸರು. ಕೆಲಕೆಲವು ಪದ್ಯಗಳಲ್ಲಿ "ಯದುಗಿರಿ ಶ್ರೀ ಚೆಲ್ವನಾರಾಯಣಾ" ಎಂದೂ ಮುಗಿಯುತ್ತದೆ. 'ಯದುಗಿರಿ"ಯೆಂಬುದು

ಮೈಸೂರಿಗೆ ಮೂವತ್ತು ಮೈಲುಗಳ ದೂರದಲ್ಲಿರುವ ಪ್ರಸಿದ್ಧವಾದ ಒಂದು ಪುಣ್ಯ ಕ್ಷೇತ್ರವು. ಆ ಕ್ಷೇತ್ರಕ್ಕೆ ಈಗ "ಮೇಲುಕೋಟೆ"ಯೆಂಬ ಹೆಸರು ರೂಢಿಯಲ್ಲಿದೆ. ಇದು ಗ್ರಂಥಕರ್ತನ ಜನ್ಮಸ್ಥಳವು.

ಛಂದಸ್ಸು ಮತ್ತು ಅಲಂಕಾರ.—ಈ ಶತಕದಲ್ಲಿ ಪದ್ಯಗಳೆಲ್ಲಾ ಮತ್ತೇಭವಿಕ್ರೀಡಿತವೆಂಬ ಒಂದೇ ವೃತ್ತದಲ್ಲಿವೆ. ೧, ೬೪, ೭೮, ೧೦೧, ಈ ನಾಲ್ಕು ಪದ್ಯಗಳುಮಾತ್ರ ಶಾರ್ದೂಲ ವಿಕ್ರೀಡಿತದಲ್ಲಿವೆ. ಪ್ರಾಯಕವಾಗಿ ಅನೇಕಪದ್ಯಗಳಲ್ಲಿ ಅರ್ಥಾಂತರ ನ್ಯಾಸಾಲಂಕಾರವಿದೆ.

೧. ಪದ್ಯ. ಸೋಮೋತ್ತಂಸ—ಚಂದ್ರನನ್ನು ಶಿರೋಭೂಷಣವಾಗಿ ಉಳ್ಳ ರುದ್ರನು. ನೀರಾಜಿತ—ಬೆಳಗಲ್ಪಟ್ಟ, ಸೀಮಾ+ಅತೀತ—ಎಲ್ಲೆಯನ್ನು ಮೀರಿದ, ತ್ರಾಣ+ಏಕ+ಬದ್ಧಾಶಯಂ—ರಕ್ಷಣೆಯೊಂದರಲ್ಲಿಯೇ ನಟ್ಟಮನಸ್ಸುಳ್ಳವನು, ಆಶ್ರಿತವತ್ಸಲನೆಂದರ್ಥವು. ಶ್ರೀಮಾನ್ಯಂ—ಸೌಭಾಗ್ಯದೇವತೆಯಾದ ಲಕ್ಷ್ಮಿಗೂ ಸಂಮಾನ್ಯನು.

೨. ಪೆಸರಂ ಕೇಳ್ದೊಡನೆ ಉಬ್ಬಿನಕ್ಕುಂ—ಗ್ರಂಥಕರ್ತನ ಹೆಸರನ್ನು ಕೇಳಿದೊಡನೆ ಅಟ್ಟಹಾಸಮಾಡಿ ನಗುತ್ತಲೂ,ಅಜ್ಞಾತಗೋತ್ರಂ—ಯಾರಿಗೂ ಕುಲಗೋತ್ರಗಳೊಂದೂ ತಿಳಿಯದ ಅನಾಮಧೇಯನು, ಇವನಾರ್—ಯಾರಿವನು? ಎಂದು ಎನ್ನಂ ಏಡಿಸದೆ—ನನ್ನನ್ನು ಹಾಸ್ಯಮಾಡದೆ, ಸಾಮಾನ್ಯವಾಗಿ ಲೋಕದಲ್ಲಿ ಪೂರ್ವಕವಿಗಳು ಮಾಡಿದ ಗ್ರಂಥಗಳೆಂದರೆ ಅವುಗಳಲ್ಲಿ ಜನಗಳಿಗೆ ಗೌರವಜ್ಞಾನವಿರುವಂತೆ ಆಧುನಿಕ ಕವಿಗಳು ರಚಿಸಿದ ಗ್ರಂಥಗಳಲ್ಲಿಲ್ಲ. ಆದುದರಿಂದ ಅನೇಕರು ಗ್ರಂಥಗಳನ್ನು ನೋಡುವುದಕ್ಕೆ ಮೊದಲೇ, ಕವಿಗಳ ಹೆಸರನ್ನು ಕೇಳಿ, ಹೊಸಗ್ರಂಥಗಳಾಗಿದ್ದರೆ ಅವುಗಳನ್ನು ನೋಡುವುದಕ್ಕೂ ಇಷ್ಟವಿಲ್ಲದೆ ತಿರಸ್ಕರಿಸುವುದುಂಟು. ಕಾಳಿದಾಸ, ಭವಭೂತಿ ಮುಂತಾದ ಮಹಾಕವಿಗಳ ಗ್ರಂಥಗಳಿಗೂ, ಅವರ ಕಾಲದಲ್ಲಿ ಇದೇ ವಿಧವಾದ ತಿರಸ್ಕಾರವಿತ್ತೆಂದು ಅವರ ವಾಕ್ಯಗಳಿಂದಲೇ ಊಹಿಸಬಹುವಾಗಿದೆ. ಕಾಳಿದಾಸನು ಮಾಳವಿಕಾಗ್ನಿಮಿತ್ರದಲ್ಲಿ "ಪುರಾಣಮಿತ್ಯೇವ ನ ಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ" ಹಳೆಯಕಾವ್ಯವೆನಿಸಿದಮಾತ್ರಕ್ಕೆ ಎಲ್ಲವೂ ನಿರ್ದುಷ್ಟವೆಂದಾಗಲಿ, ಹೊಸದಾದಮಾತ್ರಕ್ಕೆ ಕಾವ್ಯವೆಲ್ಲವೂ ದೋಷವಿಶಿಷ್ಟವೆಂದಾಗಲಿ ಗ್ರಹಿಸಬಾರ"ದೆಂದು ಹೇಳಿರುವನು. ಹಾಗೆಯೇ ಉತ್ತರ ರಾಮಚರಿತ್ರದಲ್ಲಿ ಭವಭೂತಿಯು "ಯೇನಾಮ ಕೇಚಿದಿಹನ ಪ್ರಥಯಂತ್ಯವಜ್ಞಾಂ ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷಯತ್ನಃ" ನನ್ನಕಾವ್ಯವು ಹೊಸದೆಂದು ಯಾರಾದರೂ ತಿರಸ್ಕರಿಸಬಹುದು. ಅವರಿಗಾಗಿ ಈ ನನ್ನ ಪ್ರಯತ್ನವಲ್ಲ. ಈ

ನನ್ನ ಕಾವ್ಯವನ್ನು ಮೆಚ್ಚತಕ್ಕವರು ಯಾರಾದರೂ ಒಬ್ಬರಿಬ್ಬರು ಮುಂದೆ ಹುಟ್ಟ ದಿರ...ನು" ಎಂದು ...ಳಿರು..ನು. ಅದರಂತೆಯೇ ಈ ಶತಕವೂಕೂಡ ಈಗಿನ ಕಾಲಕ್ಕೆ ಹೊಸಬಾದುದರಿಂದ ಜನಗಳು ಅದನ್ನು ಓದಿ ನೋಡದೆಯೇ ತಿರಸ್ಕರಿಸಬಹು ದೆಂದು ಈ ಪದ್ಯವನ್ನು ಬರೆದಿದೆ.

೩. ಸತ್ಪುರುಷರು ಯಾವಾಗಲೂ ಇತರರ ಗುಣಗಳನ್ನು ಪ್ರಶಂಸಿಸುವುದರಿಂ ದಲೇ ತಾವು ಒಳ್ಳೆಯವರೆನಿಸಿಕೊಳ್ಳುವರು. ಧನಾಶೆಯುಳ್ಳದೆ, ಐಶ್ವರ್ಯವನ್ನು ನಿಸ್ಸಾರ ವೆಂದೆಣಿಸಿರುವವರಲ್ಲದೆ, ತಮಗೆ ಭಾಗ್ಯವಿದ್ದಾಗ ಅದಕ್ಕಾಗಿ ಹೆಮ್ಮೆಗೊಳ್ಳದೆ ಸರ್ವ ಸುಲ ಭರಾಗಿರುವರು. ಎಲ್ಲರಲ್ಲಿಯೂ ವಿನೀತರಾಗಿ ತಗ್ಗಿ ನಡೆಯುವುದರಿಂದಲೇ ತಮ್ಮ ಮೇಲ್ಮೆ ಯನ್ನು ತೋರಿಸುವರೆಂದು ಈ ಪದ್ಯದ ಭಾವವು. ಇದರ ೧ ಮತ್ತು ೩ ನೆಯ ಪಾದಗಳಲ್ಲಿ ವಿರುದ್ಧಾಲಂಕಾರವೂ, ಎರಡನೆಯ ಪಾದದಲ್ಲಿ ವಿರೋಧಾಭಾಸವೂ, ಒಟ್ಟಕ್ಕೆ ಕಾವ್ಯಲಿಂಗಾಲಂಕಾರವೂ ಇದೆ.

೪. ವಿರೂಪಂಗೆಯ್ದು—(ಹುಳಿರಸವನ್ನು ಅಥವಾ ಮಜ್ಜಿಗೆಯನ್ನು ಸೇರಿಸುವು ದರಿಂದ) ಹಾಲಿನ ನಿಜರೂಪವನ್ನು ಕೆಡಿಸಿ, ಎಂದರೆ ಹೆಪ್ಪುಹಾಕುವುದೆಂದರ್ಥವು. ಕಟ್ಟಿ ಟ್ಟು —ಉರೆಯಲ್ಲಿ ತೂಗುಹಾಕಿ, ಮಂಥನದಿಂ—ಕಡೆಗೋಲಿನಿಂದ, ಸಾರಮಂ—ಸಾರ ಭೂತವಾದ ಕೆನೆಯನ್ನು ಅಥವಾ ಬೆಣ್ಣೆಯನ್ನು, ವೈವರ್ಣ್ಯಮಂ— ಬಣ್ಣದ ಮಾರ್ಪಾ ಡನ್ನು, ತಾಳದಂತೆ—ಹೊಂದದಹಾಗೆಯೇ, ಇನಿದು + ಪಾಲ್—ರುಚಿಯಾದ ಹಾಲು, ಮತ್ತೆ - ಮತ್ತಷ್ಟು ಇನಿದಾಗಿ— ಹೊಸರುಚಿಯನ್ನು ಹೊಂದಿ, ಶುದ್ಧಗುಣದಿಂ—ನಿ ರ್ದುಷ್ಟವಾದ ಗುಣದಿಂದ (ಬಿಳೀಬಣ್ಣದಿಂದ) ಸುಸ್ನೇಹಮುಂ— (ಒಳ್ಳೇ ಸ್ನೇಹಭಾವ ವನ್ನು) ಒಳ್ಳೇ ಜಿಡ್ಡನ್ನು, ಸತ್ + ಭಂಗಿ— ಸತ್ಪುರುಷರ ರೀತಿಯು.

ತಾತ್ಪರ್ಯ—ಹಾಲನ್ನು ಕಾಯಿಸಿ, ಕುದಿಸಿ, ಹುಳಿಸೇರಿಸಿ, ಕಡೆದು, ಕೆನೆಯನ್ನು ತೆಗೆದರೂ, ಅದು ತನ್ನ ರುಚಿಯನ್ನೂ, ಬಣ್ಣವನ್ನೂ ಬಿಡದು. ಸತ್ಪುರುಷರನ್ನು ನಾನಾ ವಿಧವಾಗಿ ಪೀಡಿಸಿದರೂ, ಅವರು ತಮ್ಮ ಮೃದುಸ್ವಭಾವವನ್ನು ಬಿಡದೆ, ವಿರೋಧಿಗಳಲ್ಲಿ ಯೂ ಸೌಹಾರ್ದವನ್ನೇ ತೋರಿಸುವರೆಂದು ಭಾವವು.

೫. ಗರಳ + ಉಗ್ರ + ಅಹಿ + ಕರಾಳ + ವಕ್ತ್ರ + ಕುಹರ + ಗ್ರಾಸಕ್ಕೆ— ವಿಷದಿಂದ ಕ್ರೂರವಾದ ಸರ್ಪದ (ರಾಹುವಿನ) ಭಯಂಕರವಾದ ಬಾಯಿಯ ರಂಧ್ರದ ತುತ್ತಿಗೆ, ತಾನು ಸಿಕ್ಕಿಯೂ, ಇಂದು—ಚಂದ್ರನು, ತಿಂದು ಉಳಿದ—(ರಾಹುವು) ತಿಂದು ಮಿಗಿಸಿದ, ಪರಿಶುದ್ಧಾತ್ಮರ್—ಶುಭ್ರವಾದ ಮೈಯುಳ್ಳವರು (ಶುದ್ಧಮನ ಸ್ಸುಳ್ಳವರು).

ಭಾ—ಗ್ರಹಣಕಾಲದಲ್ಲಿ ಚಂದ್ರನು, ಒಂದುಕಡೆಯಲ್ಲಿ ತನ್ನ ದೇಹವು ರಾಹು ಗ್ರಹದ ಬಾಯಿಗೆ ತುತ್ತಾಗಿರುವಾಗಲೂ, ಉಳಿದ ಭಾಗದಿಂದಲೇ ಲೋಕಕ್ಕೆ ಕಾಂತಿಯನ್ನು ಕೊಟ್ಟು ತಂಪಾಗಿಸುವಂತೆ, ಸತ್ಪುರುಷರು ಒಂದುಕಡೆ ತಾವು ಕಷ್ಟಕ್ಕೆ ಸಿಕ್ಕಿದ್ದಾಗಲೂ ತಮ್ಮಿಂದಾದಷ್ಟು ಪರೋಪಕಾರವನ್ನು ಮಾಡುತ್ತಿರುವರೆಂದು ಭಾವವು.

ಪೂರ್ವಕಥೆ—ಕ್ಷೀರಸಮುದ್ರಮಂಥನದಿಂದ ಪಡೆದ ಅಮೃತವನ್ನು ದೇವತೆಗಳಿಗೆ ಹಂಚುತ್ತಿರುವಾಗ, ದಾನವನೊಬ್ಬನು ವೇಷಧಾರಿಯಾಗಿ ಬಂದು, ದೇವತೆಗಳ ನಡುವೆಸೇರಿ, ಅಮೃತವನ್ನು ಪಡೆದು ಕುಡಿಯುತ್ತಿರುವಲ್ಲಿ, ಸೂರ್ಯಚಂದ್ರರು ಈ ಗುಟ್ಟನ್ನು ಹೊರಗೆ ಹಾಕಲು, ಒಡನೆಯೇ ಮಹಾವಿಷ್ಣುವು ಆ ದಾನವನ ತಲೆಯನ್ನು ಕಡಿದನು. ತಲೆಮುಂಡಗಳು ಬೇರಾದರೂ ಅಮೃತಸ್ಪರ್ಶದ ಬಲದಿಂದ, ಅವು ರಾಹುಕೇತುಗಳೆಂಬ ಎರಡು ಗ್ರಹಗಳಾಗಿ ಜೀವಿಸಿದ್ದು, ತಮ್ಮ ಗುಟ್ಟನ್ನು ಹೊರಗೆ ಹಾಕಿದ ಚಂದ್ರಸೂರ್ಯರನ್ನು ಪರ್ವಕಾಲಗಳಲ್ಲಿ ನುಂಗುವರೆಂದೂ, ಅದೇ ಗ್ರಹಣಗಳೆಂದೂ ಪುರಾಣಕಥೆ.

೬. ತೋಯಮುಮಂ—ನೀರನ್ನು, ಮೆಯ್+ಕಂಪಂ - (ತನ್ನ) ಶರೀರಕ್ಕೆ ಸುವಾಸನೆಯನ್ನು, ಬಯ್ಸಿ—ಅಪೇಕ್ಷಿಸಿ, ಸತ್+ವಿಭವಂ—ಸತ್ಪುರುಷರ ಐಶ್ವರ್ಯವೆಲ್ಲವೂ, ಪರಾರ್ಥಮೆ—ಇತರರ ಪ್ರಯೋಜನಕ್ಕಾಗಿಯೇ, ವಲಂ – ನಿಶ್ಚಯವು.

ಭಾ—ವೃಕ್ಷಾದಿಗಳು ಹಣ್ಣು, ಹೂ, ಮುಂತಾದುವುಗಳನ್ನು ಬಿಡುವುದು ಹೇಗೆ ಪರಪ್ರಯೋಜನಾರ್ಥವೋ ಹಾಗೆ ಸತ್ಪುರುಷರು ತಮ್ಮ ಭಾಗ್ಯವನ್ನೆಲ್ಲಾ ಪರಾರ್ಥವಾಗಿಯೇ ವಿನಿಯೋಗಿಸುವರೆಂದು ಭಾವವು.

೭. ಕಲ್ಮೊಳ್+ಇಟ್ಟು + ಅರೆದು— ಸಾಣೆಯಕಲ್ಲಿನಲ್ಲಿ ಇಟ್ಟು ಉಜ್ಜಿ, ಅಯಃ+ಸಂಘಟ್ಟದಿಂ – ಕಬ್ಬಿಣದ (ಉಕ್ಕಿನ) ಪೆಟ್ಟಿನಿಂದ, ಘಟ್ಟಿಸುತ್ತಿರೆಯುಂ—ಹೊಡೆಯುತ್ತಿದ್ದರೂ,ಕುಂದದೆ—ಕಾಂತಿಗುಂದದೆ, ಮೇಲ್ಮೆಯಾಂಪ—ಅತಿಶಯವನ್ನು ಹೊಂದುವ,ಕನಕಂ ಬಂಗಾರವು, ನಿಸ್ಸಾರ+ಗುಂಜಾಫಲ+ಉತ್ಕರಮಂ—ಒಳಗೆ ಸಾರವಿಲ್ಲದ (ಪೊಳ್ಳಾದ) ಗುಲಗಂಜಿಗಳ ಸಮೂಹವನ್ನು, ಬಳ್ಕಿ—ಭಾರದಿಂದ ಬಗ್ಗಿ, ಸಾಮ್ಯಮಂ—ಹೋಲಿಕೆಯನ್ನು.

ತಾ—ಬಂಗಾರವನ್ನು ಬೆಂಕಿಯಲ್ಲಿ ಕಾಯಿಸಿ, ಕಲ್ಲಿನ ಮೇಲೆ ತಿಕ್ಕಿ, ಸುತ್ತಿಗೆಯಿಂದ ಬಡಿದರೂ, ಅದು ಬಣ್ಣಗೆಡದೆ, ಮೇಲೆಮೇಲೆ ತನ್ನ ವರ್ಣೋತ್ಕರ್ಷವನ್ನು ತೋರಿಸುತ್ತಿರುವುದು. ತುಚ್ಛವಾದ ಅದನ್ನು ಭಾರವಿಲ್ಲದ ಗುಲಗಂಜಿಯೊಡನೆ

ತೂಕಮಾಡುವಾಗಮಾತ್ರ, ಭಾರದಿಂದ ಕುಗ್ಗಿಕೆಳಕ್ಕೆ ಬಗ್ಗುವುದು. ಇದರಂತೆಯೇ ಸಜ್ಜನರು ಎಂತಹ ಕಷ್ಟವನ್ನಾದರೂ ಸಹಿಸಿಕೊಳ್ಳಬಲ್ಲರೇ ಹೊರತು, ಅಲ್ಪಜನರೊಡನೆ ತಮ್ಮನ್ನು ಸರಿಹೋಲಿಸಿದರೆಮಾತ್ರ ಸಹಿಸಲಾರರೆಂದು ಭಾವವು.

೮. ಹರಿಣಾಂಕಂ—(ಜಿಂಕೆಯ ಗುರುತುಳ್ಳ) ಚಂದ್ರನು, ಮಲಿನಂ—ಕಳಂಕವುಳ್ಳವನು, ಜಡಪ್ರಕೃತಿ—ಸೋಮಾರಿತನದ ಸ್ವಭಾವವುಳ್ಳವನು (ಶೀತಲಸ್ವಭಾವವುಳ್ಳವನು) ವಕ್ರಂ—ಕುಟಿಲಸ್ವಭಾವದವನು, (ವಕ್ರಾಕೃತಿಯುಳ್ಳವನು) ಕ್ಷಯಾವಿಷ್ಟಂ—ಕ್ಷಯರೋಗದಿಂದ ಪೀಡಿತನಾದವನು (ಕೃಷ್ಣಪಕ್ಷದಲ್ಲಿ ದಿನದಿನಕ್ಕೆ ಕ್ಷಯಿಸತಕ್ಕವನು) ಅಂತಿರೆ—ಹಾಗೆಯೇ, ನೆರೆ—ಹೆಚ್ಚಾಗಿ, ದೋಷ + ಆಕರಂ – ಅನೇಕ ದೋಷಗಳಿಗೆ ನೆಲೆಯಾದವನು. (ದೋಷಾ + ಕರಂ—ರಾತ್ರಿಯಲ್ಲಿ ಕಿರಣಗಳುಳ್ಳವನು) ಎಂಬುದನ್ನು ತಿಳಿದೂ, ಈಶಂ—ರುದ್ರನು, ತಾಳ್ದಿದಂ—ಧರಿಸಿದನು. ತಾಳ್ ಧಾತುವಿನಮೇಲೆ "ತಾಳ್ದಂ" ಎಂದೂ, ತಾಳ್ದು ಧಾತುವಿನಮೇಲೆ ತಾಳ್ದಿದಂ ಎಂದು ಎರಡು ರೂಪಗಳುಂಟು.

ತಾ—ಸತ್ಪುರುಷರು ತಮ್ಮಲ್ಲಿಗೆ ಆಶ್ರಿತರಾಗಿ ಬಂದವರಲ್ಲಿ ಗುಣದೋಷಗಳನ್ನೆಣಿಸದೆ ಅವರನ್ನು ಆದರಿಸಿ ಪೋಷಿಸುವರೆಂದು ಇದರ ಮುಖ್ಯಾರ್ಥವು.

೯. ಪೆರ್ಚಿದೆ—ಉತ್ಸಾಹದಿಂದುಬ್ಬದೆ, ಕುಂದಂ ಬಂದುವರೆ—ಎದೆಗುಂದುವರೆ? ಎಂದಿಗೂ ಇಲ್ಲವೆಂದರ್ಥವು.

ತಾ—ಬೆಂಕಿಯಲ್ಲಿಟ್ಟುಕಾಯಿಸಿದಷ್ಟೂ ಬಂಗಾರಕ್ಕೆ ಕಾಂತಿ ಹೆಚ್ಚು! ಕುದಿಸಿದಷ್ಟೂಹಾಲಿಗೆ ರುಚಿ ಹೆಚ್ಚು! ಕಡೆದಷ್ಟೂ ರತ್ನಕ್ಕೆ ಕಾಂತಿ ಹೆಚ್ಚು! ಇದರಂತೆಯೇ ಸತ್ಪುರುಷರು ಕಷ್ಟಕ್ಕೆ ಸಿಕ್ಕಿದರೂ, ಮೇಲೆಮೇಲೆ ಧೈರ್ಯವನ್ನೂ, ಉತ್ಸಾಹವನ್ನೂ ತೋರಿಸುವರೇಹೊರತು ಎದೆಗುಂದಲಾರರೆಂದು ಭಾವವು.

೧೦. ಕರವೀರಂಗಳ್—(ಜನರಿಗೆ ಹಾನಿಕರಗಳಾದ) ಕಣಿಗಿಲೇಗಿಡಗಳು. ಈ ಗಿಡದ ಬೇರು ವಿಷವೆಂದು ಪ್ರಸಿದ್ಧಿಯುಂಟು. ಚೂತಂಗಳ್—(ಜನಾದರಣೀಯಗಳಾದ) ಮಾವಿನ ಮರಗಳು, ಅಲ್ಲಲ್ಲಿ—ಎಲ್ಲಿಯೋ ಕೆಲವೆಡೆಯಲ್ಲಿ. ಅಶ್ಮಂ—ಸಾಧಾರಣದ ಕಲ್ಲುಗಳು.

೧೧. ಮಿತ್ರಸಾನ್ನಿಧ್ಯಮಂ— ಸ್ನೇಹಿತನ ಸಮೀಪವನ್ನು(ಸೂರ್ಯನ ಸಮೀಪವನ್ನು), ಮಲಿನಾತ್ಮರ್ಗೆ, ಕೆಟ್ಟಸ್ವಭಾವವುಳ್ಳವರಿಗೆ(ಕಳಂಕದಿಂದ ಕೂಡಿದವರಿಗೆ)

ಅಮಾವಾಸ್ಯೆಯ ದಿನದಲ್ಲಿ ಸೂರ್ಯಚಂದ್ರರಿಬ್ಬರೂ ಒಂದಾಗಿ ಕಲೆತಿರುವರು. ಮರುದಿನದಿಂದ ಚಂದ್ರನಿಗೆ ಒಂದೊಂದು ಕಳೆಯು ಕೂಡುತ್ತ ಬಂದಹಾಗೆ, ದೂರದೂರಕ್ಕೆ ಹೋಗುತ್ತ, ಕೊನೆಗೆ ಶುಕ್ಲಪಕ್ಷಾಂತದ ಹುಣ್ಣಿಮೆಯ ದಿನದಲ್ಲಿ ಪೂರ್ಣ ಕಲೆಗಳಿಂದ ಕೂಡಿದ್ದಾಗ ಸೂರ್ಯನನ್ನು ಬಿಟ್ಟು ಬಹುದೂರದಲ್ಲಿರುವನು. ಎಂದರೆ, ಸಂಜೆಯಲ್ಲಿ ಸೂರ್ಯನು ಪಶ್ಚಿಮದಲ್ಲಿ ಅಸ್ತಮಿಸುತ್ತಿರುವಾಗ, ಚಂದ್ರನು ಆಗಲೇ ಪೂರ್ವದಿಕ್ಕಿನಲ್ಲಿ ಉದಿಸುತ್ತಿರುವನು. ಅದರಿಂದಾಚೆಗೆ ಕೃಷ್ಣಪಕ್ಷದಲ್ಲಿ ಚಂದ್ರನು ತನ್ನ ಕಳೆಯು ದಿನದಿನಕ್ಕೆ ತಗ್ಗುತ್ತ ಬಂದಹಾಗೆ, ಸೂರ್ಯನನ್ನು ಸಮೀಪಿಸುತ್ತಬಂದು, ಸಂಪೂರ್ಣವಾಗಿ ಕಳಾಶೂನ್ಯನಾಗಿದ್ದಾಗ ಅಮಾವಾಸ್ಯೆಯ ದಿನದಲ್ಲಿ ಸೂರ್ಯನ ಸಂಗಡ ಕಲೆತಿರುವನು. ಹೀಗೆಯೇ ತಮಗೆ ಕಷ್ಟಬಂದಾಗ ಮತ್ತೊಬ್ಬರನ್ನಾಶ್ರಯಿಸಿ ಅನುವರ್ತಿಸುವುದೂ, ತಾವು ಪುಷ್ಟರಾಗಿದ್ದಾಗ, ತಮಗೆ ಆಶ್ರಯಕೊಟ್ಟವರನ್ನೂ ಲಕ್ಷ್ಯಮಾಡದೆ ತಿರಸ್ಕರಿಸುವುದೂ ದುರ್ಜನರ ಸ್ವಭಾವವೆಂದು ಈ ಪದ್ಯದ ಮುಖ್ಯಾರ್ಥವು.

೧೨. ಉರುಕಾಂತಾರದ—ದೊಡ್ಡ ಕಾಡಿನ, ವಾತಾಶನಂ—ಗಾಳಿಯೇ ಆಹಾರವಾಗಿ ಉಳ್ಳುದು, ಉರಗಂ—ಹಾವು (ಎದೆಯಿಂದ ಸರಿಯತಕ್ಕುದು) ಸನ್ಮುನಿವೃತ್ತಿಯಂ—ಒಳ್ಳೇ ಋಷಿಗಳ ಚರ್ಯೆಯನ್ನು, ಮೆರೆದೊಡಂ—(ತನ್ನಲ್ಲಿ) ತೋರಿಸುತ್ತಿದ್ದರೂ, ಕ್ಷ್ವೇಳಮಂ—ವಿಷವನ್ನು. ಎರಡುಂಜಿಹ್ವೆಯಂ—ಎರಡುನಾಲಗೆಗಳನ್ನು, ಐದೆ—ಹೆಚ್ಚಾಗಿ, ಜಿಹ್ಮಗತಿಯಂ—ಕುಟಿಲವಾದ ನಡೆಯನ್ನು.

ತಾ—ಹಾವುಗಳು ವಿಜನವಾದ ಕಾಡಿನಲ್ಲಿದ್ದು ವಾಯುಭಕ್ಷಕಗಳೆನಿಸಿಕೊಂಡು, ಹೊರಕ್ಕೆ ಯೋಗಿಗಳ ನಡತೆಯನ್ನು ತಮ್ಮಲ್ಲಿ ತೋರಿಸುತ್ತಿದ್ದರೂ, ಬಾಯೊಳಗೆ ವಿಷವನ್ನೂ, ಎರಡು ನಾಲಗೆಗಳನ್ನೂ, ಕುಟಿಲಗತಿಯನ್ನೂ ಹೇಗೆ ಬಿಡುವುದಿಲ್ಲವೋ, ಹಾಗೆ ದುರ್ಜನರು ಹೊರಕ್ಕೆ ಸಾಧುಗಳಂತೆ ನಟಿಸುತ್ತಿದ್ದರೂ, ಹೃದಯದೊಳಗೆ ವಿಷವೂ ಆಡಿದ ಮಾತಿಗೆ ತಪ್ಪುವುದೂ, ವಕ್ರವಾದ ನಡತೆಯೂ ಅವರಿಗೆ ಸಹಜ ಸ್ವಭಾವವೆಂದು ಭಾವವು.

೧೩. ಅಸಿಯಿಂ ಪೋಳ್ದೆಯ್ವಂ—ಕತ್ತಿಯಿಂದ ಕತ್ತರಿಸುವನೋ, ಸುಮನೋಚ್ಚಯದಿಂದ—ಪುಷ್ಪಸಮೂಹದಿಂದ, ಕಟುವೆ—ಕಹಿಯಾಗಿಯೇ, ನಿಂಬಂ—ಬೇವಿನ ಮರವು, ಆರಯೆ—ಆಲೋಚಿಸಲು, ನೀಡುಂ—ಹೆಚ್ಚಾಗಿ.

ತಾ—ಬೇವಿನಗಿಡವು ತನ್ನನ್ನು ಪ್ರೇಮದಿಂದ ಬೆಳೆಸಿದವರಿಗೂ, ಕತ್ತಿಯಿಂದ ಕತ್ತರಿಸಿದವರಿಗೂ, ಪುಷ್ಪಗಳಿಂದ ಪೂಜಿಸಿದವರಿಗೂ ಹೇಗೆ ಒಂದೇವಿಧವಾಗಿ ತನ್ನ

ಕಹಿಯನ್ನು ತೋರಿಸುವುದೋ, ಹಾಗೆ ದುರ್ಜನರೂಕೂಡ ಶತ್ರುಮಿತ್ರರೆಂಬ ಭೇದವಿಲ್ಲದೆ ಎಲ್ಲರಲ್ಲಿಯೂ ತಮ್ಮ ದೌರ್ಜನ್ಯವನ್ನು ತೋರಿಸದೆ ಬಿಡರೆಂದರ್ಥವು.

೧೪. ಸುಜನರ್ಗ್ಗೆ, ಒಂದೆರಸಜ್ಜೆ—ಒಂದೇ ನಾಲಗೆ, ಜನಸಾಮಾನ್ಯಕ್ಕೆಲ್ಲಾ ನಾಲಗೆಯು ಒಂದೇ ಆಗಿದ್ದರೂ, ಆಡಿದಮಾತಿಗೆ ತಪ್ಪದ ಸಜ್ಜನರಿಗೆಮಾತ್ರ ಒಂದೇ ನಾಲಗೆಯೆಂದುಭಾವವು. ಇಲ್ಲಿ ಲಕ್ಷಣಾವೃತ್ತಿಯಿಂದ ನಾಲಗೆಯೆಂಬುದಕ್ಕೆ ನಾಲಗೆಯಿಂದ ಹೊರಡುವ ಮಾತೆಂಬ ಅರ್ಥವನ್ನು ಗ್ರಹಿಸಬೇಕು. ಭೋಗಿಗೆ—ಹಾವಿಗೆ, ತ್ರಿಶೀರ್ಷಂಗೆ—ರಾಮಾಯಣದಲ್ಲಿ ಪ್ರಸಿದ್ಧನಾದ ತ್ರಿಶಿರಸ್ಸೆಂಬ (ಮೂರುತಲೆಯ) ರಾಕ್ಷಸನಿಗೆ, ಅಜನೊಳ್—ಚತುರ್ಮುಖ ಬ್ರಹ್ಮನಲ್ಲಿ, (ಬ್ರಹ್ಮನಿಗೆ) ಪುರಾರಿಗೆ— (ಪಂಚಮುಖವುಳ್ಳ) ರುದ್ರನಿಗೆ; ಶಿವನಿಗೆ ತತ್ಪುರುಷ, ಅಘೋರ, ಈಶಾನ, ಸದ್ಯೋಜಾತ, ವಾಮದೇವವೆಂಬ ಹೆಸರುಳ್ಳ ಐದು ಮುಖಗಳು. ಕುವರಂಗೆ—ಕುಮಾರಸ್ವಾಮಿಗೆ (ಷಣ್ಮುಖನಿಗೆ) ಅಗ್ನಿಗೆ + ಏಳ್—ಅಗ್ನಿಗೆ ಸಪ್ತಜಿಹ್ವನೆಂದು ಹೆಸರು, ಏಳು ಜ್ವಾಲೆಗಳುಳ್ಳವನೆಂದರ್ಥವು. ಪುಲಸ್ತ್ಯಜ—ರಾವಣನ, ಫಣಿಪಂಗೆ—ಆದಿಶೇಷನಿಗೆ, ಹಾವುಗಳಿಗೆ ಎರಡು ನಾಲಗೆಗಳಿರುವುದರಿಂದ, ಸಹಸ್ರಶಿರಸ್ಸುಳ್ಳ ಆದಿಶೇಷನಿಗೆ ಒಂದೊಂದು ಬಾಯಿಗೆ ಎರಡೆರಡರಂತೆ, ಇರ್ಛಾಸಿರಂ-- ಎರಡುಸಾವಿರ ನಾಲಗೆಗಳು.

ತಾ. ಲೋಕದಲ್ಲಿ ಎರಡುಸಾವಿರನಾಲಗೆಗಳಿದ್ದವರನ್ನೂ ನಾವು ನೋಡಬಹುದು (ಕ್ಷಣಕ್ಕೊಂದು ಮಾತಾಡತಕ್ಕ) ದುರ್ಜನರ ನಾಲಗೆಗಳನ್ನುಮಾತ್ರ ಎಣಿಸುವುದಕ್ಕೇ ಸಾಧ್ಯವಿಲ್ಲವೆಂದು ಭಾವವು. ಇಲ್ಲಿ ಸಾರಾಲಂಕಾರವು.

೧೫. ಈ ಪದ್ಯದಲ್ಲಿ ಒಂದು ಬಕವು, ಚಂದ್ರನಿಗಿಂತ ತನ್ನಲ್ಲಿ ಕೆಲವು ಅತಿಶಯಗಳುಂಟೆಂಬುದನ್ನು ವಿಕಲ್ಪಾರ್ಥಗಳಿಂದ ತೋರಿಸಿ ಹೇಳಿದ ಮಾತುಗಳೆನ್ನು ಅನುವಾದಿಸಿದೆ. ಹೇಗೆಂದರೆ, ನಾನು, ಎರಡುಂಪಕ್ಷದೆ—ಎರಡು ರೆಕ್ಕೆಗಳಿಂದ, ರಾಜಿಪೆಂ—ಪ್ರಕಾಶಿಸುವೆನು. (ಚಂದ್ರನು ಒಂದೇ ಪಕ್ಷದಲ್ಲಿ ಎಂದರೆ ಶುಕ್ಲಪಕ್ಷದಲ್ಲಿ ಮಾತ್ರ ಪ್ರಕಾಶಿಸತಕ್ಕವನು) ನಾನು ವಿಮಲಪುಷ್ಟಾಂಗಂ—ಶುದ್ಧವಾದ ಮತ್ತು ತುಂಬಿದ ಮೈಯುಳ್ಳವನು (ಚಂದ್ರನಾದರೋ ಕಳಂಕದಿಂದ ಕೂಡಿದ ಮತ್ತು ಕ್ಷೀಣಿಸತಕ್ಕ ಮೈಯುಳ್ಳವನು) ಸದಾ ಮೀನರಾಶಿರತಂ—ನಾನು ಯಾವಾಗಲೂ ಮೀನುಗಳ ರಾಶಿಯಲ್ಲಿಯೇ ನೆಲಸಿರತಕ್ಕವನು. (ಚಂದ್ರನು ಯಾವಾಗಲೋ ವರ್ಷಕ್ಕೊಮ್ಮೆ ಮೇಷಾದಿರಾಶಿಗಳಲ್ಲಿ ಒಂದಾದ ಮೀನರಾಶಿಯನ್ನು ಸೇರತಕ್ಕವನು) ನೇಸರಿಂ—ಸೂರ್ಯನ ದೆಸೆಯಿಂದ, ಅಂಜೆಂ—ನಾನು ಹೆದರತಕ್ಕವನಲ್ಲ. (ಚಂದ್ರನಾದರೋ ಸೂರ್ಯನಿಗಿದಿರಾಗಿ ನಿಲ್ಲಲಾರದೆ, ಹಗಲಲ್ಲಿ ಅದೃಶ್ಯನಾಗುವನು) ಎಲ್ಲದೆಸೆಗಂ ಪೋಪೆಂ—

ಎಲ್ಲಾದಿಕ್ಕಿಗೂ ನಡೆಯಬಲ್ಲೆನು. (ಚಂದ್ರನ ಗತಿಯು ಪೂರ್ವದಿಂದ ಪಶ್ಚಿಮಕ್ಕೆ ಹೊರತು ಬೇರೆ ಕಡೆಗಿಲ್ಲ) ದ್ವಿಜ + ಅಧೀಶಂ—(ಚಂದ್ರನು ನಕ್ಷತ್ರಗಳಿಗ ಅಧಿಪತಿಯಾಗಿರುವಂತೆ) ನಾನು ಪಕ್ಷಿಗಳಿಗೆ ಒಡೆಯನು. ಆದುದರಿಂದ ಚಂದ್ರನು ತನಗೆ ಸಮಾನನಲ್ಲವು.

ಅಲ್ಪಜನಗಳು ವಿಕಲ್ಪಾರ್ಥಗಳಿಂದ, ತಮ್ಮಲ್ಲಿ ಇಲ್ಲದ ಗುಣಗಳನ್ನಾರೋಪಿಸಿಕೊಂಡು, ಅಸೂಯೆಯಿಂದ ಮಹಾತ್ಮರನ್ನು ನಿಂದಿಸುವುದು ಸಹಜವು. ಅದರಿಂದ ಮಹಾತ್ಮರಿಗೇನೂ ಕೊರತೆಯಿಲ್ಲವೆಂದು ಭಾವವು.

೧೭. ವಿತ್ತದೆ — ಹಣದಿಂದ. ಸಾಧ್ಯರೆನಿಪ್ಪರ್—ವಶರಾಗುವರು.

೧೮. ಪನೆಯೊಳ್—ಹಲ್ಲಿನಲ್ಲಿ, ಜೀವ + ಓಘಮಂ—ಪ್ರಾಣಿಸಮೂಹವನ್ನು.

ತಾ—ಹಾವುಗಳಿಗೆ ಹಲ್ಲಿನಲ್ಲಿಯೂ, ಚೇಳುಗಳಿಗೆ ಬಾಲದಲ್ಲಿಯೂ ವಿಷವಿದ್ದರೂ, ಅವು ಇತರಪ್ರಾಣಿಗಳನ್ನು ಸ್ಪರ್ಶಿಸದೆ ಕೊಲ್ಲಲಾರವು. ದುರ್ಜನರ ನಾಲಗೆಯಲ್ಲಿ ಮಾತಿನ ರೂಪದಿಂದಿರುವ ಕ್ರೂರವಿಷವು, ಮುಟ್ಟದಹಾಗೆ ಪರೋಕ್ಷದಲ್ಲಿರುವವರನ್ನೂ ಕೊಲ್ಲಬಲ್ಲುದು. ದುರ್ಜನರು ಹೇಳತಕ್ಕ ಚಾಡಿಯ ಮಾತುಗಳಿಂದ ಅನೇಕರಿಗೆ ಪ್ರಾಣಾಪಾಯವೂ ಉಂಟಾಗುತ್ತದೆಂದು ಭಾವವು.

೧೮. ಭರದಿಂದ + ಎಳ್ದು + ಇದಿರ್ಗಂದು—ಸಂಭ್ರಮದಿಂದ ಎದ್ದು ಇದಿರುಗೊಂಡು ಬಂದು, ಪೊದಲ್ದಿರಲ್—ತುಂಬಿರಲು, ಧೂರ್ತರ—ವಂಚಕರ.

೧೯. ಸ್ವರ್ಭಾನು —ರಾಹುವು, ನಯನಾನಂದನಂ + ಇಂದುವಂ—ಕಣ್ಣುಗಳಿಗೆ ಆನಂದಕರನಾದ ಚಂದ್ರನನ್ನು, ತುಡುಕುವಂ—ನುಂಗುವನು, ಸತ್ಫಲ + ಉಚ್ಚಯದಿಂ—ಒಳ್ಳೇಹಣ್ಣುಗಳ ಸಮೂಹದಿಂದ, ನಯ + ಅನಯಗಳಂ—ಯುಕ್ತಾಯುಕ್ತಗಳನ್ನು, ಬಗೆಯರ್—ಯೋಚಿಸಲಾರರು.

ತಾ—ಸದಸದ್ವಿವೇಚನೆಯಿಲ್ಲದೆ ಉತ್ತಮವಸ್ತುಗಳನ್ನು ಕೆಡಿಸುವುದೂ, ಕೆಟ್ಟವಸ್ತುಗಳನ್ನು ಪೋಷಿಸುವುದೂ ದುರ್ಜನರ ಸ್ವಭಾವವೆಂದು ಮುಖ್ಯಾರ್ಥವು.

೨೦. ತರುಣ + ಅಬ್ದ + ವ್ರಜದೊಳ್—ಹೊಸ ಮೇಘಗಳ ಸಮೂಹದಲ್ಲಿ, ಮಹೋಗ್ರದ—ಅತಿಕ್ರೂರವಾದ, ಇಲ್ಲಿನ ಷಷ್ಠೀ ವಿಭಕ್ತಿಗೆ ವಿಶೇಷಣಾರ್ಥವನ್ನು ಗ್ರಹಿಸಬೇಕು. ಷಟ್ಪದಿಗಳಲ್ಲಿ ಇಂತಹ ಪ್ರಯೋಗವು ವಿಶೇಷವಾಗಿವೆ. ನಕ್ರ + ಅಳಿ—ಮೊಸಳೆಗಳ ಸಮೂಹವು, ಮಹಾನಿಧಿಗಳೊಳ್ ಭೂತಂಗಳ್—ನಿಧಿಗಳಿದ್ದ ಕಡೆ ಭೂತಗಳೂ ಸರ್ಪಗಳೂ ಅದಕ್ಕೆ ಕಾವಲಾಗಿದ್ದು, ಮತ್ತೊಬ್ಬರಿಗೆ ಸುಲಭ

ಗ್ರಾಹ್ಯವಾಗದಂತೆ ಅಡ್ಡಿಮಾಡುವುವೆಂದೂ,ಮಂತ್ರಬಲದಿಂದ ಅವುಗಳನ್ನು ನಿಗ್ರಹಿಸಿದವರಿಗೆ ಆ ನಿಧಿಗಳು ಸ್ವಾಧೀನವಾಗುವುದೆಂದೂ ಪ್ರಸಿದ್ಧಿಯುಂಟು.

೨೧. ಒಡನೆ + ಆಕಾಶದ ಗಂಗೆಯಂ– ಆಕಾಶದಲ್ಲಿದ್ದ ದೇವಗಂಗೆಯನ್ನು, ಪೊಡವಿಗೆ—ಭೂಮಿಗೆ, ಈಳ್ತರ್ಪ— ಎಳೆದುತರುವ, ಒಂದು ಸಂಕಲ್ಪದಿಂ—ಒಂದು ದೃಢನಿಶ್ಚಯದಿಂದ,ಮೃಡನಂ– ರುದ್ರನನ್ನು, ಕಬರಿಯೊಳ್—ಜಡೆಯಲ್ಲಿ. ಜಹ್ನು—ಜಹ್ನುವೆಂಬ ಮಹರ್ಷಿಯು, ಪೊಡೆಯೊಳ್—ತನ್ನ ಹೊಟ್ಟೆಯಲ್ಲಿ, ಪೂಳ್ದೊಡಂ—ಹೂಳಿಟ್ಟರೂ, ದಿಲೀಪಾತ್ಮಜಂ—ಭಗೀರಥನು ಪಿಡಿಯಲ್—ಒಂದುಕಾರ್ಯವನ್ನು ಹಿಡಿದಮೇಲೆ, ಸಾಧಿಸರೇ—ಪೂರಯಿಸದೆ ಬಿಡುವರೆ ?

ಭಗೀರಥನು ಗಂಗೆಯನ್ನುತಂದುದು—ಪೂರ್ವದಲ್ಲಿ ಸಗರನೆಂಬ ಚಕ್ರವರ್ತಿಯು ಶತಾಶ್ವಮೇಧಗಳನ್ನು ನಡೆಸಲಾರಂಭಿಸಿ, ಯಾಗದ ಕುದುರೆಯನ್ನು ಕಳುಹಿಸುತಿದ್ದಾಗ, ಕೊನೆಯಲ್ಲಿ ಇಂದ್ರನು ಯಜ್ಞವಿಘ್ನವನ್ನು ಮಾಡಿ ಕೆಡಿಸಬೇಕೆಂಬ ಉದ್ದೇಶದಿಂದ, ಯಾಗಾಶ್ವವನ್ನು ಕದ್ದುಯ್ದು, ಪಾತಾಳದಲ್ಲಿ ತಪಸ್ಸುಮಾಡುತಿದ್ದ ಕಪಿಲಮಹಾಮುನಿಯ ಹಿಂದೆ ಬಚ್ಚಿಟ್ಟನು. ಅರುವತ್ತು ಸಾವಿರಮಂದಿ ಸಗರಪುತ್ರರು ಆ ಯಜ್ಞಾಶ್ವವನ್ನು ಹುಡುಕುವುದಕ್ಕಾಗಿ ಹೊರಟು, ಕೊನೆಗೆ ಭೂಮಿಯನ್ನು ಅಗೆದು ಹಳ್ಳಮಾಡಿ ಪಾತಾಳಕ್ಕೆ ಹೋದರು. ಅವರು ಮಾಡಿದ ಹಳ್ಳಗಳೇ ಸಮುದ್ರಗಳಾಗಿ ಸಾಗರಗಳೆಂಬ ಹೆಸರಿನಿಂದ ಕರೆಯಲ್ಪಡುವುವು. ಈ ಸಗರಪುತ್ರರು ಪಾತಾಳದಲ್ಲಿ ಕಪಿಲಮಹರ್ಷಿಯ ಹಿಂದೆ ತಮ್ಮ ಯಾಗಾಶ್ವವಿರುವುದನ್ನು ಕಂಡು, ಕೋಪದಿಂದ ಹಿಂದುಮುಂದು ತೋರದೆ, ಆತನೇ ತಮ್ಮ ಯಜ್ಞಾಶ್ವವನ್ನು ಕದ್ದುಯ್ದು ವೇಷಧಾರಿಯಾಗಿ ಕುಳಿತಿರಬಹುದೆಂದು ಯೋಚಿಸಿ, ಅವನನ್ನು ನಿಂದಿಸಿ ತಿರಸ್ಕರಿಸಿದರು. ಆಗ ಸಾಕ್ಷಾದ್ಭಗವದಂಶಭೂತನಾದ ಆ ಮಹರ್ಷಿಯು ಕೋಪದಿಂದ ಕಣ್ಣುಬಿಟ್ಟು ನೋಡಿದೊಡನೆ, ಅವನ ಕೋಪಾಗ್ನಿಯಿಂದ ಆ ಸಗರಪುತ್ರರೆಲ್ಲರೂ ಭಸ್ಮೀಭೂತರಾದರು. ಅವರ ಭಸ್ಮರಾಶಿಯನ್ನು ಕೊಚ್ಚಿಸಿ, ಸಂಚಯನ ಕಾರ್ಯದಿಂದ ಅವರಿಗೆ ಸದ್ಗತಿಯನ್ನು ಹೊಂದಿಸುವುದಕ್ಕಾಗಿ ಅನೇಕಕಾಲದವರೆಗೆ, ಆ ವಂಶದಲ್ಲಿ ಹುಟ್ಟಿದವರನೇಕರು ಎಷ್ಟೋ ಪ್ರಯತ್ನಮಾಡಿದರೂ ಸಾಗದೆ ಹೋಯಿತು. ಕೊನೆಗೆ ಆ ವಂಶದಲ್ಲಿ ಹುಟ್ಟಿದ ದಿಲೀಪನ ಮಗನಾದ ಭಗೀರಥನೆಂಬವನು ಆಕಾಶದಲ್ಲಿದ್ದ ದೇವಗಂಗೆಯನ್ನು ಪಾತಾಳಕ್ಕೆ ಸಾಗಿಸಿ, ಆ ಭಸ್ಮರಾಶಿಯನ್ನು ಕೊಚ್ಚಿಸಬೇಕೆಂದು ದೃಢಸಂಕಲ್ಪಮಾಡಿದನು. ಇದಕ್ಕಾಗಿ ಮೊದಲು ಗಂಗೆಯನ್ನು ಕುರಿತು ಬಹುಕಾಲ ತಪಸ್ಸುಮಾಡಿ ತನ್ನನ್ನು ಹಿಂಬಾಲಿಸಿ ಬರುವಂತೆ ಅವಳನ್ನು ಒಪ್ಪಿಸಿದನು. ಅವಳು

ಭೂಮಿಗೆ ಧುಮ್ಮಿಕ್ಕುವಾಗ, ಅವಳ ಪ್ರವಾಹವೇಗಕ್ಕೆ ತಲೆಯನ್ನೊಡ್ಡಿ ತಡೆದುಕೊಳ್ಳುವುದಕ್ಕಾಗಿ ಈಶ್ವರನನ್ನು ಪ್ರಾರ್ಥಿಸಿ, ಅವನನ್ನೊಪ್ಪಿಸಿದನು. ಗಂಗೆಯು ಮೇಲಿಂದಿಳಿಯುವಾಗ, ಅವಳು ತೋರಿಸಿದ ಆರ್ಭಟವನ್ನು ನೋಡಿ, ರುದ್ರನಿಗೆ ಆಗ್ರಹವುಂಟಾಗಲು, ರುದ್ರನು ಆ ಗಂಗೆಯು ಮೇಲೆ ಬಿದ್ದೊಡನೆ ಜಡೆಯಲ್ಲಿ ಕಟ್ಟಿಹಾಕಿಬಿಟ್ಟನು. ಭಗೀರಥನು ತಿರುಗಿ ರುದ್ರನನ್ನು ಪ್ರಾರ್ಥಿಸಿ ಗಂಗೆಯನ್ನು ಬಿಡಿಸಿಕೊಂಡು ಬರುವಾಗ, ದಾರಿಯಲ್ಲಿ, ಪ್ರವಾಹವು ಜಹ್ನುಮುನಿಯ ಅಶ್ರಮಕ್ಕೆ ಪ್ರವೇಶಿಸಲು, ಆ ಮುನಿಯು ಕುಪಿತನಾಗಿ, ಆ ನದಿಯನ್ನು ಒಂದೇ ಆಪೋಶನವಾಗಿ ಕುಡಿದುಬಿಟ್ಟನು. ಆಮೇಲೆ ಭಗೀರಥನು ಆ ಮಹರ್ಷಿಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡಮೇಲೆ ಜಹ್ನುವು ಕರ್ಣಮಾರ್ಗವಾಗಿ ಆ ನದಿಯನ್ನು ಹೊರಕ್ಕೆ ಬಿಟ್ಟನು. ಇಷ್ಟು ಸಾಹಸದಿಂದ ಭಗೀರಥನು ಕೊನೆಗೆ ತನ್ನ ಸಂಕಲ್ಪವನ್ನು ಸಾಧಿಸಿ, ತನ್ನ ಪ್ರಪಿತಾಮಹರಿಗೆ ಅಪರಕ್ರಿಯೆಗಳನ್ನು ಮುಗಿಸಿದನೆಂದು ಪೂರ್ವಕಥೆ.

೨೨. ಅಣುಮಾತ್ರಂಗಳ್—ಅಣುಪ್ರಮಾಣವುಳ್ಳ, ಬೆಳ್ಳಿರುವೆಗಳ್— ಗೆದ್ದಲು ಹುಳುಗಳು, ಮೃತ್ಕಣವೊಂದೊಂದನೆ— ಮಣ್ಣಿನ ಒಂದೊಂದೇ ಅಣುವನ್ನು, ಪರ್ಬುತ್ತಂ—ದೊಡ್ಡ ಹುತ್ತವಾಗಿ, ಅನುಕ್ಷಣಮುಂ—ಪ್ರತಿಕ್ಷಣವೂ, ಓರಣದಿಂ— ಕಾಲಕ್ರಮದಿಂದ. "ಕ್ಷಣಶಃ ಕಣಶಶ್ಚೈವ ವಿದ್ಯಾಮರ್ಥಂ ಚ ಸಾಧಯೇತ್" ಎಂಬರ್ಥವನ್ನು ಈ ಶ್ಲೋಕದಲ್ಲಿ ನಿರೂಪಿಸಿದೆ.

೨೩. ಮೂಜಗಮುಮಂ—ಮೂರು ಲೋಕವನ್ನೂ, ದ್ವಿತೀಯಾವಿಭಕ್ತಿಯ ಮೇಲೆ ಸೇರಿಸತಕ್ಕ "ಉಮ್" ಎಂಬ ಸಮುಚ್ಚಯವು, ಪ್ರಕೃತಿಪ್ರತ್ಯಯಗಳೆರಡಕ್ಕೂ ನಡುವೆ ಬರುವುದು. ಉದಾ—ಮೂಜಗ + ಅಮ್ + ಉಮ್ = ಮೂಜಗ + ಉಮ್ + ಅಮ್ = ಮೂಜಗಮುಮಂ, ಪುಷ್ಪ + ಓಘದಿಂ — ಪುಷ್ಪಸಮೂಹದಿಂದ, ಮನ್ಮಥನಿಗೆ ಪುಷ್ಪಗಳೇ ಬಾಣಗಳೆಂದು ಪ್ರಸಿದ್ಧವು. ಕಣೆಗೆಯ್ದಂ—ಬಾಣವನ್ನಾಗಿ ಮಾಡಿದನು, ಶಕ್ರ + ಆತ್ಮಸಂಜಾತನೊಳ್ — ಇಂದ್ರಪುತ್ರನಲ್ಲಿ (ಕಾಕಾಸುರನಲ್ಲಿ) ಫೇನದೆ—ನೊರೆಯಿಂದ, ಹರಿ—ಇಂದ್ರನು. "ಬಲ್ಲವರಿಗೆ ಹಲ್ಲೇ ಆಯುಧ"ವೆಂಬ ಗಾಥೆಯ ಅರ್ಥವನ್ನು ಈ ಪದ್ಯದಲ್ಲಿ ದೃಷ್ಟಾಂತದೊಡನೆ ವಿವರಿಸಿದೆ.

ಕಾಕಾಸುರನ ಕಥೆ—ಶ್ರೀರಾಮನ ವನವಾಸಕಾಲದಲ್ಲಿ ಸೀತಾದೇವಿಯು ಅರಣ್ಯದಲ್ಲಿದ್ದಾಗ, ಇಂದ್ರಪುತ್ರನಾದ ಜಯಂತನೆಂಬವನು ಕಾಗೆಯ ರೂಪದಿಂದ ಬಂದು, ಸೀತೆಯನ್ನು ಬಾಧಿಸತೊಡಗಲು, ರಾಮನು ಸಮೀಪದಲ್ಲಿದ್ದ ಒಂದು ಹುಲ್ಲುಕಡ್ಡಿಯನ್ನೇ ಬ್ರಹ್ಮಾಸ್ತ್ರಮಂತ್ರದಿಂದ ಅಭಿಮಂತ್ರಿಸಿ, ಅವನಮೇಲೆ ಪ್ರಯೋಗಿಸಿದನು. ಈ ಅಸ್ತ್ರವು

ಬೆನ್ನಟ್ಟಿಬರುವಾಗ ಅದರ ಜ್ವಾಲೆಯನ್ನು ಸಹಿಸಲಾರದೆ ಕಾಕಾಸುರನು ಮೂರು ಲೋಕಗಳನ್ನೂ ಸುತ್ತಿ,ಎಲ್ಲಿಯೂ ತನ್ನನ್ನು ಕಾಪಾಡತಕ್ಕ ಸಮರ್ಥರೊಬ್ಬರೂ ದೊರೆ ಯದಿರಲು, ಕೊನೆಗೆ ರಾಮನ ಪಾದಗಳಲ್ಲಿಯೇ ಬಿದ್ದು ಶರಣಾಗತನಾದನು, ಕೊನೆಗೆ ಸೀತಾದೇವಿಯೇ ಅವನಲ್ಲಿ ಕರುಣೆಯಿಟ್ಟು ಶ್ರೀರಾಮನನ್ನು ಪ್ರಾರ್ಥಿಸಿಕೊಂಡಮೇಲೆ, ರಾಮನು ಅವನನ್ನು ಮನ್ನಿಸಿ, ಪ್ರಾಣದಾನವನ್ನು ಮಾಡಿ, ತಾನು ಪ್ರಯೋಗಿಸಿದ ಬ್ರಹ್ಮಾಸ್ತ್ರಕ್ಕೆ ಆ ಅಸುರನ ಒಂದು ಕಣ್ಣನ್ನುಮಾತ್ರ ಗುರಿಮಾಡಿದುದಾಗಿಯೂ, ಅದ ಕ್ಕಾಗಿಯೇ ಈಗಲೂ ಕಾಗೆಗಳಿಗೆ ಒಂದು ಕಣ್ಣುಹೊರತು ಎರಡನೆಯ ಕಣ್ಣು ಕಾಣಿ ಸುವುದಿಲ್ಲವೆಂದೂ ಪೂರ್ವಕಥೆ.

ವೃತ್ರಾಸುರನ ಕಥೆ—ಪೂರ್ವದಲ್ಲಿ ವೃತ್ರನೆಂಬ ಬ್ರಹ್ಮರಾಕ್ಷಸನೊಬ್ಬನು,ತನಗೆ ಎಂದಿಗೂ ಸಾವೇ ಇಲ್ಲದಿರಬೇಕೆಂದು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ಬ್ರಹ್ಮನು ಪ್ರತ್ಯಕ್ಷನಾದಾಗ, ತನಗೆ ಲೋಕದಲ್ಲಿರುವ ಶುಷ್ಕವಸ್ತು ವಿನಿಂದಾಗಲಿ, ಆರ್ದ್ರವಸ್ತು ವಿನಿಂದಾಗಲಿ ಮರಣವಿಲ್ಲದಿರಬೇಕೆಂದು ಕೇಳಿಕೊಂಡನು. ಬ್ರಹ್ಮನು ಹಾಗೆಯೇ ವರ ವನ್ನು ಕೊಟ್ಟು ಬಿಡಲು, ಆ ರಾಕ್ಷಸನು ಹೆಮ್ಮೆಯಿಂದ ಲೋಕಕಂಟಕನಾಗಿ ದೇವತೆ ಗಳನ್ನು ವಿಶೇಷವಾಗಿ ಬಾಧಿಸತೊಡಗಿದನು. ಒಮ್ಮೆ ಅವನು ಸಮುದ್ರತೀರದಲ್ಲಿ ತಪಸ್ಸಿ ನಲ್ಲಿದ್ದಾಗ, ದೇವೇಂದ್ರನು ಶುಷ್ಕವೂ, ಆರ್ದ್ರವೂ ಅಲ್ಲದ ನೊರೆಯನ್ನೆತ್ತಿ, ವಜ್ರಾಯುಧಶಕ್ತಿಯನ್ನು ಅದರಲ್ಲಿಟ್ಟು,ಅದರಿಂದ ಆರಾಕ್ಷಸನನ್ನು ಕೊಂದನು.

೨೪. ಕಳಿವೂಗಳ್—ಕಳಿತುಹೋದ ಹೂಗಳು, ಜಡಾತ್ಮಂ— ಸೋಮಾರಿ ಸ್ವಭಾವವುಳ್ಳ (ಜಲಾತ್ಮಂ—ಕೇವಲಸ್ವಭಾವವುಳ್ಳ) ಚಂದ್ರನು, ಮನ್ಮಥನಿಗೆ ಪುಷ್ಪ ಗಳೇ ಬಾಣಗಳು, ಕಬ್ಬು ಅವನ ಬಿಲ್ಲು, ಚಂದ್ರನು ಅವನಿಗೆ ಸಹಾಯಕ ನೆಂದು ಪ್ರ ಸಿದ್ಧಿಯು.

೨೫. ಪೊನಲೊಳ್—ಪ್ರವಾಹದಲ್ಲಿ, ಕರಾಳನಕ್ರತತಿಯಂ — ಕ್ರೂರವಾದ ಮೊಸಳೆಗಳ ಸಮೂಹವನ್ನು, ಅನುವಿಂದೆ—ಉಪಾಯದಿಂದ,

೨೬. ಪರ್ಯಂಕದೊಳ್—ಮಂಚದಲ್ಲಿ, ಶಾಖೆಯಂ—ಸೊಪ್ಪನ್ನು, ತಿರಿತಂದು ಕಿತ್ತುತಂದು, ಕಂಥೆಯಂ—ಚಿಂದಿಬಟ್ಟೆಯನ್ನು, ಕೌಶೇಯಮಂ—ಪಟ್ಟೆಮಡಿಯನ್ನು, ಧೀರರಾದವರು ಕಷ್ಟಸುಖಗಳೊಂದನ್ನೂ ಲಕ್ಷಿಸದೆ ಸಮಯೋಚಿತವಾಗಿ ನಡೆದು ಕೊಂಡು, ಹಿಡಿದ ಕಾರ್ಯವನ್ನು ಸಾಧಿಸುವರೆಂದು ಭಾವವು.

೨೭. ಪುರುಹೂತ + ಪ್ರಮುಖ + ಅಮರ + ಇಂದ್ರರ್— ಇಂದ್ರನೇ ಮೊದ ಲಾದ ದೇವಶ್ರೇಷ್ಠರು, ಅನಿಬರ್—ಅಷ್ಟುಮಂದಿಯೂ,ಪೊನ್ನುಡೆಯುಟ್ಟು—ಸುವ

ರ್ಣವಸ್ತ್ರವನ್ನು (ಪೀತಾಂಬರವನ್ನು) ಧರಿಸಿ, ಪೊಂಬೆಟ್ಟಮಂ—ಚಿನ್ನದ ಬೆಟ್ಟವನ್ನು (ಮೇರುಪರ್ವತವನ್ನು)ತಾಳ್ದ—ಹಿಡಿದ,ತ್ರಿಪುರಸಂಹಾರಕ್ಕಾಗಿ ರುದ್ರನು ಮೇರುಪರ್ವತ ವನ್ನೇ ಧನುಸ್ಸನ್ನಾಗಿ ಮಾಡಿದನು. ಪೊಂಬಸಿರಾಂತ— ಹಿರಣ್ಯಗರ್ಭನೆನಿಸಿಕೊಂಡ, ಹೊಟ್ಟೆಯಲ್ಲಿ ಬಂಗಾರವುಳ್ಳ; ಸೃಷ್ಟಿಗೆ ಆರಂಭದಲ್ಲಿ ಒಂದು ಸುವರ್ಣಮಯವಾದ ಅ ದರಿಂದ ಬ್ರಹ್ಮನು ಹುಟ್ಟಿದುದರಿಂದ "ಹಿರಣ್ಯಗರ್ಭ" ನೆಂದು ಹೆಸರು. ಪದ್ಮಭವಂ —ಬ್ರಹ್ಮನು,

ಇಂದ್ರನೇ ಮೊದಲಾದ ಮೂವತ್ತು ಮೂರು ಕೋಟಿ ದೇವತೆಗಳಿರುವಾಗ, ಹರಿ ಹರ ಬ್ರಹ್ಮರೆಂಬ ತ್ರಿಮೂರ್ತಿಗಳಿಗೆ ಮಾತ್ರ ಲೋಕದಲ್ಲಿ ವಿಶೇಷಪ್ರಶಸ್ತಿಯು ಬರುವು ದಕ್ಕೆ, ಅವರಲ್ಲಿ ಹೊನ್ನಿನ ಸಂಬಂಧವೇ ಕಾರಣವಾಗಿರಬೇಕೆಂದು ತಾತ್ಪರ್ಯವು.

೨೮. ಈಶನಂ—(ಭಿಕ್ಷುಸ್ವರೂಪವುಳ್ಳ) ಈಶ್ವರನನ್ನು, ತೊರೆದು, ರತ್ನಾಕ ರಕ್ಕೆ-(ಅನೇಕ ರತ್ನಗಳಿಗೆ ನೆಲೆಯಾದ) ಸಮುದ್ರಕ್ಕೆ, ಐದುವಳ್.

೨೯. ಈ ಪದ್ಯದಲ್ಲಿ ಶ್ರೀವಿಷ್ಣುವಿನ ದಶಾವತಾರ ವಿಷಯಯಾದ ಅರ್ಥಾಂತರವೊಂದು ಗಮ್ಯವಾಗಿದೆ. ಹೇಗೆಂದರೆ—ನರರೂಪಂದೊರೆದಿರ್ಕೆ—ಮನುಷ್ಯಸ್ವರೂಪವೇ ಇಲದಿದ್ದ ರೂ, ಎಂದರೆ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹಾವತಾರಗಳಲ್ಲಿ ಮನುಷ್ಯರೂಪ ವಿಲ್ಲ. ಧರ್ಮಪ್ರವರ್ತಕರನ್ನು ವಂಚಿಸುವುದೆಂದರೆ ವಾಮನಾವತಾರದಲ್ಲಿ ದಾನಕೊಡುವು ದಕ್ಕೆ ಬಂದ ಬಲಿಯನ್ನು ನಿಗ್ರಹಿಸಿದುದು. ಪರಶುರಾಮಾವತಾರದಲ್ಲಿ ತಂದೆಯ ಆಜ್ಞೆ ಯಮೇಲೆ ತಾಯಿಯ ತಲೆಯನ್ನು ಕಡಿದುದು. ರಘುರಾಮಾವತಾರದಲ್ಲಿ ಗರ್ಭಿಣಿಯಾದ ಸೀತೆಯನ್ನು ವನಕ್ಕೆ ಕಳುಹಿಸಿದುದು. ಬಲರಾಮಾವತಾರದಲ್ಲಿ ಸುರಾಪಾನಮಾಡಿದುದು. ಬಲರಾಮನು ದಶಾವತಾರಗಳಲ್ಲಿ ಸೇರಿದಂತೆ ಪ್ರಸಿದ್ಧಿಯಿಲ್ಲವಾದರೂಕೆಲವು ಕಡೆ"ರಾಮೋ ರಾಮಶ್ಚ ರಾಮಶ್ಚ" ಎಂದು ಪಾಠಾಂತರವೂ ಇರುವುದರಿಂದ, ಬಲರಾಮನನ್ನು ಇಲ್ಲಿ ಸೇರಿಸಿದೆ. ಕೃಷ್ಣಾವತಾರದಲ್ಲಿ ಸ್ತ್ರೀಲೋಲನಾಗಿದ್ದುದು. ಕಲ್ಕ್ಯವತಾರದಲ್ಲಿ ದುಷ್ಟ ಜನರನ್ನೆಲ್ಲಾ ಕೊಲ್ಲುವುದು. ಹೀಗೆ ದಶಾವತಾರಕಾರ್ಯಗಳಿಂದ ಪ್ರಸಿದ್ಧನಾದ ಸಿರಿ ಯಾಣ್ಮಂ—ಲಕ್ಷ್ಮೀಪತಿಯಾದ ಮಹಾವಿಷ್ಣುವೇ, ಸಲೆ—ವಿಶೇಷವಾಗಿ, ಸೇವ್ಯನಲ್ತೆ—ಎಲ್ಲ ರಿಗೂ ಸೇವಿಸಲ್ಪಡತಕ್ಕವನಲ್ಲವೆ? ಎಂಬುದು ಇಲ್ಲಿ ಗಮ್ಯಾರ್ಥವು.

ವಾಮನನು ಬಲಿಯನ್ನು ಮೆಟ್ಟಿದುದು :— ಪ್ರಹ್ಲಾದನಿಗೆ ಮೊಮ್ಮಗನಾದ ಬಲಿಯೆಂಬ ದಾನವನು ದೇವತೆಗಳನ್ನು ಸೋಲಿಸಿ ಇಂದ್ರಾಧಿಪತ್ಯವನ್ನು ಕಿತ್ತುಕೊಂಡು, ಸತ್ಯದಿಂದಲೂ, ಧರ್ಮದಿಂದಲೂ ಅಸಮಾನನೆನಿಸಿ ಸ್ವರ್ಗಸಾಮ್ರಾಜ್ಯವನ್ನನುಭವಿಸು ತಿದ್ದನು. ಇಂದ್ರಾದಿದೇವತೆಗಳು ತಮ್ಮ ಕಷ್ಟವನ್ನು ಶ್ರೀಮಹಾವಿಷ್ಣುವಿನಲ್ಲಿ ಹೇಳಿ

ಕೊಂಡು ತಮ್ಮನ್ನುದ್ಧರಿಸಬೇಕೆಂದು ಪ್ರಾರ್ಥಿಸಲು, ಮಹಾವಿಷ್ಣುವು ವಾಮನಾವತಾರ ವನ್ನೆತ್ತಿ, ಒಬ್ಬಗಿಡ್ಡ ದೇಹವುಳ್ಳ ಬ್ರಹ್ಮಚಾರಿಯಾಗಿ, ಒಮ್ಮೆ ಬಲಿಯು ಯಾಗಮಾಡು ತಿದ್ದ ಸ್ಥಳಕ್ಕೆ ಬಂದು, ಮೂರಡಿಯಷ್ಟು ನೆಲವನ್ನು ತನಗೆ ದಾನಕೊಡಬೇಕೆಂದು ಕೇಳಿದನು. ಉದಾರಬುದ್ಧಿಯುಳ್ಳ ಬಲಿಯು ಹಾಗೆಯೇ ಆಗಲೆಂದು ವಾಗ್ದಾನ ಮಾಡಿ, ಭೂಮಿಯನ್ನು ಧಾರೆಯೆರೆದು ಕೊಡುತ್ತಿರುವಾಗ, ಧಾರೆಯ ನೀರು ಬಿದ್ದೊ ಡನೆ ವಾಮನನು ಭೂಮ್ಯಾಕಾಶವನ್ನೆಲ್ಲಾ ಆವರಿಸುವಂತೆ ಬೆಳೆದು, ಒಂದಡಿಗೆ ಭೂಮಿಯೆಲ್ಲವನ್ನೂ, ಮತ್ತೊಂದಡಿಗೆ ಆಕಾಶವೆಲ್ಲವನ್ನೂ ಅಳೆದು, ಮೂರನೆಯ ಹಜ್ಜೆ ಗೆ ಸ್ಥಳವೆಲ್ಲೆಂದು ಕೇಳಲು, ಸತ್ಯಸಂಧನಾದ ಬಲಿಯು ಬೇರೆ ಸ್ಥಳವಿಲ್ಲದುದಕ್ಕಾಗಿ ತನ್ನ ತಲೆಯನ್ನೊಡ್ಡಿದನು. ಆಗ ವಾಮನನು ಅವನನ್ನು ತನ್ನ ಪಾದದಿಂದ ಮೆಟ್ಟಿ ಪಾತಾಳಕ್ಕಿಳಿಸಿ ಸ್ವರ್ಗಾಧಿಪತ್ಯವನ್ನು ಮೊದಲಿನಂತೆ ಇಂದ್ರನ ವಶಕೊಪ್ಪಿಸಿದನು. ಬಲಿಯ ಸತ್ಯಧರ್ಮಗಳಿಗೆ ಮೆಚ್ಚಿ ವಾಮನನು, ಯಾವಾಗಲೂ ಆತನ ಮನೆಯ ಬಾಗಿ ಲನ್ನು ಕಾಯುತ್ತ, ಅವನಿಗೆ ಪ್ರತಿಕ್ಷಣವೂ ತಾನು ದರ್ಶನವನ್ನು ಕೊಡುತ್ತಿರುವುದಾಗಿ ಅನುಗ್ರಹಿಸಿದನು.

ಪರಶುರಾಮನು ತಾಯಿಯನ್ನು ಕೊಂದುದು:—ಪರಶುರಾಮನ ತಾಯಿ ಯಾದ ರೇಣುಕೆಯು ಒಮ್ಮೆ ಜಲಾಹರಣಾರ್ಥವಾಗಿ ನದಿಗೆ ಹೋಗಿದ್ದಾಗ, ಅಲ್ಲಿ ಮಹಾ ತೇಜಸ್ವಿಯಾದ ಕಾರ್ತವೀರ್ಯಾರ್ಜುನನೆಂಬ ರಾಜನನ್ನು ಕಂಡು, ಆಶ್ಚರ್ಯದಿಂದ ಮೈಮರೆ ತು ಮೋಹಪರವಶಳಾಗಿ ಅಲ್ಲಿಯೇ ಬಹಳ ಹೊತ್ತು ನಿಂತುಬಿಟ್ಟಳು. ಕೊನೆಗೆ ಹೊತ್ತು ಮೀರಿ ಆಶ್ರಮಕ್ಕೆ ಬಂದಾಗ, ಅವಳ ಪತಿಯಾದ ಜಮದಗ್ನಿಯು, ಅವಳು ಅಷ್ಟು ತಾಮಸಮಾಡಿ ಬಂದುದಕ್ಕೆ ಕಾರಣವನ್ನು ತಿಳಿದು, ಅವಳ ಪಾಪಬುದ್ಧಿಗೆ ಕೊಲೆಯೇ ಪ್ರಾಯಶ್ಚಿತ್ತವೆಂದು ನಿಶ್ಚಯಿಸಿ, ಅವಳ ತಲೆಯನ್ನು ಕಡಿಯುವಂತೆ ತನ್ನ ಪುತ್ರರಿಗೆ ಆಜ್ಞಾಪಿಸಿದನು. ಬೇರೆ ನಾಲ್ಕುಮಂದಿ ಪುತ್ರರೂ ಮಾತೃವಧವೆಂಬ ಪಾಪಕ್ಕೆ ಹೆದರಿ ಅವನ ಆಜ್ಞೆಯನ್ನು ನಿರಾಕರಿಸಿದರು. ಕೊನೆಗೆ ಪರಶುರಾಮನು ಪಿತೃವಾಕ್ಯಪರಿಪಾ ಲನವೇ ತನಗೆ ಮುಖ್ಯಧರ್ಮವೆಂದು ತಾಯಿಯ ತಲೆಯನ್ನು ಕಡಿದುಬಿಟ್ಟನು. ಕೊನೆಗೆ ಜಮದಗ್ನಿಯು ಅವನಲ್ಲಿ ಪ್ರಸನ್ನನಾಗಿ, ಬೇಕಾದ ವರವನ್ನು ಕೇಳೆಂದು ಹೇಳಿದಾಗ ತನ್ನ ತಾಯಿಯನ್ನು ಪುನಃ ಬದುಕಿಸಿ, ಅವಳನ್ನು ಮೊದಲಿನಂತೆ ಪ್ರೀತಿಯಿಂದ ಪರಿಗ್ರ ಹಿಸಬೇಕೆಂದು ಕೇಳಿಕೊಂಡನು. ಆವರಂತೆಯೇ ಜಮದಗ್ನಿಯು ಅನುಗ್ರಹಿಸಿದನು.

ರಾಮನು ಗರ್ಭಿಣಿಯಾದ ಸೀತೆಯನ್ನು ಕಾಡಿಗೆ ಕಳುಹಿಸಿದುದು—ರಾವಣ ವಧೆ ಯಾದ ಮೇಲೆ ರಾಮನು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗಿ ಜನರೆಲ್ಲರಿಗೂ ತೃಪ್ತಿ

ಯುಂಟಾಗುವಂತೆ ಧರ್ಮದಿಂದ ರಾಜ್ಯಭಾರಮಾಡುತಿದ್ದಾಗ, ತನ್ನ ವಿಷಯವಾಗಿ, ಪ್ರಜೆಗಳ ಅಭಿಪ್ರಾಯವೇನೆಂದು ತಿಳಿದು ಬರುವುದಕ್ಕಾಗಿ ಅಲ್ಲಲ್ಲಿಗೆ ಗೂಢಚಾರರನ್ನು ಕಳುಹಿಸುವ ವಾಡಿಕೆಯಿತ್ತು. ಹೀಗಿರುವಾಗ ಒಮ್ಮೆ ಆ ಊರಿನ ಅಗಸನೊಬ್ಬನು ತನ್ನ ಹೆಂಡತಿಯನ್ನು ಮನೆಗೆ ಸೇರಿಸದೆ ಹೊರಗೆ ಹೊರಡಿಸಿದುದಕ್ಕಾಗಿ ಹೆಂಡತಿಯ ಬಂಧುಗಳು ಬಂದು ಅವನಿಗೆ ಸಮಾಧಾನ ಹೇಳುತ್ತಿದ್ದಾಗ, ಅವನು "ಬಿಟ್ಟಹೆಂಡತಿಯನ್ನು ತಿರುಗಿ ಮನೆಗೆ ಸೇರಿಸುವುದಕ್ಕೆ ರಾಮನಂತೆ ನಾನೇನೂ ಅಷ್ಟೊಂದು ಅವಿವೇಕಿಯಲ್ಲ" ವೆಂದು ಹೇಳುತ್ತಿದ್ದನು. ಇದನ್ನು ಕೇಳುತಿದ್ದ ಗೂಢ ಚಾರನೊಬ್ಬನು, ಅದೇ ಮಾತನ್ನು ರಾಮನಿಗೆ ಬಂದು ತಿಳಿಸಲು, ರಾಮನು, ತಾನು ಸೀತೆಯನ್ನು ಪರಿಗ್ರಹಿಸಿದುದು ಜನಗಳಿಗೆ ಅಸಮ್ಮತವಾಗಿರಬಹುದೆಂದು ಭ್ರಮಿಸಿ, ಜನರ ಮೆಚ್ಚಿಕೆಗಾಗಿ ಗರ್ಭಿಣಿಯಾಗಿದ್ದ ಸೀತೆಯನ್ನು ಕಾಡಿನಲ್ಲಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು.

ಶ್ರೀಮಂತನು ಎಷ್ಟೇ ಕುರೂಪಿಯಾಗಿದ್ದರೂ, ಧಾರ್ಮಿಕರಾದ ಸಜ್ಜನರನ್ನು ವಂಚಿಸತಕ್ಕವನಾಗಿದ್ದರೂ, ಮಾತೃವಧವನ್ನು ಮಾಡಿದ ಮಹಾಪಾತಕಿಯಾಗಿದ್ದರೂ, ನಿಷ್ಕಾರಣವಾಗಿ ಪತ್ನೀಪರಿತ್ಯಾಗಮಾಡಿದವನಾಗಿದ್ದರೂ, ಸುರಾಪಾನ, ಜಾರಕೃತ್ಯ, ಕೊಲೆ, ಮುಂತಾದ ಅಕೃತ್ಯಗಳನ್ನು ನಡೆಸಿದವನಾಗಿದ್ದರೂ, ಅವನ ಹಣಕ್ಕಾಗಿಯೇ ಅವನನ್ನು ಎಲ್ಲರೂ ಗೌರವಿಸುವರೆಂದರ್ಥವು.

೩೦. ಈ ಪದ್ಯದಲ್ಲಿ, ಮೆಟ್ಟು, ಸದೆ, ಮುಂತಾದ ಬೇರೆಬೇರೆ ಅನೇಕ ಪದಗಳು ಪೆಟ್ಟುಕೆಡಿಮೆ ಸಮಾನಾರ್ಥಕಗಳು.

೩೧. ಎಡೆಯೊಳ್—ತಾನು ಹೋಗುವ ದಾರಿಯ ಅಕ್ಕಪಕ್ಕಗಳಲ್ಲಿ, ತುಳುಂಕೆ ತೇಲ್ವ—ಜಲಸಮೃದ್ಧಿಯಿಂದ ತುಳುಕಾಡುತ್ತಿರುವ,

ಹಣವಿದ್ದ ಕಡೆಗೇ ಹಣವು ಸೇರುವುದೇ ಹೊರತು, ಬಡವರನ್ನು ಯಾರೂ ಕೇಳುವುದಿಲ್ಲವೆಂದು ಇದರ ಮುಖ್ಯತಾತ್ಪರ್ಯವು.

೩೨. ಕನ್ಯಾರತ್ನಮಂ—ಸ್ತ್ರೀಯರಲ್ಲಿ ರತ್ನಪ್ರಾಯಳಾದ ಮಹಾಲಕ್ಷ್ಮಿಯನ್ನು, ರತ್ನಮಂ—ಕೌಸ್ತುಭರತ್ನವನ್ನು, ಸುಧೆಯಂ—ಅಮೃತವನ್ನು, ಸುರದ್ರುಮಮುಮಂ—ಕಲ್ಪವೃಕ್ಷವನ್ನೂಕೂಡ, ಭಿಕ್ಷುವೆ—(ಮೊದಲೇ ದಾರಿದ್ರ್ಯದಿಂದ ಭಿಕ್ಷೆಯೆತ್ತುತ್ತಿರುವ) ರುದ್ರನುಮಾತ್ರವೇ,

ಸಮುದ್ರಮಥನದ ಕಥೆ—ಆಗಾಗ ದಾನವರಿಂದ ಪರಾಜಿತರಾಗಿ, ಕಷ್ಟಕ್ಕೊಳಗಾಗುತಿದ್ದ ದೇವತೆಗಳಿಗೆ, ಅಮೃತವನ್ನು ಸಂಪಾದಿಸಿಕೊಟ್ಟು, ಅವರಿಗೆ

ಸಾವಿಲ್ಲದಂತೆಯೂ, ದೇಹಬಲವು ಹೆಚ್ಚುವಂತೆಯೂ ಮಾಡುವ ಉದ್ದೇಶದಿಂದ, ಕ್ಷೀರ ಸಮುದ್ರಮಥನಕ್ಕಾಗಿ ಚತುರ್ಮುಖ ಬ್ರಹ್ಮನು ಅವರನ್ನು ಪ್ರೋತ್ಸಾಹಿಸಿದನು. ಆ ಮಹಾಕಾರ್ಯವು ದೇವತೆಗಳಿಂದ ಮಾತ್ರ ನಡೆಸಲು ಸಾಧ್ಯವಿಲ್ಲದಂತಿದ್ದುದರಿಂದ, ದಾನವರಿಗೂ ಅದರಲ್ಲಿ ಭಾಗಕೊಡುವುವಾಗಿ ಆಶೋತ್ತರವನ್ನು ಹುಟ್ಟಿಸಿದುದರಮೇಲೆ, ಅವರೂ ಸಹಾಯಕರಾದರು. ಮಂದರಪರ್ವತವನ್ನೇ ಕಡೆಗೋಲನ್ನಾಗಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿ, ದೇವದಾನವರಿಬ್ಬರೂ ಕ್ಷೀರಸಮುದ್ರವನ್ನು ಮಥನಮಾಡುತ್ತಿರುವಾಗ, ಮೊದಲು ಹಾಲಾಹಲವೆಂಬ ಮಹಾಘೋರವಾದ ವಿಷವೊಂದು ಹುಟ್ಟಿತು. ಅದರ ವೇಗಕ್ಕೆ ತಡೆಯಲಾರದೆ ಲೋಕವೆಲ್ಲಾ ಭಯಪಟ್ಟು ತತ್ತಳಿಸುತ್ತಿರಲು, ಪರಮಶಿವನು ಲೋಕರಕ್ಷಣಾರ್ಥವಾಗಿ ಅದನ್ನು ಪಾನಮಾಡಿ ತನ್ನ ಕಂಠದಲ್ಲಿ ಧರಿಸಿದನು. ಅದಕ್ಕಾಗಿಯೇ ಅವನಿಗೆ ವಿಷಕಂಠನೆಂದು ಹೆಸರು. ಮಥನಕಾಲದಲ್ಲಿಯೇ, ಆ ಸಮುದ್ರದಿಂದ, ಅಮೃತವು ಹುಟ್ಟುವಾಗ, ಲಕ್ಷ್ಮಿ, ಕೌಸ್ತುಭಮಣಿ ಕಲ್ಪವೃಕ್ಷಗಳು, ಐರಾವತವೆಂಬ ಆನೆ, ಉಚ್ಚೈಶ್ರವಸ್ಸೆಂಬ ಕುದುರೆ, ಚಂದ್ರಕಲೆ, ಚಿಂತಾಮಣಿ, ಇವೆಲ್ಲಾ ಹುಟ್ಟಿದುವು. ಅವುಗಳಲ್ಲಿ ಲಕ್ಷ್ಮಿ, ಕೌಸ್ತುಭಮಣಿ ಇವೆರಡೂ ವಿಷ್ಣುವಿಗೂ, ಉಳಿದುವುಗಳೆಲ್ಲಾ ದೇವತೆಗಳಿಗೂ ಸೇರಿದುವು.

೩೩. ಕಡುಪಿಂ—ಕ್ರೌರ್ಯದಿಂದ, ಅನಲಂಗೆ—ಬೆಂಕಿಗೆ, ಉದ್ರೇಕಮಂ ಮಾಡಿ—ಮತ್ತಷ್ಟು ಉತ್ತೇಜನವನ್ನು ಕೊಟ್ಟು, ಒಡನಾಡಿಯಾಗಿ—ಸ್ನೇಹಿತನಾಗಿ, ಪವನಂ—ಗಾಳಿಯು, ಸೊಡರೊಳ್—ದೀಪದಲ್ಲಿ, ಕಾರ್ಶ್ಯದಿನಿರಲ್—ಕೃಶತೆಯಿಂದ (ಸಣ್ಣನಾಗಿ) ಇರಲು, ನಂದಿಪಂ—ಆರಿಸುವನು. ಭಾಗ್ಯದಶೆಯಲ್ಲಿ ಮಿತ್ರರಾಗಿದ್ದವರೇ ಬಡತನದಲ್ಲಿ ಶತ್ರುಗಳಾಗುವರೆಂದು ಮುಖ್ಯಾರ್ಥವು.

೩೪. ತನಗೆ + ಐವೊಗಂ, ಆಯ್ತು—ತನಗೇ ಐದು ಬಾಯಿಗಳುಂಟಾಗಿವೆ, ಎಂದು ತಿರಿತಂದು—(ಆ ಐದುಬಾಯಿಗೂ ಆಹಾರವನ್ನೊದಗಿಸಲಾರದೆ) ತಿರುಪೆಮಾಡಿ ತಂದು, ಉಣ್ಬ—ಜೀವಿಸುವ, ಹರಂಗೆ—ರುದ್ರನಿಗೆ, ಒವ್ಮೊದಲ್—ಆದಿಯಲ್ಲಿಯೇ, ಆನೆಮೊಗದಿಂ—ಆನೆಯ ಮುಖದಿಂದ, ಆನೆಯ ಹಾಗೆ ದೊಡ್ಡ ಬಾಯುಳ್ಳ, (ವಿನಾಯಕನು) ಷಡಾನನದಿಂ—ಆರುಮುಖದಿಂದ (ಷಣ್ಮುಖನು) ಚಂಡಿಕೆಯಾದಳ್—ಚಂಡಿ ಸ್ವಭಾವವುಳ್ಳವಳಾದಳು (ಪಾರ್ವತಿಗೆ ಚಂಡಿಯೆಂಬ ನಾಮಾಂತರವು.)

ತಾ—ಲೋಕಸಾಧಾರಣವಾಗಿಲ್ಲದೆ ತನಗೆ ಐದು ಬಾಯಿಗಳಾದುದಕ್ಕಾಗಿ, ರುದ್ರನು ಆ ಬಾಯಿಗಳನ್ನು ತುಂಬುವುದಕ್ಕೆ ತಾನೇ ಭಿಕ್ಷುವಾಗಿ ತಿರುಗುತ್ತಿರುವಾಗ, ಅವನ ದುರದೃಷ್ಟಕ್ಕೆ, ಅವನಿಗೆ ಮೊದಲು ಹುಟ್ಟಿದ ಮಗನು (ವಿಘ್ನೇಶ್ವರನು) ಆನೆ

ಯ ಮುಖದವನಾದನು. ಎರಡನೆಯಮಗನು ತನಗಿಂತ ಒಂದುಬಾಯಿ ಹೆಚ್ಚಾಗಿ ಆರುಮುಖಗಳಿಂದ ಹುಟ್ಟಿದನು. ತನ್ನ ಗೃಹಿಣಿಯಾದರೂ ತನಗೆ ಅನುಕೂಲಳಾಗಿದ್ದು ಈ ಕಷ್ಟಸಂಸಾರವನ್ನು ನಿರ್ವಹಿಸುವಳೋ, ಎಂದರೆ, ಅವಳೂ ಚಂಡಿಯ ಸ್ವಭಾವ ವುಳ್ಳವಳು ಆದುದರಿಂದ ಬಡವರಿಗೆ ಕುಟುಂಬಕಷ್ಟವೂ ಹೆಚ್ಚೆಂದು ಭಾವವು.

೩೫. ಗುಣಸಂದೋಹ ನಿಯುಕ್ತಮಾದೊಡಂ—ಸುಗುಣ ಸಮೂಹದಿಂದ ಕೂಡಿದ್ದರೂ (ನೂಲೆಳೆಗಳಿಂದ ಮಾಡಿದ ಹಗ್ಗದಿಂದ ಕಟ್ಟಲ್ಪಟ್ಟಿದ್ದರೂ) ಅಧಃಪಾತಕ್ಕೆ ಪಕ್ಕಾಗಿ—ಅಧೋಗತಿಗೆ ಈಡಾಗಿ (ಕೆಳಮುಖವಾಗಿ ಇಳಿದು), ಕೂಪದೊಳ್—ಸೇದುವ ಬಾವಿಯಲ್ಲಿ, (ಯಾರಿಗೂ ತಿಳಿಯದ ಕೂಪಪ್ರಾಯವಾದ ಸ್ಥಲದಲ್ಲಿ) ಮಣಿಗುಂ—ಅಡಗಿರುವುದು. ರಿಕ್ತದಶೆಯುಂ (ನೀರಿಲ್ಲದೆ) ಶೂನ್ಯಸ್ಥಿತಿಯನ್ನು (ದಾರಿದ್ರ್ಯದಶೆಯನ್ನು) ಶಿರೋಭಾಗದೊಳ್—(ತಲೆಯಮೇಲೆ) ಉಚ್ಚಸ್ಥಳದಲ್ಲಿ, ರಿಕ್ತರ—ಬಡವರ,

ತಾತ್ಪರ್ಯ—ಗುಣವಂತನಾಗಿದ್ದರೂ ದರಿದ್ರನಿಗೆ ಅಧೋಗತಿಯೂ, ಗುಣಹೀನನಾಗಿದ್ದರೂ ಶ್ರೀಮಂತನಿಗೆ ಉನ್ನತಪದವಿಯೂ ಸಹಜವು. ನೀರಿಲ್ಲದ ಶೂನ್ಯಘಟವು ಗುಣವಿಶಿಷ್ಟನಾಗಿದ್ದರೂ ಬಾವಿಯಲ್ಲಿ ಮುಳುಗಬೇಕಾಗುವುದು. ತುಂಬಿದ ಘಟವು ಗುಣಸಹಿತವಾದರೂ (ಕಂಠಕ್ಕೆ ಸುತ್ತಿದ್ದ ಸುಲುಕನ್ನು ತೆಗೆದು ಬಿಟ್ಟಮೇಲೆ) ಅದನ್ನು ತಲೆಯಮೇಲೆ ಹೊತ್ತುಕೊಂಡು ಹೋಗುವರು.

೩೬. ಪರಿಭೂತನಾಗೆ—ತಿರಸ್ಕರಿಸಲ್ಪಡುತಿದ್ದಷ್ಟೂ, ನಿರ್ವೇದನುಂ—ದುಃಖವನ್ನು, ಉದ್ವಿಗ್ನನಾಗೆ—ದುಃಖಾಕುಲನಾಗಲು,

೩೭. ಸಾಪತ್ನ್ಯವಿದ್ವೇಷದಿಂ—ಸವತಿತನದ ದ್ವೇಷದಿಂದ, ಲುಬ್ಧರೊಳ್ — ಲೋಭಿಗಳಲ್ಲಿ ಮಾತ್ರ; ಸಾಮಾನ್ಯದಾಗಿ ಹಣವೆಂಬುದು ಲೋಭಿಗಳಲ್ಲಿಯೇ ಸೇರುವುದೇಹೊರತು, ಶೂರರೂ, ಉದಾರಿಗಳೂ, ವಿದ್ಯಾವಂತರೂ ಪ್ರಾಯಕವಾಗಿ ಬಡತನವನ್ನೇ ಅನುಭವಿಸುತ್ತಿರುವರೆಂದು ಇದರ ಭಾವವು.

೩೮. ದಾರಿದ್ರ್ಯವೆಂಬುದು ಲೋಕದಲ್ಲಿ ಸ್ವತಸ್ಸಿದ್ಧವಾಗಿದ್ದು, ಐಶ್ವರ್ಯವೆಂಬುದು ಆಗಂತುಕವಾದುದರಿಂದ, ಇವೆರಡನ್ನೂ ಇಲ್ಲಿ ಮೂದೇವಿ, ಶ್ರೀದೇವಿಯೆಂದು ಬ್ರಹ್ಮನಿಗೆ ಎರಡು ಮಂದಿ ಕನ್ಯೆಯರನ್ನಾಗಿ ರೂಪಿಸಿದೆ. ತಂದೆತಾಯಿಗಳು. ತಮ್ಮ ಕನ್ಯೆಯರಿಗೆ, ಅದರಲ್ಲಿಯೂ ಮುಖ್ಯವಾಗಿ ಜ್ಯೇಷ್ಠಕನ್ಯೆಗೆ ವಿವಾಹಮಾಡಿಕೊಡುವಾಗ, ಉತ್ತಮಗುಣವುಳ್ಳ ವರನನ್ನು ಹುಡುಕಿ, ಅಂತವನಿಗೇ ಕೊಡುವುದು ಲೋಕಸ್ವಭಾವ

ವಾಗಿರುವಂತೆ, ಬ್ರಹ್ಮನು ಗುಣಾಢ್ಯರನ್ನು ಹುಡುಕಿ ತನ್ನ ಮೊದಲನೆಯ ಕನ್ಯೆಯಾದ ದುರ್ಗತಿಯೆಂಬ ಕನ್ಯೆಯನ್ನು ಕೊಡುವುದೇನೂ ಆಶ್ಚರ್ಯವಲ್ಲವು. ಎಂದರೆ, ಲೋಕದಲ್ಲಿ ಒಳ್ಳೇ ಕುಲಶೀಲವಯೋರೂಪ ವಿದ್ಯಾದಿಗಳಿಂದ ಕೂಡಿದವರು ಪ್ರಾಯಕವಾಗಿ ದರಿದ್ರರಾಗಿರುವರೆಂದು ಇದರ ಮುಖ್ಯಭಾವವು.

೩೯. ಶಿಬಿಚಕ್ರವರ್ತಿ—ಶಿಬಿಚಕ್ರವರ್ತಿಯು ಬಹಳದಾನಶೀಲನೆಂದೂ, ಧರ್ಮಾತ್ಮನೆಂದೂ ಹೆಸರುಗೊಂಡಿದ್ದನು. ಇವನ ಗುಣವನ್ನು ಪರೀಕ್ಷಿಸಿನೋಡಬೇಕೆಂದು, ಇಂದ್ರಾಗ್ನಿಗಳಿಬ್ಬರೂ, ಗಿಡುಗ ಮತ್ತು ಪಾರಿವಾಳವೆಂಬ ಎರಡು ಪಕ್ಷಿಗಳ ರೂಪವನ್ನುತಾಳಿ, ಗಿಡುಗನು ಪಾರಿವಾಳವನ್ನು ಭಕ್ಷಿಸಲು ಬೆನ್ನಟ್ಟಿಬರುವಂತೆ ನಟಿಸುತ್ತ. ಶಿಬಿಯ ಆಸ್ಥಾನಕ್ಕೆ ಬಂದರು. ಪಾರಿವಾಳವು ಶಿಬಿಯ ಕಾಲಮೇಲೆಬಿದ್ದು, ತನಗೆ ಪ್ರಾಣದಾನಮಾಡಬೇಕೆಂದು ಅವನಲ್ಲಿ ಮೊರೆಯಿಟ್ಟಿತು. ಗಿಡುಗವು ತನಗೆ ದೈವಲಬ್ಧವಾದ ಆಹಾರವನ್ನು ತಪ್ಪಿಸುವುದು ಧರ್ಮವಲ್ಲವೆಂದು ವಾದಿಸಿ, ತನ್ನ ಆಹಾರಕ್ಕಾಗಿ ಆ ಪಾರಿವಾಳವನ್ನಾಗಲಿ, ಅದರ ತೂಕಕ್ಕೆ ತಕ್ಕಷ್ಟು ಆ ರಾಜನ ದೇಹಮಾಂಸವನ್ನಾಗಲಿ ಕೊಟ್ಟೇತೀರಬೇಕೆಂದು ಹಟಮಾಡಿತು. ಆಗ ಶಿಬಿಯು ತನ್ನ ದೇಹಮಾಂಸವನ್ನಾದರೂ ಕತ್ತರಿಸಿಕೊಡುವೆನಲ್ಲದೆ, ತನ್ನಲ್ಲಿ ಮರೆಹೊಕ್ಕ ಪ್ರಾಣಿಯನ್ನು ಬಿಟ್ಟುಕೊಡಲಾರೆನೆಂದು ಹೇಳಿ, ತನ್ನದೇಹವನ್ನು ಕುಯ್ದು ಎಷ್ಟೆಷ್ಟು ಮಾಂಸವನ್ನಿಟ್ಟರೂ ಆ ಪಾರಿವಾಳದ ತೂಕವು ಹೆಚ್ಚಾಗಿಯೇ ಕಾಣಿಸುತಿತ್ತು ಕೊನೆಗೆ ತಾನೇ ಆ ತಕ್ಕಡಿಯಲ್ಲಿ ಕುಳಿತುಬಿಟ್ಟನು. ಅವನ ಧೈರ್ಯಕ್ಕೂ ಸತ್ಯಕ್ಕೂ ಮೆಚ್ಚಿ ಇಂದ್ರಾಗ್ನಿಗಳು ನಿಜರೂಪವನ್ನು ತೋರಿಸಿ, ಅವನಿಗೆ ಬೇಕಾದ ವರಗಳನ್ನು ಕೊಟ್ಟರು.

ದಧೀಚಿಮುನಿಯ ಕಥೆ— ದಾನವಸಂಹಾರಕ್ಕೆ ತಕ್ಕ ಆಯುಧವೊಂದನ್ನು ಸಂಪಾದಿಸಬೇಕೆಂದು ದೇವೇಂದ್ರನು ಶ್ರೀ ಮಹಾವಿಷ್ಣುವಿನಲ್ಲಿ ಪ್ರಾರ್ಥಿಸಲು, ಮಹಾತ್ಮನಾದ ದಧೀಚಿಮುನಿಯ ಎಲುಬನ್ನುತಂದು ಅದರಿಂದ ಆಯುಧವನ್ನುಮಾಡಿದರೆ ಅದು ಶತ್ರುಭೇದಕವಾಗಿಯೂ, ಇತರಿಗೆ ಅಭೇಧ್ಯವಾಗಿಯೂ ಇರುವುದೆಂದು ಹೇಳಿಕಳುಹಿಸಿದನು. ಅದರಂತೆ ಇಂದ್ರನು ತಪೋನಿಷ್ಠನಾಗಿ ಕುಳಿತಿದ್ದ ದಧೀಚಿಯಬಳಿಗೆ ಬಂದು ಪ್ರಾರ್ಥಿಸಲು, ಅವನು ಅದಕ್ಕೆ ಸಮ್ಮತಿಸಿ ತನ್ನ ದೇಹವನ್ನು ಯಥೇಚ್ಛವಾಗಿ ಛೇದಿಸಿ ಎಲುಬನ್ನು ತೆಗೆದುಕೊಳ್ಳಲು ಸಮ್ಮತಿಸಿದನು. ಅದರಂತೆ ಇಂದ್ರನು ಅವನ ದೇಹದಲ್ಲಿದ್ದ ಬೆನ್ನೆಲುಬನ್ನು ತೆಗೆದುಕೊಂಡು ಅದರಿಂದ ವಜ್ರಾಯುಧವನ್ನು ನಿರ್ಮಿಸಿದನು.

ಜೀಮೂತವಾಹನನ ಕಥೆ—ಗರುಡನು ಆಗಾಗ ಸರ್ಪರಾಜನಾದ ವಾಸುಕಿಯ ರಾಜಧಾನಿಗೆ ನುಗ್ಗಿ, ಸಿಕ್ಕಿದಹಾಗೆ ಅಲ್ಲಿನ ಸರ್ಪಗಳನ್ನೆಲ್ಲಾ ಭಕ್ಷಿಸುತ್ತಿರಲು, ವಾಸು

ಕೆಯು, ದಿನಕ್ಕೊಂದು ಸರ್ಪವಂತೆ, ಪ್ರತಿದಿನವೂ ಸರದಿಯ ಮೇರೆ ಒಂದೊಂದು ಸರ್ಪವನ್ನು ತಾನಾಗಿ ಕಳುಹಿಸಿಕೊಡುವುದಾಗಿ ಒಪ್ಪಿ, ಗರುಡನಿಗೆ ಸಮಾಧಾನವನ್ನು ಹೇಳಿ ಪಟ್ಟಣವನ್ನು ಕೊಳ್ಳೆಹೊಡೆಯದಂತೆ ಒಡಂಬಡಿಸಿದನು. ಹೀಗಿರಲು ಒಮ್ಮೆ ಶಂಖಚೂಡನೆಂಬ ಹಾವಿನ ಸರದಿಯು ಬಂದಿತು. ಆಗ ಅವನ ತಾಯಿತಂದೆಗಳು ಪುತ್ರಶೋಕದಿಂದ ಬಹಳವಾಗಿ ರೋದಿಸುತ್ತಿರುವುದನ್ನು ಕೇಳಿ, ಜೀಮೂತವಾಹನನೆಂಬ ವಿದ್ಯಾಧರರಾಜನು, ಆ ಶಂಖಚೂಡನಿಗೆ ಬದಲಾಗಿ ತಾನು ಗರುಡನ ಆಹಾರಕ್ಕೆ ಹೋಗುವುದಾಗಿ ನಿಶ್ಚಯಿಸಿ, ಗರುಡನ ಮುಂದೆ ಬಂದು ನಿಂತನು. ಗರುಡನು ಅವನ ಧೈರ್ಯಕ್ಕೂ, ದಯಾಳುತ್ವಕ್ಕೂ ಮೆಚ್ಚಿ, ಇನ್ನು ಮುಂದೆ ತಾನು ಸರ್ಪಬಾಧೆಯನ್ನು ಮಾಡುವುದಿಲ್ಲವೆಂದು, ಅಭಯವನ್ನು ಕೊಟ್ಟುದಾಗಿ ನಾಗಾನಂದದ ಕಥೆ.

ಕರ್ಣನು ಕವಚಕುಂಡಲಗಳನ್ನು ಕೊಟ್ಟುದು—ಕರ್ಣನು ಹುಟ್ಟುವಾಗಲೇ ಅಭೇದ್ಯವಾದ ಕವಚಕುಂಡಲಗಳೊಡನೆ ಹುಟ್ಟಿದ್ದನು. ಭಾರತಯುದ್ಧವು ಆರಂಭವಾದಮೇಲೆ ಅರ್ಜುನನು ತನ್ನ ತಂದೆಯಾದ ಇಂದ್ರನ ಬಳಿಗೆಹೋಗಿ, ಕರ್ಣನಿಗೆ ಕವಚಕುಂಡಲಗಳಿರುವವರೆಗೆ ಅವನನ್ನು ಜಯಿಸುವುದು ತನಗೆ ಸಾಧ್ಯವಲ್ಲದುದರಿಂದ, ಏನಾದರೂ ಉಪಾಯದಿಂದ ಅವುಗಳನ್ನಪಹರಿಸಬೇಕೆಂದು ಕೇಳಿಕೊಂಡನು. ಅದರಂತೆ ಇಂದ್ರನು ಬ್ರಾಹ್ಮಣವೇಷದಿಂದ ಕರ್ಣನ ಬಳಿಗೆ ಬಂದು ಯಾಚಿಸಿದೊಡನೆ, ಕರ್ಣನು ತನ್ನ ಶರೀರದಲ್ಲಿ ಚರ್ಮದಂತೆ ಅಂಟಿಕೊಂಡಿದ್ದ ಕವಚಕುಂಡಲಗಳನ್ನು ಸುಲಿದು ಕೊಟ್ಟನು.

ಶರೀರದ ಒಂದೊಂದು ಭಾಗಗಳಾಗಿರುವ ಮಾಂಸ, ಜೀವ, ಚರ್ಮ, ಅಸ್ಥಿ ಮುಂತಾದುವನ್ನೇ ಕೆಲವರು ಕೊಟ್ಟಿರುವಾಗ, ಆಗಂತುಕಗಳಾಗಿ ಬಂದ ಇತರಭಾಗ್ಯಗಳನ್ನು ಕೊಡುವುದೇನು ದೊಡ್ಡದು?

೪೦. ಸತ್ + ಛಾಯೆಯುಂ—ಒಳ್ಳೆ ನೆಳಲೂ, ಸೂಡೆ—ಮುಡಿದುಕೊಳ್ಳಲು, ನಾಗವಲ್ಲಿ — ವೀಳ್ಯದೆಲೆಯ ಬಳ್ಳಿಯು, ಸ್ವ ಪರ್ಣದೊಳೆ—ತನ್ನ ಎಲೆಯಿಂದಲೇ, ವೀಳ್ಯದೆಲೆಯ ಬಳ್ಳಿಯು ಇತರ ವೃಕ್ಷಗಳಂತೆ ಹಣ್ಣು, ಕಾಯಿ, ಹೂ, ನೆರಳು, ಮುಂತಾದುವುಗಳಿಂದ ಜನಗಳಿಗೆ ಉಪಕಾರಮಾಡಲಾರದಿದ್ದರೂ, ತನ್ನ ಎಲೆಯಿಂದಲೇ ಲೋಕವನ್ನೆಲ್ಲಾ ಸಂತೋಷಪಡಿಸುವಂತೆ, ಉದಾರಮನಸ್ಸುಮಾತ್ರವಿದ್ದರೆ, ತಮ್ಮಲ್ಲಿದ್ದುದರಿಂದಲೇ ಇತರರನ್ನು ತೃಪ್ತಿಗೊಳಿಸಬಹುದು.

೪೧. ಅನಲ್—ಪಡೆಯಲು, ಜೀವನಂಬಡೆಯಲ್—ಜೀವನಾಧಾರವಾದ ನೀರನ್ನು ಪಡೆಯಲು. ಮತ್ತೊಬ್ಬರು ತಮ್ಮನ್ನು ಬಂದು ಯಾಚಿಸಬೇಕೆಂದು ನಿರೀಕ್ಷಿಸದೆ, ಅವರವರ ಅವಶ್ಯಕತೆಯನ್ನು ತಾವೇ ತಿಳಿದು ಉಪಕರಿಸುವುದು ಉದಾರಿಗಳ ಗುಣವೆಂದರ್ಥವು.

೪೨. ತವೆ—ಹೆಚ್ಚಾಗಿ, ಈವಂದು—ಕೊಡುವಾಗೆ, ಅರಿಮಿತ್ರಭಾವವೆಣಿಸರ್—ಇವರು ತಮಗೆ ಬೇಕಾದವರು ಇವರು ಬೇಡದವರು ಎಂಬ ಭೇದವಿಲ್ಲದೆ ಎಲ್ಲರನ್ನೂ ಸಮವಾಗಿ ನೋಡುವರೆಂದು ಭಾವವು.

೪೩. ರಸೆಗೆ—ಭೂಮಿಗೆ. ಒಳ್ಜೀವನಮೀವ—ಒಳ್ಳೇ ಜೀವನವನ್ನು (ಜೀವನಾಧಾರವಾದ ಸೀನೀರನ್ನು)ಕೊಡುವ, ಸುಮಧುರ + ಸ್ರೋತಸ್ + ಸಮೂಹಂಗಳ್—ಒಳ್ಳೇ ಸೀಯಾದ ನದೀಸಮೂಹಗಳು, ಅಡರ್ವಂತೆ—ಬಂದು ಬೀಳುವಹಾಗೆ, ಪಾತ್ರದೊಳ್—ಸತ್ಪಾತ್ರದಲ್ಲಿ, ಅಣಂ—ಸ್ವಲ್ಪವಾದರೂ, ತನ್ನ + ಉಳ್ಳುದುಂ—ತನ್ನಲ್ಲಿರುವುದನ್ನು, ಸಾರ್ಚಲು—ಕೊಡಲು, ಸಮುದ್ರದ ಉಪ್ಪುನೀರು ಆವಿಯಾಗಿ ಮೇಘರೂಪಕ್ಕೆ ತಿರುಗಿ, ಮಳೆಯರೂಪದಿಂದ ಕೆಳಕ್ಕೆ ಬಿಳುವುದನ್ನು ಇಲ್ಲಿ ದೃಷ್ಟಾಂತವಾಗಿ ಹೇಳಿದೆ. ಮೇಘಗಳು ಜಗತ್ತಿಗೆಲ್ಲಾ ಉಪಕಾರಿಗಳಾದ ಸತ್ಪಾತ್ರವೆಂದು ತಿಳಿದು ಸಮುದ್ರವು, ಯಾರಿಗೂ ಉಪಯೋಗಕ್ಕೆ ಬಾರದ ತನ್ನಲ್ಲಿರುವ ಉಪ್ಪುನೀರಿನಲ್ಲಿ ಅಲ್ಪಸ್ವಲ್ಪ ಭಾಗವನ್ನು ದಾನಮಾಡುವುದರಿಂದ, ಆ ಸಮುದ್ರಕ್ಕೆ ಅನೇಕನದೀರೂಪದಿಂದ ಉತ್ತಮವಾದ ಸೀನೀರಿನ ಪ್ರವಾಹಗಳು ಸರ್ವತೋಮುಖವಾಗಿ ತನಗೆತಾನೇ ಬಂದು ತುಂಬುವಂತೆ, ತನ್ನಲ್ಲಿದ್ದ ಅಲ್ಪಸ್ವಲ್ಪವನ್ನಾದರೂ ಸತ್ಪಾತ್ರದಲ್ಲಿ ದಾನಮಾಡತಕ್ಕವರಿಗೆ ಸರ್ವತೋಮುಖವಾಗಿ ಸಂಪತ್ತುಗಳು ಕೂಡಿ ಬರುವುವೆಂದು ತಾತ್ಪರ್ಯವು.

೪೪. ನೆರೆ—ಹೆಚ್ಚಾಗಿ, ತೃಷ್ಣಾ + ಆತುರನಾಗಿ—ದಾಹದಿಂದ ಆತುರಗೊಂಡು, ಬರೆ ಪೀರಲ್ಕೆ—(ಬಾಯಿಗೆ ಬರುವಂತೆ)ತೃಪ್ತಿಯಾಗಿ ಹೀರಲು,ಅಳವಿಲ್ಲದಂತೆ—ಸಾಧ್ಯವಿಲ್ಲದಹಾಗೆ, ಕುಂಭ + ಉದಮುಂ—ಗಡಿಗೆಯ ನೀರನ್ನು,

ನಾಯಿಗಳು ನೀರನ್ನು ನಾಲಗೆಯ ತುದಿಯಿಂದ, ನಕ್ಕಿನಕ್ಕಿ ಸ್ವಲ್ಪಸ್ವಲ್ಪವಾಗಿ ಕುಡಿಯಬೇಕೇ ಹೊರತು, ಅದಕ್ಕೆ ಎಷ್ಟೇ ದಾಹದ ಆತುರವಿದ್ದರೂ, ಹೆಚ್ಚುನೀರು ಬಾಯಿಗೆ ಬರುವಂತೆ ಹೀರಲಾರದು. ಕಾಗೆಗಳು ಎಷ್ಟೇ ದಾಹಗೊಂಡಿದ್ದರೂ, ಕೆರೆಗಳಲ್ಲಿಳಿದು ನೀರನ್ನುಕುಡಿಯಲಾರದೆ, ಹಳ್ಳಗಳಲ್ಲಿಯಾಗಲಿ, ಮಡಕೆಯ ಚೂರುಗಳಲ್ಲಿಯಾಗಲಿ ಇರುವ ನೀರನ್ನುಮಾತ್ರ ಕುಡಿಯುವುವು. ಇದರಂತೆಯೇ ಲೋಭಿಗಳಿಗೆ ಹಣವಿದ್ದರೂ ಅನುಭವಿಸುವ ಭಾಗ್ಯವಿಲ್ಲವೆಂದು ತಾತ್ಪರ್ಯವು.

೪೫. ಲೋಭ + ನಿಚಿತ + ಸ್ವಾಂತರ್ಗೆ—ಲೋಭದಿಂದ ತುಂಬಿದ ಮನಸ್ಸುಳ್ಳವರಿಗೆ; ವೈಷ್ಣವರು ವಿಷ್ಣುವನ್ನೂ, ಶೈವರು ಶಿವನನ್ನೂ,ಶಾಕ್ತೇಯರು ಶಕ್ತಿಯನ್ನೂ, ಜೈನರು ಜಿನನನ್ನೂ ಲೋಕಕ್ಕೆಲ್ಲಾ ದೊಡ್ಡದೈವವೆಂದು ಪೂಜಿಸುವರು. ಲೋಭಿಗಳಿಗೆ

ಹಣಕ್ಕಿಂತಲೂ ದೊಡ್ಡದು ಬೇರೊಂದಿಲ್ಲ. ಸ್ವಾರ್ಥಪರರಿಗೆ ತಮ್ಮ ಹೊಟ್ಟೆಗಿಂತಲೂ ದೊಡ್ಡದು ಬೇರೊಂದಿಲ್ಲವು.

೪೬. ಪನೆಗಳ್—ಹಲ್ಲುಗಳು. ಸ್ವಾದ್ಯಂ + ಅದು + ಅಲ್ಲದಿರ್ಪ್ಪ—ಕಚ್ಚಿಯು ವುದಕ್ಕೆ ಯೋಗ್ಯವಲ್ಲದ

೪೮. ಪದೆದು—ಆಸೆಪಟ್ಟು, ಉಣ್ಬವರ್ಗೆ—ತಿಂದವರಿಗೆ (ಅನುಭವಿಸತಕ್ಕವರಿಗೆ) ಉನ್ಮಾದಮಂ—ಹುಚ್ಚನ್ನು (ಹೆಮ್ಮೆಯಿಂದ ಬೀಗಿ ಬೆರೆಯುವುದನ್ನು) ದುತ್ತೂರ + ಕುಜ + ವ್ರಜಂಗಳ್—ಉಮ್ಮತ್ತದ ಗಿಡಗಳ ಸಮೂಹಗಳು, ಆರಯ್ವೊಡೆ,—ಆಲೋಚಿಸಲು, ಆ ಸುವರ್ಣದ—ನಿಜವಾದ ಸುವರ್ಣದ; ಉಮ್ಮತ್ತದ ಗಿಡಗಳಿಗೆ ಸಂಸ್ಕೃತಭಾಷೆಯಲ್ಲಿ ಸುವರ್ಣಪರ್ಯಾಯವಾದ ಹೆಸರುಗಳೆಲ್ಲಾ ಉಂಟು. ಉಮ್ಮತ್ತದ ಕಾಯಿಯು ಅತಿಪಿತ್ತಕಾರಿಯಾದುದರಿಂದ, ಅದನ್ನು ತಿಂದವರಿಗೆ ಪೈತ್ಯಹಿಡಿಯುವುದು. ಸುವರ್ಣದ ನಾಮಮಾತ್ರದಿಂದಲೇ ಆ ಮೂಲಿಕೆಯಲ್ಲಿ ಅಷ್ಟು ಶಕ್ತಿಯಿರುವಾಗ, ನಿಜವಾದ ಹೊನ್ನು ಮನುಷ್ಯನ ಬುದ್ಧಿಯನ್ನು ಕೆಡಿಸುವುದೇನೂ ಆಶ್ಚರ್ಯವಲ್ಲವೆಂದರೆ, ಹಣದ ಹೆಮ್ಮೆಯಿಂದ ಅನೇಕರು ವಿವೇಕಹೀನರಾಗುವರೆಂದು ಭಾವವು.

೫೦. ಪೊತ್ತಕ್ಕೆ ಈ ಪ್ರಪಂಚದನ್ನು ಸೃಷ್ಟಿಸಿದವನೊಬ್ಬನು. (ಸೃಷ್ಟಿಕರ್ತನಾದ ಬ್ರಹ್ಮನು) ಅದಂ, ಆಂತು—ಅದನ್ನು ಹೊತ್ತುಕೊಂಡು ನಿಂತಿರುವವನು ಮತ್ತೊಬ್ಬನು. (ಆದಿಶೇಷನು) ಪೊರೆವಾತಂ ಪರನೊರ್ವ್ವಂ—ಅದನ್ನು ಕಾಪಾಡತಕ್ಕವನು ಮತ್ತೊಬ್ಬನು. (ವಿಷ್ಣು) ಹೀಗೆ ಅವರವರು ತಮ್ಮ ಕೆಲಸವನ್ನು ನಡೆಸಿಕೊಂಡು ಹೋಗುತ್ತಿರುವಾಗ, ಆ ಪ್ರಪಂಚದ ಎಲ್ಲಿಯೋ ಒಂದು ಭಾಗಕ್ಕೆ ಹೆಸರುಮಾತ್ರಕ್ಕೆ ರಾಜರೆನಿಸಿಕೊಂಡವರು, ತಮ್ಮಿಂದಲೇ ಎಲ್ಲವೂ ನಡೆಯುವುದೆಂದೂ, ತಾವೇ ಪ್ರಭುಗಳೆಂದೂ ಹೆಮ್ಮೆಗೊಳ್ಳುವುದು ಹುಚ್ಚುತನವೆಂದು ಭಾವವು.

೫೧. ಪಕ್ಷಪಾತಬಲದಿಂ—ರೆಕ್ಕೆಯ ಬಡಿತದ ಶಕ್ತಿಯಿಂದ, (ಮೇಲ್ಪಟ್ಟ ಅಧಿಕಾರಿಗಳು ತಮ್ಮಲ್ಲಿ ತೋರಿಸತಕ್ಕ ಪಕ್ಷಪಾತದ ಬಲದಿಂದ,)

ತಮಗೆ ತಕ್ಕ ಯೋಗ್ಯತೆಯಿಲ್ಲದೆಯೇ ಕೆಲವರು ಮೇಲ್ಪಟ್ಟವರ ಅಭಿಮಾನವನ್ನು ಸಂಪಾದಿಸಿ, ಉನ್ನತಸ್ಥಿತಿಗೆ ಬಂದಮಾತ್ರಕ್ಕೆ ಅವರಿಗೆ ಜನಗಳಲ್ಲಿ ಪೂಜ್ಯತೆಯು ಬರಲಾರದೆಂದು ಭಾವವು.

೫೨. ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಗಳ ಸಂಕರಾವಸ್ಥೆಯೇ ಸನ್ನಿಪಾತವೆನಿಸುವುದು. ಈ ಸನ್ನಿಪಾತವ್ಯಾಧಿಯಲ್ಲಿ ಮನುಷ್ಯನಿಗೆ ಇಂದ್ರಿಯಪಾಟವವೆಲ್ಲಾ ತಗ್ಗುವುದು. ಅದರಂತೆಯೇ ಅಧಿಕಾರ, ಐಶ್ವರ್ಯ, ಯೌವನ, ಎಂಬಿವು

ಮೂರೂ ಒಬ್ಬನಲ್ಲಿ ಕಲೆತಿರುವಾಗ, ಅವನು ಹೆಮ್ಮೆಯಿಂದ ಪ್ರಪಂಚವನ್ನೇ ಅರಿಯದಂತೆ ನಡೆಯುವನೆಂದು ತಾತ್ಪರ್ಯವು.

೫೩. ನಿಜವಕ್ತ್ರಾಗ್ರದೆಪಿಂಡಮೀವವರೆಗಂ—ಬಾಯಿಗೆ ಪಿಂಡಹಾಕುವವರೆಗೂ (ಮುಂಭಾಗಕ್ಕೆ ಹಿಟ್ಟನ್ನು ಕಲೆಸಿ ಮೆತ್ತುವವರೆಗೂ,) ಕಟುಧ್ವಾನಂಗಳಿಂದಂ—ಕಠಿನ ಶಬ್ದಗಳಿಂದ, ಪೂರ್ವಜರೋ ಮೇಣ್ ಅನುಜಾತರೋ—ಅಣ್ಣಂದಿರೋ ಅಥವಾ ತಮ್ಮಂದಿರೋ? (ದೊಡ್ಡವರೋ ಚಿಕ್ಕವರೋ!) ಮೃದಂಗದ ಬಾಯಿಗೆ ಹಿಟ್ಟನ್ನು ಕಲೆಸಿಮೆತ್ತಿದರೆ ಮಾತ್ರವೇ ಅದು ಒಳ್ಳೇ ಮೃದುಸ್ವರದಿಂದ ನುಡಿಯುವುದು. ಆ ಹಿಟ್ಟನ್ನು ತೆಗೆದುಬಿಟ್ಟರೆ,ಕಠಿನವಾದ ಕರಕರಧ್ವನಿಯನ್ನು ಹೊರಡಿಸುವುದು. ಹಾಗೆಯೇ ನೀಚರಾದ ಅಧಿಕಾರಿಗಳು ತಮ್ಮ ಬಾಯಿಗೆ ಪಿಂಡಹಾಕುತ್ತಿರುವವರೆಗೆ ಎಂದರೆ, ಲಂಚ ಕೊಡುತ್ತಿದ್ದರೆ ಮಾತ್ರ, ತಮ್ಮಲ್ಲಿ ಕಾರ್ಯಾರ್ಥಿಗಳಾಗಿ ಬಂದವರೊಡನೆ ಒಳ್ಳೇ ಮಾತುಗಳನ್ನಾಡುತ್ತಿರುವರೇಹೊರತು, ಪಿಂಡಹಾಕುವುದನ್ನು ನಿಲ್ಲಿಸಿಬಿಟ್ಟರೆ,ಒಡನೆಯೇ ಕಠಿನ ವಾಕ್ಯಗಳಿಂದ ಬೆದರಿಸಿ ಓಡಿಸುವರೆಂದು ಭಾವವು.

೫೪. ನೆಲೆಯಾಗೆ—ವಾಸಸ್ಥಾನವಾಗಲು, ತಣ್ಣಿತು + ಎಳೆದು + ತಳಿರ + ಮೆಲ್ಲಿತು + ಪಾಸು—ತಂಪಾದ ಎಳೇ ಚಿಗುರಿನ ಮೃದುವಾದ ಹಾಸಿಗೆ (ಇಷ್ಟು ದೀರ್ಘಸಮಾಸವು ಕನ್ನಡದಲ್ಲಿ ಅಪೂರ್ವವು.)

೫೫. ಅಲಂಪಿಂದ,—ಆಸೆಯಿಂದ. ಹಣದಾಸೆಗಾಗಿ ಕೆಟ್ಟ ಅಧಿಕಾರಿಗಳಲ್ಲಿ ಸೇವೆಮಾಡಲು ಹೋಗುವುದು ಹಾನಿಕರವಾಗಿ ಪರಿಣಮಿಸದಿರಲಾರದೆಂದು ಭಾವವು.

೫೬. ಕವಿಗಳು ಧನಾಶೆಯಿಂದ ಅಲ್ಪಸ್ವಭಾವವುಳ್ಳ ಲುಬ್ಧರಾದ ರಾಜರ ಮುಂದೆ ನಿಂತು, ಅವರಲ್ಲಿ ಇಲ್ಲದ ಗುಣಗಳನ್ನಾರೋಪಿಸಿ, ನೀನೇ ಇಂದ್ರನೆಂದೂ, ಚಂದ್ರನೆಂದೂ, ಉಪೇಂದ್ರನೆಂದೂ, ಸುಳ್ಳುಗಳನ್ನು ಜೋಡಿಸಿ ಸ್ತೋತ್ರಮಾಡುವುದರಿಂದ, ಆ ಕವಿಗಳಿಗೆ ಸುಳ್ಳಾಡಿದ ದೋಷವೊಂದು ಅಂಟದಹಾಗಾಗುವುದಲ್ಲದೆ, ಬೇರೆಕಡೆಗಳಲ್ಲಿ ದೊರೆಯ ಬಹುದಾದ ಸಂಪಾದನೆಯನ್ನೂ ಕೆಡಿಸಿಕೊಂಡು, ಎಂದೆಂದಿಗೂ ಅವರು ದಾರಿದ್ರ್ಯವನ್ನೇ ಅನುಭವಿಸುತ್ತಿರುವರೆಂದು ತಾತ್ಪರ್ಯವು.

೫೭. ದಾಸರಿಗಳು ಶನಿವಾರ ಮುಂತಾದ ವಿಶೇಷದಿನಗಳಲ್ಲಿ ಶಂಖವನ್ನೂದಿಕೊಂಡು ಮನೆಮನೆಗೆ ಬಂದು ಭಿಕ್ಷೆಬೇಡುವುದುಂಟು. ಆ ಶಂಖಗಳನ್ನು ಇಲ್ಲಿ ಹೋಲಿಸಿದೆ. ಶಂಖಗಳು ಸಮುದ್ರದಲ್ಲಿ ಹುಟ್ಟುವುವು. ಅದೇ ಸಮುದ್ರದಲ್ಲಿ ಲಕ್ಷ್ಮಿಯೂ, ಕಲ್ಪವೃಕ್ಷಗಳೂ ಹುಟ್ಟಿರುವುದರಿಂದ, ಶಂಖಕ್ಕೆ, ಸಮಸ್ತರತ್ನಗಳಿಗೂ ಆಶ್ರಯನಾದ ಸಮುದ್ರನೇ ತಂದೆಯಾಗಿ, ಭಾಗ್ಯ ದೇವತೆಯಾದ ಲಕ್ಷ್ಮಿಯೂ, ಕೇಳಿದವರಿಗೆ ಕೇಳಿದು

ದನ್ನೆಲ್ಲಾ ಕೊಡತಕ್ಕ ಕಲ್ಪವೃಕ್ಷಗಳೂ ಸಂಗಡ ಹುಟ್ಟಿದ್ದರೂ, ಆ ಶಂಖಕ್ಕೆ ಇತರರ ಮುಂದೆ ನಿಂತು ಯಾಚಿಸತಕ್ಕ ದುರವಸ್ಥೆಯು ತಪ್ಪಲಿಲ್ಲ. ಹೀಗೆಯೇ ಬಂಧುಗಳು ಎಷ್ಟೇ ಭಾಗ್ಯವಂತರಾಗಿದ್ದರೂ ಅದರಿಂದ ಬಡವರಿಗೇನೂ ಫಲವಿಲ್ಲವೆಂದು ಭಾವವು.

೫೮. ಹಿರಣ್ಯಕನಿಗೆ ಮಗನು ಮೃತ್ಯುವಾದುದು—ಹಿರಣ್ಯಕಶಿಪುವೆಂಬ ರಾಕ್ಷಸನು, ತನ್ನ ಮಗನಾದ ಪ್ರಹ್ಲಾದನು ಹರಿಭಕ್ತನಾಗಿರುವುದನ್ನು ನೋಡಿ ಸಹಿಸದೆ ಅವನನ್ನು ಕೊಲ್ಲುವುದಕ್ಕಾಗಿ ನಾನಾಪ್ರಯತ್ನಗಳನ್ನು ಮಾಡುತ್ತಿದ್ದಾಗ, ಭಕ್ತವತ್ಸಲನಾದ ವಿಷ್ಣುವು, ನರಸಿಂಹ ಸ್ವರೂಪದಿಂದ ಸಭಾಸ್ತಂಭದಲ್ಲಿ ಉದ್ಭವಿಸಿ ,ಹಿರಣ್ಯಕಶಿಪುವನ್ನುಕೊಂದು ಪ್ರಹ್ಲಾದನನ್ನು ಕಾಪಾಡಿದನು.

ಶುನಶ್ಯೇಫನಿಗೆ ತಂದೆಯು ಮೃತ್ಯುವಾದುದು.—ಹಿಂದೊಮ್ಮೆ ಅಂಬರೀಷನೆಂಬ ರಾಜನೊಬ್ಬನು, ತಾನು ಮಾಡುತಿದ್ದ ಯಜ್ಞಕ್ಕೆ ಮನುಷ್ಯನನ್ನು ಯಜ್ಞಪಶುವನ್ನಾಗಿ ಮಾಡಬೇಕಾದ ವಿಧಿಯಿದ್ದುದಕ್ಕಾಗಿ, ಅಂತಹ ಮನುಷ್ಯನನ್ನು ಬೆಲೆಕೊಟ್ಟು ಕೊಂಡುಕೊಂಡು ಬರಬೇಕೆಂದು ಹೊರಟನು. ವಿಶ್ವಾಮಿತ್ರನ ತಂಗಿಯ ಗಂಡನಾದ ಋಚೀಕನೆಂಬ ಬ್ರಾಹ್ಮಣನೊಬ್ಬನು ತನ್ನ ಮಧ್ಯಮಪುತ್ರನಾದ ಶುನಶ್ಯೇಫನನ್ನು ನರಬಲಿಗಾಗಿ ಅವನಿಗೆ ಮಾರಿಬಿಟ್ಟನು. ಇದರಿಂದ ಅವನು ತನ್ನ ಮಗನಿಗೆ ತಾನೇ ಮೃತ್ಯುವಾದಂತಾಯಿತು. ಆದರೆ, ಕೊನೆಗೆ ವಿಶ್ವಾಮಿತ್ರನ ತಪಃಪ್ರಭಾವದಿಂದ ಆ ಕುಮಾರನಿಗೂ ಮೃತ್ಯುವು ತಪ್ಪಿತು.

ಮಾವನೆ ವೈರಿಯಿಂದುಗೆ.—ದಕ್ಷನು ತನ್ನ ಇಪ್ಪತ್ತೇಳುಮಂದಿ ಕನ್ಯೆಯರನ್ನೂ ಚಂದ್ರನಿಗೆ ಕೊಟ್ಟು ವಿವಾಹಮಾಡುವಾಗ, ಅವರೆಲ್ಲರಲ್ಲಿಯೂ ಸಮವಾದ ಪ್ರೀತಿಯನ್ನು ತೋರಿಸುತ್ತಿರಬೇಕೆಂದು ವಾಗ್ದಾನಮಾಡಿಸಿಕೊಂಡಿದ್ದನು. ಆ ವಾಗ್ದಾನಕ್ಕೆ ವಿರುದ್ಧವಾಗಿ ಚಂದ್ರನು ರೋಹಿಣಿಯೆಂಬವಳಲ್ಲಿ ಹೆಚ್ಚು ಪ್ರೀತಿಯನ್ನು ತೋರಿಸುತಿದ್ದುದನ್ನು ದಕ್ಷನು ಕೇಳಿ, ಕ್ಷಯರೋಗ ವುಂಟಾಗಲೆಂದು ಚಂದ್ರನಿಗೆ ಶಪಿಸಿದನು. ಇದರಿಂದಲೇ ಕೃಷ್ಣಪಕ್ಷದಲ್ಲಿ ಚಂದ್ರನಿಗೆ ಕ್ಷಯವೆಂದು ಪುರಾಣಕಥೆ.

ಗಿರೀಶಂ ವೈರಿ ಮಾವಂಗೆ—ದಕ್ಷನು ತನ್ನ ಬೇರೊಬ್ಬ ಮಗಳನ್ನು ರುದ್ರನಿಗೆ ಕೊಟ್ಟಿದ್ದನು. ಇವಳಿಗೆ ದಾಕ್ಷಾಯಣಿಯೆಂದು ಹೆಸರು. ಒಂದಾನೊಂದು ಮಹಾಸಭೆಯಲ್ಲಿ ರುದ್ರನು ತನಗೆ ಪ್ರತ್ಯುತ್ಥಾನಮಾಡಿ ಗೌರವಿಸಲಿಲ್ಲವೆಂಬ ಕೋಪಕ್ಕಾಗಿ, ದಕ್ಷನಿಗೆ ತನ್ನ ಅಳಿಯನಾದ ರುದ್ರನಮೇಲೆ ಕೋಪವುಂಟಾಯಿತು. ಹೀಗಿರಲು ಒಮ್ಮೆ ದಕ್ಷನು, ಒಂದು ಮಹಾಯಜ್ಞವನ್ನಾರಂಭಿಸಿ ಅದಕ್ಕಾಗಿ ಅನೇಕ ಜನರನ್ನು ಕರೆದರೂ, ಮಗಳನ್ನೂ, ಅಳಿಯನನ್ನೂ ಕರೆಯಲಿಲ್ಲ. ಹಾಗಿದ್ದರೂ ದಾಕ್ಷಾಯಣಿಯು, ತಂದೆಯ

ಯಜ್ಞಕ್ಕೆ ಕರೆಯದಿದ್ದರೂ ತಾನಾಗಿಯೇ ಹೋದಳು. ಆಗಲೂ ದಕ್ಷನು ಅವಳನ್ನು ಲಕ್ಷ್ಯಮಾಡದೆ ರುದ್ರನನ್ನು ಅವಾಚ್ಯವಾಗಿ ನಿಂದಿಸತೊಡಗಿದನು. ಪತಿನಿಂದೆಯನ್ನು ಕೇಳಿಸಹಿಸಲಾರದೆ ಅವಳು ಆ ಯಜ್ಞಕುಂಡದಲ್ಲಿ ಬಿದ್ದುಬಿಟ್ಟಳು. ಈ ವೃತ್ತಾಂತವನ್ನು ಕೇಳಿದೊಡನೆ ರುದ್ರನು ತನ್ನ ಜಟಾಗ್ರದಿಂದ ವೀರಭದ್ರನನ್ನು ಸೃಷ್ಟಿಸಿ, ಅವನಿಂದ ದಕ್ಷನ ಕಂಠವನ್ನು ಕಡಿಸಿ, ಮಾವನ ಮರಣಕ್ಕೆ ಕಾರಣಭೂತನಾದನು.

ವಾಲಿಗೆ ಅವನ ತಮ್ಮನಾದ ಸುಗ್ರೀವನು ಮೃತ್ಯುವಾದುದು—ಒಮ್ಮೆ ಮಾಯಾವಿಯೆಂಬ ರಾಕ್ಷಸನು ಕೊಬ್ಬಿನಿಂದ ವಾಲಿಯನ್ನು ಕೆಣಕಿ, ಕೊನೆಗೆ ಭಯಭಟ್ಟು ಒಂದು ಗವಿಯೊಳಗೆ ಹೊಕ್ಕುಬಿಟ್ಟನು. ವಾಲಿಯೂ ಅವನನ್ನು ಬೆನ್ನಟ್ಟಿ ಗವಿಯೊಳಕ್ಕೆ ಹೋಗುವಾಗ, ತಾನು ಹಿಂತಿರುಗಿ ಬರುವವರೆಗೆ ಗುಹೆಯ ಬಾಗಿಲಲ್ಲಿ ಕಾದಿರುವಂತೆ ತನ್ನ ತಮ್ಮನಾದ ಸುಗ್ರೀವನಿಗೆ ಹೇಳಿದ್ದನು. ಹಾಗೆಯೇ ಸುಗ್ರೀವನು ಬಹುಕಾಲ ನಿರೀಕ್ಷಿಸಿದರೂ ವಾಲಿಯು ಬಾರದಿರಲು, ರಾಕ್ಷಸನಿಂದ ಮೃತನಾಗಿರಬಹುದೆಂದೂಹಿಸಿ, ರಾಕ್ಷಸನೂ ಅಲ್ಲಿಯೇ ಸಾಯಲೆಂದು ಗುಹೆಯ ಬಾಗಿಲಿಗೆ ಕಲ್ಲುಮುಳ್ಳುಗಳನ್ನು ತುಂಬಿ, ತನ್ನ ಊರಿಗೆ ಬಂದು ಬಿಟ್ಟನು. ವಾನರರೆಲ್ಲರೂ ಇವನಿಗೆ ಪಟ್ಟಾಭಿಷೇಕವನ್ನೂ ನಡೆಸಿಬಿಟ್ಟರು. ಆಮೇಲೆ ಕೆಲವು ದಿನಗಳು ಕಳೆದು, ವಾಲಿಯು ರಾಕ್ಷಸನನ್ನುಕೊಂದು ಹಿಂತಿರುಗಿ ಬಂದನು. ಗುಹೆಯ ಬಾಗಿಲು ಮುಚ್ಚಿದ್ದುದನ್ನು ಕಂಡು. ಸುಗ್ರೀವನು ದಾಯಾದದ್ವೇಷದಿಂದಲೇ ಹೀಗೆ ಮಾಡಿರಬೇಕೆಂದು, ಅತ್ಯಾಕ್ರೋಶದಿಂದ ಆ ಬಾಗಿಲನ್ನೊಡೆದುಕೊಂಡು ಹೊರಗೆ ಬಂದನು. ಪುರಪ್ರವೇಶವನ್ನು ಮಾಡಿನೋಡಿದಾಗ ಸುಗ್ರೀವನಿಗೆ ತನ್ನ ಸ್ಥಾನದಲ್ಲಿ ಪಟ್ಟಾಭಿಷೇಕವೂ ನಡೆದುಹೋಗಿತ್ತು. ಅದನ್ನು ಕಂಡು ಇನ್ನೂ ಕೋಪಹೆಚ್ಚಿತು. ಸುಗ್ರೀವನನ್ನು ತೀರಿಸಿ ಬಿಡಬೇಕೆಂದು ಯತ್ನಿಸಲು, ಅದನ್ನು ತಿಳಿದು ಸುಗ್ರೀವನು ಓಡಿಹೋಗಿ, ಮತಂಗಮುನಿಯ ಆಶ್ರಮದಲ್ಲಿ ವಾಲಿಯ ಪ್ರವೇಶಕ್ಕೆ ಅವಕಾಶವಿಲ್ಲದ ಒಂದು ಪರ್ವತಾಗ್ರದಲ್ಲಿ ಸೇರಿಕೊಂಡನು. ಆಮೇಲೆ ರಾಮನು ವನವಾಸಕಾಲದಲ್ಲಿ ಅಲ್ಲಿಗೆ ಬಂದಾಗ, ಸೀತಾನ್ವೇಷಣಕ್ಕೆ ತಾನು ಸಹಾಯಮಾಡುವುದಾಗಿ ಒಪ್ಪಿ, ಅವನಿಂದ ಅಣ್ಣನಾದ ವಾಲಿಯನ್ನು ಕೊಲ್ಲಿಸಿದನು.

ಮನುಷ್ಯನಿಗೆ ದುರದೃಷ್ಟವಶದಿಂದ ಅವನ ಬಂಧುಗಳೇ ಮೃತ್ಯುರೂಪನಾಗಿ ಪರಿಣಮಿಸಬಹುದೆಂದು ಭಾವವು.

ಅಗಸ್ತ್ಯನು ಸಮುದ್ರವನ್ನು ಆಪೋಶನವಾಗಿ ಕುಡಿದುದು—ಒಮ್ಮೆ ಲೋಕಕಂಟಕರಾಗಿದ್ದ ಕೆಲವು ರಾಕ್ಷಸರು, ಆಗಾಗ ಬಂದು ಲೋಕಕ್ಕೆ ಬಾಧೆಕೊಡುತ್ತ

ಸಮುದ್ರದಲ್ಲಿ ಅವಿತುಕೊಳ್ಳುತ್ತಿರಲು, ಅವರನ್ನು ತೋರಿಸಿಕೊಡುವುದಕ್ಕಾಗಿ ಅಗಸ್ತ್ಯ ಮುನಿಯು ಸಮುದ್ರವನ್ನು ಒಂದೇ ಆ ಪೋಶನವಾಗಿ ಕುಡಿದು ಬಿಟ್ಟನು.

೬೧. ಮಸೆದ + ಆ ಚಂದನದಿಂದಂ—(ಕಾಡಿನಲ್ಲಿ ದಟ್ಟವಾಗಿ ಬೆಳೆದು,)ಗಾಳಿಯಿಂದ ಒಂದಕ್ಕೊಂದಕ್ಕೆ ತಿಕ್ಕಿದ ಗಂಧದ ಮರದಿಂದ, ಎಳ್ದ—ಉಂಟಾದ, ಅನಲಂ ಬೆಂಕಿಯು,ಚಂದನವೆಂಬುದು ಶೈತ್ಯೋಪಚಾರಕ್ಕಾಗಿ ಉಪಯೋಗಿಸತಕ್ಕ ವಸ್ತುವಾಗಿವಾಗಿದ್ದರೂ, ಕಾಡಿನಲ್ಲಿ ಅದೇ ಗಂಧದಮರಗಳು ಒಂದಕ್ಕೊಂದು ಉಜ್ಜುವುದರಿಂದುಂಟಾಗುವ ಬೆಂಕಿಯು ತಂಪಾಗಿರುವುದಿಲ್ಲವೆಂದರ್ಥವು.

೬೨. ಕುಲದೊಳ್—ತನ್ನ (ಸೂರ್ಯ) ವಂಶದಲ್ಲಿ, ಬಾಲಂ—ಎಳವಯಸ್ಸುಳ್ಳ ರಾಮನು, ಶಿಲೆಯೊಂದಂ—ಶಿಲಾರೂಪದಿಂದಿದ್ದ ಆಹಲ್ಯೆಯನ್ನು, ಕುಲನಾಥನಾದ ದಿನಪಂ—ಅದೇವಂಶಕ್ಕೆ ಮೂಲಪುರುಷನಾದ ಸೂರ್ಯನು, ಸರ್ವ+ಅಶ್ಮ+ಸಂಜಾತಮುಂ—ಎಲ್ಲಾ ಶಿಲೆಗಳ ಸಮೂಹವನ್ನೂ, ಪಾದಸಹಸ್ರದಿಂದ ಸಾವಿರಾರು ಪಾದ (ಕಿರಣ) ಗಳಿಂದ. ತನ್ನ ವಂಶದಲ್ಲಿ ಹುಟ್ಟಿದ ಸಣ್ಣಬಾಲನಾದ ರಾಮನು, ಗೌತಮಾಶ್ರಮದಲ್ಲಿ ತನ್ನ ಕಾಲಿನಿಂದ ಒಂದು ಶಿಲೆಯನ್ನು ಸೋಕಿದ ಮಾತ್ರಕ್ಕೆ ಆ ಕಲ್ಲು ಹೆಣ್ಣಾಗಿರುವಾಗ, ಆ ಕುಲಕ್ಕೆ ಮೂಲಪುರುಷನಾದ ತನಗೆ ಆ ಮಹಿಮೆಯಿಲ್ಲವೆ? ಎಂದು ಸೂರ್ಯನು ಪ್ರತಿದಿನವೂ ತನ್ನ ಸಹಸ್ರಪಾದಗಳಿಂದ (ಸಹಸ್ರಕಿರಣಗಳಿಂದ) ಲೋಕದಲ್ಲಿರುವ ಎಲ್ಲಾ ಕಲ್ಲುಗಳನ್ನೂ ಬಾರಿಬಾರಿಗೂ ತುಳಿದರೂ, ಯಾವುದೊಂದು ಕಲ್ಲೂ ಹೆಣ್ಣಾಗಲಿಲ್ಲ. ಆದುದರಿಂದ, ಅವನವನಿಗೆ ಸಹಜವಾದ ಶಕ್ತಿಯಿದ್ದು, ಅದರಿಂದ ಪ್ರಖ್ಯಾತಿಗೆ ಬರಬೇಕೇ ಹೊರತು ಬರೀಕುಲೋನ್ನತಿಯೇನೂ ಕೆಲಸಕ್ಕೆ ಬಾರದೆಂದು ಭಾವವು.

ಒಮ್ಮೆ ದೇವೇಂದ್ರನು ಗೌತಮಮುನಿಯು ಪತ್ನಿಯಾದ ಅಹಲ್ಯೆಯಲ್ಲಿ ಜಾರ ಕೃತ್ಯಕ್ಕೆ ಪ್ರಯತ್ನಿಸಿ, ಅರ್ಧರಾತ್ರಿಯಲ್ಲಿ ಕೋಳಿಯಹಾಗೆ ಕೂಗಿ, ಗೌತಮನನ್ನು ಪ್ರಾತಸ್ಸ್ನಾನಕ್ಕಾಗಿ ನದಿಗೆ ಹೊರಡಿಸಿ, ಅವನು ಅತ್ತಲಾಗಿ ಹೊರಟೊಡನೆ ಇತ್ತಲಾಗಿ ತಾನು ಅಹಲ್ಯೆಯ ಶಯನ ಗೃಹಕ್ಕೆ ಗೌತಮವೇಷದಿಂದಲೇ ಪ್ರವೇಶಿಸಿ ಬಿಟ್ಟನು. ಆ ಮೇಲೆ ಗೌತಮನಿಗೆ ಈ ಮೋಸವು ತಿಳಿದು ಬಂದಿತು. ಆಗ ಅವನು ಇಂದ್ರನಿಗೆ ಮೈಯ್ಯೊಳಗೆಲ್ಲಾ ಹೀನಾವಯವಗಳುಂಟಾಗುವಂತೆಯೂ,ಅಹಲ್ಯೆಗೆ ಶಿಲಾರೂಪವುಂಟಾಗುವಂತೆಯೂ ಶಪಿಸಿದನು. ಆಮೇಲೆ ಅವರಿಬ್ಬರೂ ಶಾಪವಿಮೋಚನೆಯನ್ನು ಪ್ರಾರ್ಥಿಸಿ, ದೈನ್ಯದಿಂದ ಬೇಡಿಕೊಳ್ಳಲು,ಇಂದ್ರನ ಹೀನಾವಯವಗಳು ನೋಡುವವರಿಗೆ ಕಣ್ಣುಗಳಂತೆ ಕಾಣುವ ಹಾಗೆ ಅನುಗ್ರಹಿಸಿ, ರಾಮನ ಪಾದಧೂಳೀಸ್ಪರ್ಶದಿಂದ ಅಹಲ್ಯೆಗೆ

ಪುನಃ ಮೊದಲಿನ ರೂಪವು ಬರುವಂತೆಯೂ ಅನುಗ್ರಹಿಸಿದನು. ಅದರಂತೆ ರಾಮನ ಪಾದರಜ ಸ್ಪರ್ಶದಿಂದ ಶಿಲಾರೂಪದಲ್ಲಿದ್ದ ಅಹಲ್ಯೆಗೆ ತಿರುಗಿ ನಿಜರೂಪವು ಬಂದಿತು.

೬೩. ಪಲವಾನುಂ—ಹಲವು. ಸೊರೆವಣ್ಗಳ್—ಸೋರೆಹಣ್ಣುಗಳು.

ಒಂದೇ ಗಿಡದಲ್ಲಿ ಬೆಳೆದ ಹಲವು ಸೋರೆಕಾಯಿಗಳಲ್ಲಿ, ಕೆಲವು ಭಿಕ್ಷುಕರ ಕೈಯಲ್ಲಿ ಸೇರಿ ಭಿಕ್ಷಾಪಾತ್ರವಾಗುವುವು. ಮತ್ತೆ ಕೆಲವು ವೀಣೆಗೆ ಉಪಯೋಗಪಟ್ಟು, ಸುಸ್ವರವನ್ನು ಕೊಡುವುವು ಬೇರೆ ಕೆಲವು ಮದ್ಯಪಾಯಿಗಳ ಕೈಗೆ ಸೇರಿ ಹೆಂಡದ ಬುರುಡೆಗಳೆನಿಸುವುವು. ಆದುದರಿಂದ ಒಂದೇ ಕುಲದಲ್ಲಿ ಹುಟ್ಟಿದಮಾತ್ರಕ್ಕೆ ಎಲ್ಲರ ನಡತೆಯೂ ಒಂದು ವಿಧವಾಗಿಯೇ ಇರಲಾರದೆಂದು ಭಾವವು.

೬೪. ದಾನ+ಉದ್ದಂಡ+ವಿಶಾಲ+ಗಂಡ+ವನ+ವೇತಂಡಂಗಳಂ—ಮದಜಲವು ಹೆಚ್ಚಿ ವಿಶಾಲವಾದ ಗಂಡಸ್ಥಲವುಳ್ಳ ಕಾಡಾನೆಗಳನ್ನು ಸಹ, ನೀರೊಳ್ ಆಳ್ದ—ನೀರಿನಲ್ಲಿ ಮುಳುಗಿರುವ, ನಕ್ರಂ—ಮೊಸಳೆಯು, ಶ್ವಾನಂ—ನಾಯಿಯು.

ಮೊಸಳೆಯು ತನ್ನ ಸ್ಥಾನವಾದ ನೀರಿನಲ್ಲಿರುವಾಗ, ಕೊಬ್ಬಿದ ಕಾಡಾನೆಯನ್ನಾದರೂ ಎಳೆಯಬಲ್ಲುದು. ಆ ಮೊಸಳೆಯೇ ನೀರನ್ನು ಬಿಟ್ಟು ಮೇಲೆ ಬಂದಾಗ, ಒಂದು ಸಣ್ಣನಾಯಾದರೂ ಅದನ್ನು ಕಚ್ಚಿ ಅತ್ತಿತ್ತ ಎಳೆದಾಡಬಲ್ಲುದು. ಆದುದರಿಂದ ಯಾರಿಗಾದರೂ ತನ್ನ ಸ್ಥಾನದಲ್ಲಿದ್ದಾಗ ಇರುವ ವೀರ್ಯೋತ್ಸಾಹಗಳು ಅದು ತಪ್ಪಿದಾಗ ಇರಲಾರವೆಂದು ಭಾವವು.

೬೫. ಕ್ಷಾರತೆಯಂ— ಉಪ್ಪಾಗಿರುವಿಕೆಯನ್ನು (ಉಪ್ಪಿನ ಸ್ವಭಾವವನ್ನು) ಪಯೋದಸಲಿಲಂ—ಮಳೆಯ ನೀರು, ಸಮುದ್ರತೀರದಲ್ಲಿ ಮುತ್ತಿನ ಚಿಪ್ಪುಗಳು ಬಾಯಿ ತೆರೆದುಕೊಂಡಿರುವಾಗ, ಸ್ವಾತೀ ಮಳೆಯ ಹನಿಗಳು ಅದರಲ್ಲಿ ಬಿದ್ದೊಡನೆ ಅವು ಮುಚ್ಚಿಕೊಳ್ಳುವುವೆಂದೂ. ಆ ಚಿಪ್ಪಿನೊಳಗೆ ಬಿದ್ದ ಹನಿಗಳ ಪರಿಮಾಣಕ್ಕೆ ತಕ್ಕಂತೆ, ಆ ಹನಿಗಳೇ ಸಣ್ಣ ದೊಡ್ಡ ಮುತ್ತುಗಳಾಗುವುವೆಂದೂ ಪ್ರತೀತಿ. ಆದರೆ ನಿಜಸ್ಥಿತಿಯಲ್ಲಿ, ಮುತ್ತುಚಿಪ್ಪುಗಳಲ್ಲಿರುವ ಒಂದು ಜಾತಿಯ ಕ್ರಿಮಿಗಳ ಜೊಲ್ಲಿನ ರಸದಿಂದ ಮುತ್ತುಗಳಾಗುವುವೆಂದು ಈಗ ಶೋಧನೆಯಿಂದ ತಿಳಿದುಬಂದಿದೆ) ಸಪ್ತ ಛದಪರ್ಣದೊಳ್—ಎಳೆಬಾಳೆಯಗಿಡದ ಎಲೆಯಲ್ಲಿ, ಕಿಡೆ—ಬೆಳಲು (ಕೆಡೆಯೆ ಎಂಬುದಕ್ಕೆ ಬದಲಾಗಿ ಕಿಡೆ ಎಂಬ ಪ್ರಯೋಗವು) ಕರ್ಪೂರಂ—ಪಚ್ಚೆ ಕರ್ಪೂರವು, ಎಳೆಬಾಳೆಯೆಲೆಯಮೇಲೆ ಬಿದ್ದ ಮಳೆಹನಿಯು, ಆ ಎಲೆಯಲ್ಲಿ ಉತ್ಪತ್ತಿಯಾಗುವ ಧೂಳಿನೊಡನೆ ಕಲೆತು ಪಚ್ಚೆಕರ್ಪೂರವಾಗುವುದೆಂದು ಹೇಳಿಕೆಯುಂಟು.

೬೬. ಎಲರೊಳ್—ಗಾಳಿಯಲ್ಲಿ, ಪೊಳ್ದಿಟ್ಟ—ಬಚ್ಚಿಟ್ಟ, ಪಾತ್ರಮಾಹಾತ್ಮ್ಯದಿಂ—ತಾವು ಸೇರಿದ ಆಧಾರವಸ್ತುವಿನ ಮಹಿಮೆಯಿಂದ,

ಅಲ್ಪಮನುಷ್ಯರಲ್ಲಿ ಸ್ವಲ್ಪಮಾತ್ರ ರಹಸ್ಯವನ್ನು ಹೇಳಿಟ್ಟರೂ, ಅವರು ಅದಕ್ಕೆ ಇಲ್ಲದ ಕೈಕಾಲುಗಳನ್ನೆಲ್ಲಾ ಸೃಷ್ಟಿಸಿ, ನಾನಾಕಡೆಗೂ ಹರಡುವರು. ಗಾಳಿಯಿದ್ದ ಕಡೆಯಲ್ಲಿ ಸ್ವಲ್ಪಮಾತ್ರ ಸುಗಂಧದ್ರವ್ಯವನ್ನು ಬಚ್ಚಿಟ್ಟರೂ, ಆವಾಸನೆಯನ್ನು ಗಾಳಿಯು ನಾನಾಕಡೆಗೂ ಹರಡುವುದು. ಸತ್ಪಾತ್ರದಲ್ಲಿ ಸ್ವಲ್ಪದಾನವನ್ನು ಕೊಟ್ಟರೂ, ಅವನು ಅದನ್ನೇ ದೊಡ್ಡದಾಗಿ ಭಾವಿಸಿ ಎಲ್ಲರ ಮುಂದೆಯೂ ವಿಶೇಷವಾಗಿ ಕೊಂಡಾಡುವನು. ಒಳ್ಳೇ ಶಿಷ್ಯನಿಗೆ ಸ್ವಲ್ಪ ವಿಷಯವನ್ನು ಬೋಧಿಸಿದರೂ, ಅವನು ಸ್ವಬುದ್ಧಿಯಿಂದ ಮೇಲೆಮೇಲೆ ವಿಚಾರಮಾಡಿ, ತನಗೆ ತಾನೇ ಜ್ಞಾನಾಭಿವೃದ್ಧಿಯನ್ನು ಹೊರಪಡಿಸುವನು. ಆದುದರಿಂದೆ ಇವೆಲ್ಲವೂ ನೀರಿನಮೇಲೆ ಬಿದ್ದ ಜಿಡ್ಡಿನಂತೆ, ಸ್ವಲ್ಪವಾದರೂ ಆಶ್ರಯ ವಸ್ತುವಿನ ಮಹಿಮೆಯಿಂದ ವಿಸ್ತರಿಸಿ ಕೊಳ್ಳುವುದೆಂದು ಭಾವವು.

೬೭. ಪಿಪೀಲಿಕಾನಿವಹಮುಂ—ಇರುವೆಗಳ ಗುಂಪುಕೂಡ, ರಜ್ಜುವಾಗಿ—ಹಗ್ಗವೆನಿಸಿಕೊಂಡು, ಪಯಃಕಣಂ—ನೀರಿನ ಹನಿಯು, ತೋಣೆಗೊಂಡಿರ್ಪ್ಪ—ಸಹಕಾರಿಗಳಾಗಿರುವ, ಅದು + ಆವುದು + ಅರಿದೈ—ಯಾವುದು ತಾನೇ ಅಸಾಧ್ಯವು?

೬೮. ನಿಜದಿಂದ + ಇರ್ದ್ದ + ಅನುಜಾತನೊಳ್—ಸತ್ಯದಿಂದ ನಡೆದು ಕೊಳ್ಳುತಿದ್ದ ತಮ್ಮನಲ್ಲಿ, (ಸುಗ್ರೀವನಲ್ಲಿ) ಪುಲಸ್ತ್ಯಜನುಂ—ರಾವಣನೂ ಕೂಡ, ಅನುಜಾತನೊಳ್—ತಮ್ಮನಾದ ವಿಭೀಷಣನಲ್ಲಿ,

೬೯. ಸರಿಗೆಯುಂ—ಲೋಹದ ತಂತಿಯೂ, ಶುಷ್ಕ + ಇಂಧನ + ವ್ರಾತಮುಂ—ಒಣಗಿದ ಕಟ್ಟಿಗೆಯ ಸಮೂಹವೂ ಕಟಿಸೂತ್ರಕ್ಕೆ—ಉಡೆದಾರಕ್ಕಾಗಿ ತಂತಿಯು ಉಪಯೋಗಪಡುವುದು. ಒಣಮರದ ತುಂಡುಗಳು ಕಾಷ್ಠಕ್ಕೆ ಉಪಯೋಗಪಡುವುವು. ಇವೆಲ್ಲಾ ಒಟ್ಟಿಗೆ ಸೇರಿದ್ದಾಗ ಲೋಕರಂಜಕವಾದ ವೀಣೆಯೆನಿಸಿಕೊಳ್ಳುವುದರಿಂದ, ಜನರಲ್ಲಿ ಐಕಮತ್ಯದಿಂದ ಬಹಳ ಗುಣವುಂಟೆಂದು ತಾತ್ಪರ್ಯವು.

೭೦. ಘೃತ + ಸಿಕ್ತ + ಅಮೃತಕಲ್ಪಮುಂ—ತುಪ್ಪದಲ್ಲಿ ನೆನೆಸಲ್ಪಟ್ಟು ಅಮೃತಸಮಾನವೆನಿಸಿದ, ಕಬಳಮುಂ—ಗ್ರಾಸವನ್ನು (ಆಹಾರವನ್ನು), ಖತಿಗೊಂಡು—ಕೋಪಗೊಂಡು, ತಳ್ತು—ಇರಿದೊಡಂ—ಒತ್ತಿ ತಿವಿದರೂ, ಉದ್ಧತಿಯಿಂದೆ—ಗರ್ವದಿಂದ ಇತರ + ಉಪಾಯದೆ—ದಾನ, ಭೇದ, ದಂಡಗಳೆಂಬ ಬೇರೆ ಉಪಾಯಗಳಿಗಿಂತ, ಸಾಮಮೇ—ಸಾಮೋಪಾಯವೇ—(ಒಳ್ಳೇ ಮೃದುವಾದ ಪ್ರಿಯವಾಕ್ಯವೇ) ವರಂ—(ಕಾರ್ಯಸಾಧನೆಗೆ) ಉತ್ತಮವಾದುದು. ಸ್ತೋತ್ರಕ್ಕೆ ವಶವಾಗುವುದು ಆನೆಗಳ ಸ್ವಭಾವ

ವಾದುದರಿಂದ, ಆನೆಗಳಿಗೆ ಆಹಾರಕೊಡುವಾಗಲೂ, ಕಾಡಾನೆಗಳನ್ನು ಸಾಧುಮಾಡು ವಾಗಲೂ, ಮಾವುತರು ಅವುಗಳನ್ನು ಸ್ತೋತ್ರಮಾಡುವ ಪದ್ಧತಿಯುಂಟು.

೭೧. ವರ್ಣಮುಂ—ಮೈಬಣ್ಣವೂ, ಒಂದೆ—ಎರಡಕ್ಕೂ ಒಂದೇ ವಿಧವಾದುದು. ರೂಪಂ + ಅದೆ—ಒಂದಕ್ಕೆ ಯಾವ ರೂಪವೋ ಅದೇ ರೂಪವು ಮತ್ತೊಂದಕ್ಕೂ ಇರುವುದು. ಮಾಕಂದಂ—ಮಾವಿನ ಮರವು, ಏಕ + ಆಶ್ರಯಂ—(ಎರಡಕ್ಕೂ) ಒಂದೇ ವಾಸಸ್ಥಾನವು. ವಿಯತ್ + ಉತ್ಪಾತದ—ಆಕಾಶದಲ್ಲಿ ಹಾರುವಿಕೆಯ, ಕರಟಮುಂ—ಕಾಗೆಯನ್ನು, ವಾಕ್ + ದೋಷದಿಂ—ಮಾತಿನಲ್ಲಿರುವ ದೋಷದಿಂದ. ಕಾಗೆಯ ಕೂಗಿನಲ್ಲಿ ಇಂಪಿಲ್ಲದುದರಿಂದ, ದೂಷಿಪರ್—ನಿಂದಿಸುವರು.

ಕಾಗೆಗೂ ಕೋಗಿಲೆಗೂ, ಬಣ್ಣ, ರೂಪ, ವಾಸಸ್ಥಳ, ಆಕಾಶದಲ್ಲಿ ಹಾರುವ ರೀತಿ, ಇವೆಲ್ಲಾ ಒಂದೇವಿಧವಾಗಿದ್ದರೂ, ಇಂಪಾಗಿ ಮಾತಾಡುವುದರಿಂದ ಕೋಗಿಲೆಯು ಜನಗಳಿಗೆ ಪ್ರಿಯವಾಗಿಯೂ, ಕ್ರೂರಧ್ವನಿಯಿಂದ ಕಾಗೆಗಳು ದೂಷ್ಯವಾಗಿಯೂ ಇರುವುದರಿಂದ, ಪ್ರಿಯವಾಕ್ಯಕ್ಕೆ ಸಮಾನವಾದುದು ಬೇರೊಂದಿಲ್ಲವೆಂದು ಭಾವವು.

೭೨. ಕರ್ಷಣ ಖೇದದಿಂ—ಕೃಷಿಕಾರ್ಯದ ಕಷ್ಟದಿಂದ, ಅಳಲ್ವರ್—ಬಳಲುವರು. ಖಲ + ಕುಭೃತ್ + ಸೇವಾ + ಸಮುದ್ಯೋಗದಿಂ—ನೀಚರಾದ ದೊರೆಗಳ ಸೇವಾಕಾರ್ಯದಿಂಬ, ತೃಷ್ಣೆಯ—ಆಸೆಯ.

೭೩. ಚಕ್ರವರ್ತನಮುಂ—ಚಕ್ರವರ್ತಿಪದವಿಯನ್ನು, ಚಕ್ರಿಗಳ್ — ಚಕ್ರವರ್ತಿಗಳು,ವನಜ + ಉದ್ಭೂತನುಂ—ಕಮಲದಲ್ಲಿ ಹುಟ್ಟಿದ ಬ್ರಹ್ಮನೂ,ಐದೆ—ವಿಶೇಷವಾಗಿ, ನಿನ್ನೊಳ್—ವೈಕುಂಠನಾಥನಾದ ನಿನ್ನಲ್ಲಿ, ಸಾಯುಜ್ಯಮುಂ—ಸೇರಿರುವಿಕೆಯನ್ನು (ಮೋಕ್ಷೈಶ್ವರ್ಯವನ್ನು)ಕಾಂಕ್ಷಿಪಂ—ಅಪೇಕ್ಷಿಸುವನು. ಲೋಕದಲ್ಲಿ ಆಸೆಗೆ ಪಾರವಾವುದೆಂದರೆ ಮೋಕ್ಷವೊಂದೇ ಎಂಬರ್ಥವೂ, ಭಗವಂತನ ಸಾನಿಧ್ಯಕ್ಕಿಂತ ಮೇಲೆ ಆಸೆಪಡತಕ್ಕ ವಸ್ತುವೊಂದೂ ಇಲ್ಲವೆಂಬ ಅಭಿಪ್ರಾಯವೂ ಇದರಿಂದ ವ್ಯಕ್ತವಾಗುವುದು. ಇದರಲ್ಲಿ ಸಾರಾಲಂಕಾರವು.

೭೪. ಗೃಹ + ಅರ್ಭಕರುಮಂ—ಮನೆಯ ಮಕ್ಕಳನ್ನು, ದಿಷ್ಟಮಂ—ಮುಂದ ನಡೆಯತಕ್ಕ ಸಂಗತಿಗಳನ್ನು (ಅದೃಷ್ಟವನ್ನು), ಗಾರುಡ ಮಂತ್ರ ತಂತ್ರಗಳಂ—ವಿಷ ಚಿಕಿತ್ಸೆ, ಮಂತ್ರಶಕ್ತಿ, ಕೈಕರಣಗಳನ್ನೆಲ್ಲಾ, ತಿರುಪೆಗಾಗಿ ಬರತಕ್ಕವರು ಜನರನ್ನು ಮರುಳುಮಾಡುವುದಕ್ಕಾಗಿ ಈ ಬೂಟಾಟಿಕೆಗಳನ್ನೆಲ್ಲಾ ತೋರಿಸುವರೆಂದು ಭಾವವು

೭೫. ಗಣಕರ್—ಗ್ರಹಗತಿಗಳನ್ನೆಣಿಸತಕ್ಕಜೋಯಿಸರು, ದುರ್ಗ್ರಹಯೋಗಮೆಂದು—ಇದು ಕೆಟ್ಟಗ್ರಹಗಳ ಸಂಬಂಧದಿಂದುಂಟಾದುದೆಂದೊ,ಪಿತ್ತ + ಅನಿಲ +

ಶ್ಲೇಷ್ಮ + ಸಂಕರಂ — ಪಿತ್ತ, ವಾಯು, ಶ್ಲೇಷ್ಮಗಳ ಅಥವಾ ಅವುಗಳಲ್ಲಿ ಯಾವುದಾದರೂ ಒಂದರ ಸಂಬಂಧದಿಂದ ಉಂಟಾದುದು, ಎಂದರೆ, ದೇಹ ಜನ್ಯವಾದ ವ್ಯಾಧಿ ಸಂಬಂಧವಾದುದೆಂದು ಹೇಳುವರು. ಮಾಂತ್ರಿಕರ್—ಮಂತ್ರಚಿಕಿತ್ಸೆಯನ್ನುಬಲ್ಲವರು, ಪಿಶಾಚಮೆ ದಲ್—ಇದು ಪಿಶಾಚವೇ ನಿಶ್ಚಯವೆಂದು ಹೇಳುವರು. ತತ್ವದಿಂದ—ವಾಸ್ತವದಿಂದ. ಮನುಷ್ಯನಿಗೆ ದುಷ್ಕರ್ಮವಶದಿಂದ ಏನಾದರೂ ಒಂದು ವ್ಯಾದಿಯಾಗಲಿ, ಬೇರೆ ಕಷ್ಟವಾಗಲಿ ಸಂಭವಿಸಿದಾಗ, ಅವನಿಂದ ಹಣವನ್ನು ಕೀಳುವುದಕ್ಕೆ ಇದೇ ಸಮಯವೆಂದು ಅನೇಕರು ಕಾದಿರುವುದರಿಂದ, ಜೋಯಿಸರನ್ನು ಕರೆದು ಕೇಳಿದರೆ, ಅದು ಗ್ರಹಚೇಷ್ಟೆಯೆಂದೂ ತಮ್ಮ ಮೂಲಕವಾಗಿ ನವಗ್ರಹಪೂಜೆಯನ್ನು ಮಾಡಿಸಿದರೆ ನಿವೃತ್ತಿಯಾಗುವುದೆಂದೂ ಹೇಳುವರು. ವೈದ್ಯರನ್ನು ಕರೆಸಿ ಕೇಳಿದರೆ, ವಾತ ಪಿತ್ತ ಶ್ಲೇಷ್ಮಗಳೆಂಬ ಯಾವುದೋ ಕಾರಣವನ್ನು ಕಲ್ಪಿಸಿ, ತಾವು ತಕ್ಕ ಚಿಕಿತ್ಸೆಯಿಂದ ಗುಣಪಡಿಸುವುದಾಗಿ ಹೇಳಿ ದ್ರವ್ಯವನ್ನೆಳೆಯುವರು. ಮಂತ್ರವಾದಿಗಳಿಗೆ ತೋರಿಸಿದರೆ, ಅದು ಭೂತಚೇಷ್ಟೆಯೇಹೊರತು ಬೇರೇನೂ ಇಲ್ಲವೆಂದೂ, ತಮ್ಮ ಮೂಲಕವಾಗಿ ಮಂತ್ರಹಾಕಿಸಿದರೆ ಬಿಟ್ಟುಹೋಗುವುದೆಂದೂ ಹೇಳಿ ದುಡ್ಡನ್ನೆಳೆಯುವರು. ಇವೆಲ್ಲಾ ಯಾಚನೆಯ ಪರ್ಯಾಯಗಳೇಹೊರತು ಬೇರೆಯಲ್ಲವೆಂದು ಭಾವವು.

೭೬. ನಳಿನ + ಆಪ್ತಂ—ಕಮಲಗಳಿಗೆ ಮಿತ್ರನಾದ ಸೂರ್ಯನು, ತಮಮಂ — ಕತ್ತಲೆಯನ್ನು, ತೂಳ್ದು + ಅಟ್ಟಿ—ಭೇದಿಸಿ ಓಡಿಸಿ, ಕಾಣಿಸಿ—ಕಣ್ಣು ಕಾಣುವಂತೆ ಮಾಡಿ. ದಿವದೆ—ಹಗಲಲ್ಲಿ.

೭೭. ಹರಿ—ವಿಷ್ಣುವು, ಜಾರಂ—(ಕೃಷ್ಣಾವತಾರದಲ್ಲಿ)ಜಾರನೆಂದು ಹೆಸರುಗೊಂಡವನು. ವಿರಿಂಚಿ—ಬ್ರಹ್ಮನು, ದ್ರುಹಿಣಂ— ದ್ರೋಹಬುದ್ಧಿಯುಳ್ಳವನು, (ದಾನವರನ್ನು ದ್ವೇಷಿಸತಕ್ಕವನೆಂಬುದರಿಂದ ಇವನಿಗೆ ದ್ರುಹಿಣನೆಂಬ ಹೆಸರುಂಟು.) ಜಿಹ್ಮಗಂ—ಕುಟಿಲವಾದ ನಡತೆಯುಳ್ಳವನು (ಹಾವುಗಳು ವಕ್ರವಾಗಿ ಹೋಗುವುದರಿಂದ ಜಿಹ್ಮಗವೆಂದು ಹೆಸರು) ಅನಲಂ—ಅಗ್ನಿಯು, ಆಶ್ರಯ + ಆಶಂ — ತನಗೆ ಆಶ್ರಯಕೊಟ್ಟವರನ್ನೇ ತಿಂದುಬಿಡತಕ್ಕವನು (ಬೆಂಕಿಯು ತಾನಿದ್ದಸ್ಥಳವನ್ನೆಲ್ಲಾ ಸುಟ್ಟುಬಿಡುವುದರಿಂದ ಆಶ್ರಯಾಶವೆಂದು ಹೆಸರು) ದೋಷ + ಆಕರಂ—ದೋಷಗಳಿಗೆಲ್ಲಾ ಆಶ್ರಯನು (ದೋಷಾ + ಕರಂ—ರಾತ್ರಿಯಲ್ಲಿ ಕಿರಣಗಳುಳ್ಳವನಾದುದರಿಂದ ಚಂದ್ರನಿಗೆ ಈ ಹೆಸರು) ಸುರಪಂ— ಇಂದ್ರನು, ಗೋತ್ರವಿಭೇದಿ — ಕುಲಘಾತುಕನು (ಇಂದ್ರನಪರವಾಗಿ ಗೋತ್ರ + ವಿಭೇದಿ ಎಂದರೆ, ಪರ್ವತಗಳ ರೆಕ್ಕೆಗಳನ್ನು ಭೇದಿಸಿದವನೆಂದರ್ಥವು.)

೨೮. ತಮ್ಮ + ಒಡಹುಟ್ಟಿಯುಂ—ತಮ್ಮ ಸಂಗಡ ಒಂದೇ ಅಡವಿಯಲ್ಲಿ ಹುಟ್ಟಿಬೆಳೆದಿದ್ದರೂ, ವೇಣುನಿವಹಂ—ಬಿದಿರುಮೆಳೆಯು.

ಒಂದೇಕಾಡಿನಲ್ಲಿ ತಮ್ಮಸಂಗಡಲೇ ಹುಟ್ಟಿ ಬೆಳೆದಿದ್ದರೂ, ಶ್ರೀಗಂಧದಮರಗಳು ಜನರಿಗೆ ಹೆಚ್ಚುಪ್ರಿಯವಾಗಿರುವುದನ್ನು ನೋಡಿ ಸಹಿಸಲಾರದೆ ಹೊಟ್ಟೇಕಿಚ್ಚಿನಿಂದ, ಬಿದಿರುಮೆಳೆಗಳು, ಆ ಗಂಧದ ಮರಗಳನ್ನು ಸುಟ್ಟುಬಿಡುವುದಕ್ಕಾಗಿ ತಮ್ಮಲ್ಲಿ ಬೆಂಕಿಯನ್ನು ಹುಟ್ಟಿಸಿದರೆ, ಅದರಿಂದ ತಾವೇ ಮೊದಲು ಸುಟ್ಟುಹೋಗುವುವೇಹೊರತು, ಆ ಗಂಧದ ಮರಗಳಿಗೆ ಬೆಂಕಿ ತಗುಲುವುದನ್ನು ನೋಡಿ ಸಂತೋಷಿಸುವಷ್ಟರವರೆಗೂ ತಾವು ಬದುಕಿರಲಾರವು. ಅದರಂತೆಯೇ ಪರರ ಮೇಲ್ಮೆಯನ್ನು ನೋಡಿ ಆಸೂಯೆಪಡುವವರು, ಆ ಚಿಂತಾಗ್ನಿಯಿಂದ ಬೆಂದು, ಮೊದಲು ತಾವೇ ಹಾನಿಯನ್ನು ತಂದುಕೊಳ್ಳುವರೆಂದರ್ಥವು.

೨೯ ಹಿರಣ್ಯಂ—ಹಿರಣ್ಯಕಶಿಪುವು. ಕೋಪ ಉನ್ನತಿಯಿಂ — ವಿಷ್ಣುವಿನಲ್ಲಿ ತನಗಿದ್ದ ಅತಿಕ್ರೋಧ (ದ್ವೇಷ) ದಿಂದ, ಪುರುಹೂತಂ— ಇಂದ್ರನು, ಚೈದ್ಯನೃಪಂ — ಶಿಶುಪಾಲನು, ಮಾತ್ಸರ್ಯದಿಂದ—ಕೃಷ್ಣನಲ್ಲಿರುವ ಹೊಟ್ಟೇಕಿಚ್ಚಿನಿಂದ,ಅರಿಷಡ್ವರ್ಗದೆ—ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ (ಆರು ದುರ್ಗುಣಂಗಳಿಂದ, ಸ್ವ + ಅಪತ್ಯ + ಸಂಮೋಹದಿಂ—ತನ್ನ ಮಗಳಲ್ಲಿ (ರಾಮನಲ್ಲಿ) ಅಧಿಕ ಮೋಹದಿಂದ.

೩೦. ಸುಯೋಧಂ—ದುರ್ಯೋಧನನು. ಆವುದುಂ—ಒಳ್ಳೆಯದಾಗಲಿ ಕೆಟ್ಟುದಾಗಲಿ, ಯಾವವಿಚಾರದಲ್ಲಿಯೇ ಆದರೂ ಮಿತಿಮೀರಿ ಹೋದರೆ ಹಾನಿಕರವು.

೩೧. ಬೆಳ್ವುಳು — ತುಚ್ಛಕ್ರಿಮಿಯಾದ, ಊರ್ಣನಾಭಮುಂ— ಜೇಡರ ಹುಳುವೊಕೊಡ (ನಾಭಿಯಲ್ಲಿ ನೂಲೆಳೆಯನ್ನುಳ್ಳುದು) ಸತ್ + ಗುಣಮಂ + ಒಳ್ಳೇ ಗುಣವನ್ನು (ದಾರವನ್ನು) ವಿಸ್ತರಿಪಂದು—ತಾನಾಗಿ ಹೊರಕ್ಕೆ ಪ್ರಕಾಶಪಡಿಸುವಾಗ, ನೂಲನ್ನು ಹೊರಕ್ಕೆ ಬಿಡುತ್ತಬರುವಾಗ, ನಾಪೆಯುಂ—ಹೆಚ್ಚಾಗಿ, ಅಧಃಪಾತಕ್ಕೆ —ಅಧೋಗತಿಗೆ (ಕೆಳಮುಖವಾಗಿ ಇಳಿಯುವ ಸ್ಥಿತಿಗೆ) ಜೇಡರ ಹುಳುಗಳು ಮೇಲಿಂದ ಕೆಳಕ್ಕಿಳಿಯುವಾಗ, ದೇಹದಿಂದ ನೂಲನ್ನು ಬಿಡುತ್ತ, ಆ ನೂಲನ್ನೇ ಆಧಾರವಾಗಿ ಮಾಡಿಕೊಂಡು, ಮೈಗೆ ಅಪಾಯವಾಗದಂತೆ ಇಳಿಯುವುವು. ಮೇಲೇರುವಾಗ ಆ ನೂಲನ್ನೇ ಮೈಗೆ ಸುತ್ತಿಕೊಂಡು ಏರುವುವು. ಇದರಂತೆ ತಮ್ಮ ಗುಣವನ್ನು ತಾವೇ ಹೊರಕ್ಕೆ ಬಿಟ್ಟರೆ, ಅದರಿಂದ ಮೇಲ್ಮೆಯುಂಟಾಗಲಾರದೆಂದು ಭಾವವು.

೮೨. ಕೇದಗೆ—ತಾಳೇಹೂವು, ತೀಕ್ಷ್ಣ + ಕಂಟಕ + ಶತ + ವ್ಯಾವಿದ್ಧಮಾಗಿ—ಚೂಪಾದ ನೂರಾರು ಮುಳ್ಳುಗಳಿಂದ ತುಂಬಿದುದಾಗಿದ್ದರೂ, ಫಣಿಗಳ್ಗೆ—ಹಾವುಗಳಿಗೆ, ಆಶ್ರಯಮಾದೊಡಂ, ತಾಳೆಗಿಡಗಳಲ್ಲಿ ಹಾವುಗಳುಂಟೆಂದು ಪ್ರಸಿದ್ಧಿಯು. ಬಗೆಯದೆ—ಆ ದೋಷವೊಂದನ್ನೂ ಲಕ್ಷ್ಯಮಾಡದೆ, ಬಂಡುಣಿಗಳ್ — ದುಂಬಿಗಳು (ಬಂಡು + ಉಣಿ—ಮಕರಂದವನ್ನು ಕುಡಿಯುತಕ್ಕುವು.) ಮನುಷ್ಯನಲ್ಲಿ ಒಳ್ಳೇಗುಣವೊಂದು ಮಾತ್ರವಿದ್ದಲೂ, ಅದರಿಂದ ಅನೇಕದೋಷಗಳು ಮರೆಸಿಹೋಗುವುವೆಂದು ಭಾವವು.

೮೩. ಸದ್ಗುಣದಿಂ—ಒಳ್ಳೇಗುಣಗಳಿಂದ (ಒಳ್ಳೇತಂತಿಯೆಳೆಯಿಂದ) ಗುಣವಿಚ್ಛೇದಮಂ—ಗುಣಹೀನತೆಯನ್ನು (ದಾರ ಕಿತ್ತುಹೋಗುವಿಕೆಯನ್ನು) ಆ ತಾಣದಿಂ—ಅದೇ ಸ್ಥಾನದಿಂದ, ಎಂದರೆ, ರಾಜಸ್ತ್ರೀಯರ ಭುಜಾಗ್ರದಿಂದ, ಕೆಡೆಗುಂ—ಕೆಳಕ್ಕೆಬಿದ್ದುಹೋಗುವುದು. ಕೆಲಸಕ್ಕೆ ಬಾರದ ಸೋರೆಕಾಯಿ, ಮತ್ತು ಬಿದುರದ ತುಂಡುಗಳು ಇವೆರಡಕ್ಕೂ ಗುಣವು (ತಂತಿಯು) ಸೇರಿದರೆ, ವೀಣೆಯೆನಿಸಿಕೊಂಡು ರಾಜಸ್ತ್ರೀಯರ ಭುಜಾಗ್ರವನ್ನೇರಿ ಕುಳ್ಳಿರುವುವು. ಮೊದಲು ಅದೇಸ್ಥಳದಲ್ಲಿ ಸೇರಿದ್ದ ಒಳ್ಳೇ ಮುತ್ತಿನ ಹಾರವಾದರೂ ಕೂಡ, ಗುಣವು (ಅದರದಾರವು) ಕಿತ್ತುಹೋದರೆ ಕೆಳಕ್ಕೆಬಿದ್ದು ಹೋಗುವುದು. ಆದುದರಿಂದ ಗುಣವೇ ಭೂಷಣವೆಂದರ್ಥವು.

೮೪. ಪೊಸೆಯೋಳ್—ಯುದ್ಧದಲ್ಲಿ, ಅಸಂಖ್ಯಬಾಹು — ಅನೇಕತೋಳುಗಳುಳ್ಳ (ಸಹಸ್ರಭುಜವುಳ್ಳ) ಕಾರ್ತವೀರ್ಯನು. ತೂಳ್ದಂ—ಅಟ್ಟಿದನು. ಯೋಗಿ—ಒಬ್ಬಬಡಯೋಗಿಯಾದ (ಪರಶುರಾಮನು), ನರಂ—ಮನುಷ್ಯಮಾತ್ರನಾದ ಶ್ರೀರಾಮನು, ಶಿಶುಗಳೀರ್ವರ್—ಇಬ್ಬರು ಸಣ್ಣಮಕ್ಕಳು (ಲವಕುಶರು).

ಕಾರ್ತವೀರ್ಯಾರ್ಜುನನ ಕಥೆ;—ಹಿಂದೊಮ್ಮೆ ಕಾರ್ತವೀರ್ಯನು ಯಮುನಾನದಿಗೆ ತನ್ನ ತೋಳುಗಳನ್ನಡ್ಡಗಟ್ಟಿ, ಆ ಮಡುವಿನಲ್ಲಿ ತನ್ನ ಅಂತಃಪುರಸ್ತ್ರೀಯರನ್ನು ಜಲಕ್ರೀಡೆಯಾಡಿಸುತ್ತಿದ್ದನು. ಇದೇಸಮಯದಲ್ಲಿ ಪ್ರವಾಹದಮುಂದೆ ಮತ್ತೊಂದು ಕಡೆಯಲ್ಲಿ ರಾವಣನು ಮಳಲಿನ ಲಿಂಗವನ್ನು ಪೂಜಿಸುತ್ತಿದ್ದನು. ಇತ್ತಲಾಗಿ ಕಾರ್ತವೀರ್ಯನು ತನ್ನ ಪತ್ನಿಯರ ಜಲಕ್ರೀಡೆಯು ಮುಗಿದಕೂಡಲೆ, ತನ್ನ ತೋಳುಗಳನ್ನು ಸಡಿಲಿಸಲು, ಆ ಪ್ರವಾಹ ವೇಗದಿಂದ ರಾವಣನ ಪೂಜಾಕಾರ್ಯಕ್ಕೆ ಭಂಗವುಂಟಾಯಿತು. ಆ ಕೋಪಕ್ಕಾಗಿ ರಾವಣನು ಯುದ್ಧಕ್ಕೆ ಬಂದು, ಕಾರ್ತವೀರ್ಯನ ಕೈಗೆ ಸೆರೆಸಿಕ್ಕಿದುದಾಗಿ ಪೂರ್ವಕಥೆ.

೯೫. ಪಂಡಿತಭಾಷಣಂ—ಪಂಡಿತರೊಡನೆ ಸಂಭಾಷಿಸುವುದು, ಸುಕ್ಷಿತಿಪ + ಆಸ್ಥಾನ + ನಿಷೇವಣಂ—ಒಳ್ಳೇ ರಾಜರ ಆಸ್ಥಾನಗಳಲ್ಲಿ ಕಲೆತಿರುವುದು,ವಿತತ + ಅನೇಕ ವಿದೇಶಸಂಚರಣಂ— ವಿಸ್ತಾರವಾದ ಅನೇಕದೇಶಾಂತರಗಳನ್ನು ಸುತ್ತಿನೋಡುವುದು.

೯೬. ಪಾರಾವಾರ + ಪರೀತಮಾದ—ಸಮುದ್ರದಿಂದ ಆವೃತವಾದ, ಸತ್ + ಕಲಾ + ಧೀರಂಗೆ—ಒಳ್ಳೇ ವಿದ್ಯಾಪ್ರವೀಣನಿಗೆ, "ಮೂರೂಕೂಡಿದ ಪೂರ್ವಸುಕೃತ" ವೆಂಬ ಗಾದೆಗೆ, ಇಲ್ಲಿ ಶೀಲ ಧನ, ವಿದ್ಯೆ, ಯೆಂಬೀ ಮೂರು ಭಾಗ್ಯಗಳ ಸೇರುವೆಯನ್ನು ನಿರೂಪಿಸಿದೆ.

೯೭, ಕಲಿ ಭೀಮಂ—ಸಮರ್ಥನಾದ ಭೀಮಸೇನನು. ಅಜ್ಞಾತಮಂ—ವಿರಾಟ ರಾಜನ ನಗರದಲ್ಲಿ ಒಂದುವರ್ಷಕಾಲದ ಅಜ್ಞಾತವಾಸವನ್ನು, ನೀಗಿದಂ—ಕಳೆದನು. ಅಶ್ವ + ಚೋದನೆ + ಕಲಾ + ನೈಪುಣ್ಯದಿಂ—ಕುದುರೆಯನ್ನು ನಡೆಸುವ ವಿದ್ಯೆಯಲ್ಲಿ ನೈಪುಣ್ಯದಿಂದ, ಕಷ್ಟಮಂ—ರಾಜ್ಯಭ್ರಂಶದಿಂದ ತನಗುಂಟಾದ ಕಷ್ಟವನ್ನು, (ಋತುಪರ್ಣರಾಜನ ಬಳಿ ನಳನು ಸಾರಥಿಯಾಗಿದ್ದ ಕಥೆಯು ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ನರಂ—ಅರ್ಜುನನು, ನೀಡುಂ—ವಿಶೇಷವಾಗಿ ವಿಪದ್ವ್ರಾತಮಂ—ಕಷ್ಟಪರಂಪರೆಯನ್ನು (ಅಜ್ಞಾತವಾಸವನ್ನು) ಅರ್ಜುನನು ಬೃಹನ್ನಳೆಯೆಂಬ ಶಿಖಂಡಿಯಾಗಿ ವಿರಾಟ ನಗರದಲ್ಲಿ ನಾಟ್ಯವಿದ್ಯಾಚಾರ್ಯನಾಗಿ ಅಜ್ಞಾತವಾಸವನ್ನು ಕಳೆದನು. ಆದುದರಿಂದ ಯಾವ ವಿದ್ಯೆಯಾದರೂ ಕಾಲಾಂತರದಲ್ಲಿ ಪ್ರಯೋಜನಕ್ಕೆ ಬಾರದಿರಲಾರದು.

೯೮, ಘೃತ + ಸೂಪ + ಅನ್ವಿತ—ತುಪ್ಪ, ತೊವ್ವೆ, ಇವುಗಳಿಂದ ಕೂಡಿದ, ಪ್ರತಿಭಾವೈಭವಂ—ಕಾಲೋಚಿತಯುಕ್ತಿಯ ಬಲವು.

೯೯. ನಿರ್ಗುಣಂ—ಯಾವ ಗುಣಭಾಗವೂ ಇಲ್ಲದುದು.

೧೦೦. "ಅತ್ರಭೀಷ್ಮತಶನ್ಯಾಯ" ವೆಂದರೆ, ಮೊದಲು ಭಾರತಯುದ್ಧದಲ್ಲಿ ಜಯಶೀಲರಾದ ಪಾಂಡವರಿಗೆ,ತಮಗೆ ಸಾಟಿಯಾದವರು ಹಿಂದೆ ಮುಂದೆ ಯಾರೂ ಇಲ್ಲ ವೆಂಬ ಹೆಮ್ಮೆಯುಂಟಾಯಿತು. ಉಪಾಯದಿಂದ ಅವರಿಗೆ ಈ ಗರ್ವವನ್ನು ತಪ್ಪಿಸುವುದಕ್ಕಾಗಿ, ಭೀಷ್ಮನು ತನ್ನ ಮರಣಕಾಲದಲ್ಲಿ ಅವರನ್ನು ಕರೆದು, ಇದುವರೆಗೆ ಯಾರನ್ನೂ ದಹನಮಾಡದಿರುವ ಶುದ್ಧವಾದ ಸ್ಥಳದಲ್ಲಿ ತನ್ನ ದೇಹವನ್ನು ಸಂಸ್ಕರಿಸಬೇಕೆಂದು ಕೇಳಿಕೊಂಡನು. ಅದರಂತೆ ಪಾಂಡವರು ನಿರ್ಜನವಾದ ಒಂದು ನಡುಕಾಡಿಗೆ ಕರೆತಂದು ಆ ಸ್ಥಳವನ್ನು ಭೀಷ್ಮನಿಗೆ ತೋರಿಸಿದರು. ಆಗ ಭೀಷ್ಮನು—"ಅತ್ರಶತಂ ಭೀಷ್ಮಾಃ" ಇಲ್ಲಿ ನನ್ನಂತೆ ನೂರಾರುಮಂದಿ ಭೀಷ್ಮರೇ ದಗ್ಧರಾಗಿರುವರು" ಎಂದನು. ಅಲ್ಲಿಂದ ಮತ್ತೊಂದು ಸ್ಥಳಕ್ಕೆ ತಂದರು. ಅಲ್ಲಿಯೂ ಭೀಷ್ಮನು ಅದೇ ಮಾತ

# ಶ್ರೀ [illegible]

## (ಯಕ್ಷಗಾನ)

ಗವರ್ನಮೆಂಟ್ ಹಾಯರ್ ಎಲಿಮೆಂಟರಿ ಟ್ರೈನಿಂಗ್ ಶಾಲೆಯ
ವಿದ್ಯಾರ್ಥಿ ಡಿ. ವಿಷ್ಣುಮೂರ್ತಿ ಹೊಳ್ಳ
ಗ್ರಂಥಕರ್ತರು.



ಮಂಗಳೂರು
ಾನಂದ ಕೊ-ಒಪರೇಟಿವ್ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್,
ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು,

1925

ಬೆಲೆ 0—6—6

ನ್ನು ಹೇಳಿದನು. ಎಂತಹ ನಿರ್ಜನಪ್ರದೇಶಕ್ಕೆ... ಭೀಷ .ನ
ಳುತ್ತಿರಲು, ಪಾಂಡವರು ಆಶ್ಚರ್ಯಭಗಿ...
ಸಿ ತಿಳಿಸಬೇಕೆಂದು ಪ್ರಾರ್ಥಿ...
ಪಾಂಡವರೆ ! ಇದುವರೆ...

---

ಈ ಯಕ್ಷಗಾನ ಪ್ರಸಂಗವನ್ನು ಈ ಗ್ರಂಥಕಾರನು 1925ನೆ ಇಸವಿಯ ದಕ್ಷಿಣ ಕನ್ನಡ ಜಿಲ್ಲಾ ಶಿಕ್ಷಣ ಪ್ರದರ್ಶನದಲ್ಲಿ ಸಿಕ್ಕಿದ ಸರ್ಟಿಫಿಕೇಟಿನ ಪ್ರೋತ್ಸಾಹದಿಂದ ತಯಾರಿಸಿದನು. ಇದರಲ್ಲಿ ಶ್ರೀ ಕೃಷ್ಣನ ಜನನ, ಲೀಲೆ, ಕಂಸ ಮಾಗಧ ಶಿಶುಪಾಲ ಕಾಲಯವನ ಹಂಸಡಿಬಿಕರ ವಧೆ ಮತ್ತು ರಾಜಸೂಯ ಈ ಭಾಗವನ್ನು ಒಳಕೊಂಡು ರಚಿಸಿರುವನು. ಶಿಕ್ಷಣ ಪ್ರದರ್ಶನಕ್ಕಾಗಿ ಬರೆದ 'ಸತ್ಯಸಾರ' ಎಂಬ ಪ್ರಸಂಗವನ್ನು ಇತಿಹಾಸ ವಿಷಯಗಳಿಂದ ಕೂಡಿದ್ದು ಇತಿಹಾಸಜ್ಞಾನದ ಅಭಾವವಿದ್ದಲ್ಲಿ ಜನಗಳಿಗೆ ಅಷ್ಟೊಂದು ರುಚಿಸಲಾರದೊ ಎಂಬ ಶಂಕೆಯಿಂದ ಪ್ರಕಟಿಸದೆ ಅದಕ್ಕೆ ಬದಲಾಗಿ ಜನಸಾಮಾನ್ಯರಿಗೂ ತಿಳಿದಿರುವ ಈ ಕಥೆಯನ್ನೆ ಬರೆದು ಪ್ರಕಟಿಸಿರುವನು. ಇದರಲ್ಲಿರುವ ತಪ್ಪೊಪ್ಪುಗಳನ್ನು ಲಾಕ್ಷಣಿಕರು ಮನ್ನಿಸಿ ಬರೆ ಹಳ್ಳಿಗರ ವಿಹಾರಕ್ಕಾಗಿ ಬರೆದು ಪ್ರಕಟಿಸಿದ ಈ ಗ್ರಂಥವನ್ನು ಕೃಪಾದೃಷ್ಟಿಯಿಂದ ಕಾಣುವರೆಂದು ನಂಬಿರುವನು. ಇದನ್ನು ಪ್ರಕಟಿಸುವಂತೆ ಪ್ರೋತ್ಸಾಹಗೊಳಿಸಿದ ಗುರುವರ್ಯರಾದ ಮ. ರಾ. ರಾ. ಉಳ್ಳಾಲ ಮಂಗೇಶರಾಯರಿಗೂ ತನ್ನ ವಂದನೆಗಳನ್ನು ಸಮರ್ಪಿಸುವನು.

ಇತಿ ರಸಿಕಜನಸೇವಕ

ಡಿ. ವಿಷ್ಣುಮೂರ್ತಿ ಹೊಳ್ಳ.

---

ಶ್ರೀ ... ಕೃಷ್ಣ ... 

# ಕೃಷ್ಣ ವಿಜಯ.



॥ ಅಷ್ಟ ಧಾಟಿ ॥

ಮಾಕಾಮಿನೀ ರಮಣ । ಪಾಕಾರಿಜೋದ್ಧರಣ । ನಾಕಾಧಿಪೇಶ್ಯ ಸುಗುಣಾ ॥ ಸ್ತೋಕೇಶರಾಧ್ರಿಧರ । ಲೋಕಾಧಿಪಾ ಸುಜನ । ಶೋಕಾಂಬುಜಾಬ್ಜ ಮಹಿಮಾ ॥ ಆಕಾಶಸಿಂಧು ಜನ । ಕಾಕಾರಹೀನ ವಪು । ರೇಕಾತ್ಮ ಪೂರಿತ ಗಸಾ ॥ ಓಂಕಾರರೂಪ ಸುಖ । ಮೋಂಕಾರ ಪೂರ್ವ ಹರಿ । ರಾಕಾಶ ಪಾದ ನಿಶತೂ ॥ ೧ ॥

॥ ರಾಗ ನಾಟಿ ರೂಪಕತಾಳ ॥

ಜಯ ಜಯ ಜಯ ಗಣನಾಯಕ । ಜಯ ಜಯ ಸಿದ್ಧಿಪ್ರದಾಯಕ । ಜಯ ಜಯ ಶರಣ ಸಹಾಯಕ । ಜಯ ಜಯ ಮಾಂ ಪಾಹೀ ॥ ಪಲ್ಲ ॥ ಗಿರಿಶತನೂಭವ ಕರಿಮುಖ । ಗಿರಿಧರಮಿತ್ರ ವಿನಾಯಕ । ಗಿರಿವರಸುತೆ ಯುದರಾಲಯ । ವರಕೈರವ ಚಂದ್ರಂ ॥ ಕರುಣಾಗರ ತರುಣಾರುಣ । ಕಿರಣಾಮರ ಮುನಿ ಸನ್ನುತ! ಚರಣಮನಘ ರಿಪು ಖಳಕುಲ । ಕಂಕಂಠೀರವನೇ ॥ ಜಯ ಜಯ ॥ ೧ ॥ ಗುಣಸಾಗರ ಮೂಷಿಕವಾ । ಹನ ಯುದ್ಧ ವಿಶಾರದ ವರ । ಮನುಮಥ ಸುಂದರ ನಿರವಧಿ । ಯನುಪಮ ಚಾರಿತ್ರಂ ॥ ಎಣಿಸದೆ ಮನದೊಳು ದ್ರೋಹವ । ಧನಮಾಯುವನಾರೋಗ್ಯವ । ತನಗುರೆ ಕರುಣಿಸಿ ಪೊರೆ ಸದಾ । ನೆನಸುವೆ ತವ ಗುಣವಾ ಜಯ ಜಯ ॥ ೨ ॥

॥ ಭಾಮಿನಿ ॥

ಹರಿಹರರ ಮನದಲ್ಲಿ ನೆನಸುತ । ಹರಿ ಸುತನ ಹರ ಸುತನ ಸ್ತುತಿಸುತ । ಹರಿಸುರಪ ಮುಂತಾದ ಗುರುಕವಿಬುಧರ ಕೊಂಡಾಡೀ ॥ ಹರಿಹರರ ಮನದಲ್ಲಿ ನೆನಸುತ । ಹರಿಸುತನ ಹರಸುತನ । ಸ್ತುತಿಸುತ । ಹರಿ ಸುರಪ ಮುಂತಾದ ಗುರುಕವಿ ಬುಧರ ಬಲಗೊಂಬೇ ॥ ೧ ॥

|| ದ್ವಿಪದಿ ||

ಆದಿಕವಿ ವ್ಯಾಸ ವಾಲ್ಮೀಕಿ ಮುಖ್ಯರನೂ || ಸಾದರದಿ ಸಂಸ್ತುತಿಸಿ ಗುರುಹಿರಿಯರನ್ನೂ || ೧ || ವಂದಿಸುತ ಭಾಗವತ ದಿವ್ಯಕಥನದಲೀ || ಚಂದ್ರಕುಲದೊಳು ಜರಾಸಂಧನುದಿಸುತಲೀ || ೨ || ದುರ್ನಡತೆಯೊಳು ನೃಪರಗೆಲಿದು ಸೆರೆಪಿಡಿದೂ || ಬನ್ನಬಡಿಸಿರಲೀಚೆ ಕಂಸನೃಪನೊಗೆದೂ || ಧರೆಗೆ ಕಂಟಕನಾಗಿ ಬೆಳವುತಿರಲತ್ತ || ಸುರರು ಮೊರೆಡಲಾಗ ಹರಿಶೇಷ ಸಹಿತಾ || ೪ || ವರ ರಾಮಕೃಷ್ಣರೆಂಬಾಖ್ಯೆಯಿಂದುದಿಸೀ || ದುರುಳರಹ ಕಂಸ ಮೊದಲಾದ್ಯರನು ವಧಿಸೀ || ೫ || ಆಳುತಿರೆ ಮಧುರೆಯನು ಮಗಧನು ಪಟ್ಟಣವಾ || ತಾಳಲಸದಳವಾಗಿ ದ್ವಾರಕಾಪುರವಾ || ೬ || ಶರಧಿ ಮಧ್ಯದೊಳು ನಿರ್ಮಿಸಿ ಯಾದವರನೂ || ನೆರಹಿ ಮೆರದನು ಬಳಿಕ ಹಂಸಡಿಬಿಕರನೂ || ೭ || ಅಳಿಸಿ ರಾಜಾಧ್ವರದ ಮುಖದಿ ಮಾಗಧನಾ || ಕೊಲಿಸಿ ಚೈದ್ಯನಕೊಂದ ಹರಿಯ ಚರಿತೆಯನಾ || ೮ || ಒರವೆನಿಂತಿವರೊಳಿಹ ತಪ್ಪಿದ್ದುವದೂ || ಅರಿಯೆ ವ್ಯಾಕರಣಾದಿ ಶಾಸ್ತ್ರಗಳನೊಂದೂ || ೯ ||

|| ರಾಗ ಸೌರಾಷ್ಟ್ರ ತ್ರಿವುಡೆತಾಳ ||

ವರಪರೀಕ್ಷಿತ ಭೂಪನೊಂದಿನ | ಪರಮ ಶುಕಮುನಿಪತಿಯು ಚರಣದೊ | ಳೆರಗಿ ಕೇಳ್ದನು ರಾಮಕೃಷ್ಣರ | ಚರಿತೆಯನ್ನೂ || ೧ || ಮಗಧನೆಂತುದ್ಭವಿಸಿದನು ವರ | ಜಗದಧಿಪರನ್ನೆಂತು ಗೆಲ್ದನು | ಮಿಗೆ ಮಡಿಯಲೇನ್ ದುಷ್ಕೃತಿಯನು | ಜ್ಜುಗಿಸಿದಧಟಾ || ೨ || ದುರುಳ ಕಂಸಾದ್ಯರು ಮಡಿದ ಬಗೆ | ಯುರುಹಬೇಕೆನಲೊಪ್ಪಿ ದಾವೋ | ದರನ ಧ್ಯಾನಿಸುತುಸುರ ತೊಡಗಿದ | ವರ ಮುನಿಪನೂ || ೩ ||

|| ವಾರ್ಧಿಕ ||

ಒರವೆನಾಲಿಸು ರಾಜಭೃವ ಕುಲಾಂಬುಧಿ ರಾಜ | ಕುರುವಂಶದೊಳಗುದಿಸುತುಪರಿಚರನೆಂದೆನಿಸು | ತುರು ಪರಾಕ್ರಮನಪ್ಪ ವಸುಪುತ್ರನೆನಿಸಿರ್ಪ | ಬ್ರಹದ್ರಥಾಖ್ಯನು ಸೌಖ್ಯದೀ || ಶರಧಿ ವೇಷ್ಟಿತ ಜಗದ ನಡುವಧಿಕವಹ ಮಗಧ | ಪುರದಾಧಿಪತಿಯಾಗಿ ಬಾಳುತಿರಲಾಭೋಗಿ | ವರಕಾಶಿರಾಜನೀರ್ವರು ಪುತ್ರಿಯರ ಪಾಣಿಗ್ರಹಣಮನ್ನೆ ಸಗೀರ್ದನೂ || ೧ ||

|| ರಾಗ: ಭೈರವಿ ಝಂಪೆತಾಳ ||

ಧರಣಿಪತಿಕೇಳ್ ಮಗಧ । ಪುರದರಸ ಬ್ರಹದ್ರಥನು । ಹರುಷ ದಿಂದಿರುತಿರ್ದ । ಪರಮ ವಿಭವದಲಿ ॥ ೧ ॥ ಸಪ್ತಾಂಗಯುತನೆನಿಸು । ತಾಪ್ತೇಷ್ಟರೊಡನೆ ದಿ । ವಸ್ಪತಿಯ ನಾಚಿಸುವನಷ್ಟಭಾಗ್ಯದೊಳು ॥ ೨ ॥ ವರಪಂಚವಿಧ ಧರ್ಮ । ದಿರವರಿತು ಭೂಮೀಶ । ಸುರೆ ದಾನಮಾನದಲಿ । ಪಿರಿಯನೆಂದೆನಿಸಿ ॥ ೩ ॥ ವಂದಿಮಾಗಧ ಸೂತ । ರಿಂದ ಪೊಗಳಿಸಿಕೊಂಡು । ಮಂದಿಮಾರ್ಬಲ ಜನದ । ಮುಂದೆ ರಂಜಿಸುವ ॥ ೪ ॥

|| ಕಂದ ಪದ್ಯ ||

ಸಿಂಹಪರಾಕ್ರಮಿಯೊಂದಿನ । ಸಿಂಹಾಸನವೇರ್ದಿರ ಲಾಣ್ಮನ ಪದಗಳಿ ಗಂ । ಸಿಂಹಸುಮಧ್ಯೆಯರೆರಗುತ । ಬ್ರಹ್ಮನಕೃತಿಗಳಿಗಂ ಬೈದಿಂತು ಸುರಿದರಾಗಳ್ ॥ ೧ ॥

|| ರಾಗ: ಕೇತಾರಗೌಳ ಅಷ್ಟತಾಳ ||

ವಲ್ಲಭ ಕೇಳೆಮ್ಮ । ಸೊಲ್ಲನು ದಯವಿಟ್ಟು । ಮಲ್ಲ ಸಾಹಸವಂತನೆ॥ ಚೆಲ್ವಸುತರ ನಕ್ಕಿ । ಯಲ್ಲಿ ಕಾಣದೆ ದುಃಖ । ದಲ್ಲಿಹೆವೀರ್ವರೆಂದು ॥ ೧ ॥ ತರುಣಿಯರಿರ ವ್ಯರ್ಥ । ಮರುಗಲೇತಕೆ ವಿಧಿ । ಬರಹವ ಮೀರ್ವರ್ಯಾರು ॥ ತರಳರ ಯೋಗ್ಯತೆ । ಯಿರಲಾಗರು ಪುಟ್ಟ । ದಿರುವರೆ ನಿಮಗೆಂದಿಗು॥ ೨॥ ಖರೆಯಹುದೆಲೆ ಮನೋ । ಹರ ನಿನ್ನ ನುಡಿಗಳು । ತರಳರಿಲ್ಲದ ಜೀವಿಯು ॥ ನರಕಕ್ಕೆ ಸಲುವದೆಂ । ದರಿಯೆಯ ಸ್ವರ್ಗವು । ದೊರಕುವದೆಮಗೇಗಳು॥೩॥ ಮರುಳೆಮ ಘನಭವಾಂ । ತರದ ಸುಕೃತವಿಲ್ಲ । ದುರೆಸ್ವರ್ಗ ಪದವಿಯಕ್ಕೆ॥ ಬರಿದೆ ಹಂಬಲಿಸದಿ । ರರವಿಂದನಾಭನ । ಸ್ಮರಿಸುತ್ತಲಿರಿ ಮನದಿ ॥ ೪ ॥ ತರವಲ್ಲ ಜೀವೇಶ । ನೊರವುದಿನಿತು ಚೆಲ್ವ । ತರಳರು ಪುಟ್ಟುವಂತೆ ॥ ಪರಮಸೋಂಪೆಸಗಿ ಭೂ । ಧರನ ಮೆಚ್ಚಿಸಿದರೆ । ಕರುಣಿಸದಿರನಿಷ್ಟವ ॥ ೫ ॥

|| ವಾರ್ಧಿಕ್ಯ ||

ಕೋಪಲಾಂಗಿಯರುಕ್ತಿಯನ್ನವಧರಿಸಿ ಪುತ್ರ । ಕಾವೇಚ್ಛೆಯ ನ್ನೆಸಗಿ ಸುತರುದಿಸಲಿಲ್ಲೆಂದು । ಭೂಮಿಯೊಡೆಯನವ ಸಚಿವಂಗಿತ್ತು । ಸುಮತಿಕೇಶಿನಿಯೆನುವ ರಮಣಿಯರನು ॥ ಪ್ರೇಮದಿಂ ಕೂಡಿ ವರಸಾಡು

ಬೀಡಂತ್ಯಜಿಸು । ತಾ ಮಹಾರಣ್ಯಮಂ ಸೇರಿಕಂಡನು ರಾಮು । ನಾಮು ವನ್ನುಚ್ಚರಿಸಿ ಯೋಗನಿಷ್ಟೆಯೊಳಿರುವ ಚಂಡಕೌಶಿಕ ಮುನಿಪನ ॥ ೧ ॥

|| ಭಾಮಿನಿ ||

ಪೃಥ್ವಿಪತಿಲಾಲಿಪುದು ನೃಪಭಯ । ಭಕ್ತಿಯಲಿ ಬಲಬಂದು ವಂದಿಸು ತತ್ಯಧಿಕ ಸಂತೋಷದಿಂದಾಶ್ರೈಸುತನುದಿನವು ॥ ಪತ್ನಿಯರಸೊಡಗೂಡಿ ಮುನಿಕುಲ । ಸತ್ತಮನ ಶುಶ್ರೂಷೆಯನ್ನೆಸ । ಗುತ್ತಿರಲಿಕೊಂದಿವಸ ಕಣ್ದೆರ ದೆಂಡನೀತೆರದೀ ॥ ೧ ॥

|| ರಾಗ: ಸಾಂಗತ್ಯ ರೂಪಕತಾಳ ||

ಯಾರಯ್ಯ ನೀನೆನ್ನ । ನಾರಾಧಿಸುವದ್ಯಾಕೆ । ಭೂರಿನಿಷ್ಟೆಯೊಳನ ವರತ॥ ಕಾರಣವೇನಿರ್ಪುದಾರಣ್ಯಕೈತರೆ । ಚಾರುಮೊಗವು ಕಂದಿದೇಕೆ ॥೧॥ ಎನಲೆಂದ ನಿಳೆಯಾಣ್ಮ । ನೆನಗಡಸಿದ ಕಷ್ಟ । ನಿಸಗರಿವಿರಲೇನ ಪೇಳ್ವೆ ॥ ಮುನಿಯೆನ್ನಬಳಿಕ ಭೂ । ವನಿತೆ ವಿಧವೆಯಾದ । ಕಿನುತ ಬಂದೆನು ಘೋರ ವನಕೆ ॥ ೨ ॥ ಕ್ಷಿತಿಪ ನೀನೀತೆರ । ಕಥಿಪುದೇತಕೆ ಮನೋ।ರಥವ ಚಿತ್ತದಿಸು ವಂಚಿಸದೆ ॥ ಕೃತಕಮಲ್ಲಿದು ರಾಜ್ಯ । ಸತಿಯು ಸಧವೆಯಪ್ಪಂ । ತತಿ ಕರುಣೆಯನಿಟ್ಟು ಪೊರೆವೆ ॥ ೩ ॥ ನುಡಿವೆನಾದಡೆ ಕೇಳೆ । ನ್ನೊಡಲೊಳು ಪುತ್ರರ । ಪಡೆಯದೆ ಸಕಲಸೌಭಾಗ್ಯ ॥ ದೃಢದೊಳು ಶವಕಿಟ್ಟ । ಒಡವೆ ಯೋಲಾಡುದು । ಕೊಡು ಮುದ್ದು ಮಕ್ಕಳ ದಯದೀ ॥ ೪ ॥ ಎಂದುದಾಲಿಸಿ ಮುನಿ । ವೃಂದ ಕುಮುದಚಂದ್ರ । ನಂದು ಸುಜ್ಞಾನದೃಷ್ಟಿಯೊಳು ॥ ಅಂದದಿ ಪರಿಕಿಸ । ಲೊಂದಾಮ್ರಪಕ್ವವು । ಮುಂದೆ ಬಿದ್ದುದ ನೋಡಿ ನುಡಿದ ॥ ೫ ॥ ಕೇಳಯ್ಯ ಧರಣೇಂದ್ರ । ನೀಳು ಚಿಂತಿಸದೀರ । ಸಾಲ ಫಲವನು ಕೈಕೊಂಡು ॥ ಬಾಲೆಯರಿಂಗಿತ್ತ । ಡಾಲಸ್ಯಮಿಲ್ಲದೆ । ಬಾಲರು ದಿಪರು ಪೋಗೆಂದ ॥ ೬ ॥ ಎನೆ ಮುಗುಳೊಂದಿಸಿ । ಮುನಿಪನ ಬೀಳ್ಕೊಂಡು । ಜನನಾಥನೈತಂದು ಪುರಕೆ ॥ ವಿನಯದಿಂದಾ ಫಲ । ವನು ಸೀಳುಮಾಡಿ ತಾ । ವನಿತೆಯರೀರ್ವರಿಂಗಿತ್ತ ॥ ೬ ॥

|| ಭಾಮಿನಿ ||

ಬಳಿದುವಪರಿಗೆ ಗರ್ಭ ಜನನದ।ನೆಲೆಯ ಕಾಲಕೆ ಸತಿಯರುದರದೊ । ಳಿಳಿದುದೊಂದೊಂದವಯುದ ಸೀಳೆರಡು ಸಮನಾಗಿ ॥ ಬಳಿಕ ಕಂಡವರಕಟ

ದುಷ್ಕೃತ | ಫಲವೆ ಸುಡಲಿವನೆನುತ ಬಿಸುಟರು | ಹೊಳವ ಪುರಬಾಹ್ಯೆಯಲಿ ನಡುವಿರುಳರಸಕೇಳೆಂದ ॥ ೧ ॥

|| ಕಂದಪದ್ಯ ||

ಆ ನಡುಯಾಮಿನಿಯೊಳ್ ಜರೆ | ದಾನವಿಯಾಹಾರವ ಹುಡುಕಾಡುತ ಬರುತಿರ | ಲಾನಗರದೊಳೀಪರಿಯಂ | ಕಾಣುತಲಿಂತೆಂದೊರೆದಳ್ ತನ್ಮನದೊಳಗಂ ॥ ೧ ॥

|| ರಾಗ ಮಾರವಿ ಅಷ್ಟತಾಳ || (ದಾಟಿ—ಆರೊ ಬಂದವನು | ಈ ಸನಕೆ)

ಏನನುಸುರಲಿನ್ನು | ಇಲ್ಯಾದ ನ | ವೀನಬಗೆಗೆ ತಾನು ॥ ಕಾಣಲೊಂದೆಳೆ ಹಸುಳೆಯೆರಡು ಸ | ಮಾನ ಹೋಳಾಗಿರ್ಪುದಿದರನು | ಸಾನುರಾಗದಿ ಪೆತ್ತಿರುವರ ವರ | ಮಾನಿನಿಯುದಾವಳೊ ಮಹೇಶ್ವರ ॥ ಏನನುಸುರಲಿನ್ನು ॥ ೧ ॥ ಯಾರೀಶಿಶುವನು ಸಂಹರಿಸುತ | ತಿನ್ನ | ದೀರೀತಿ ಸೀಳ್ದುಮಾಡಿರಿಸುತ ॥ ಸಾರಿರುವರೆಂದೆನುತಲಸುರಿಯು | ಘೋರನಾಸೀಳೆರಡ ಜೋಡಿಸೆ | ಮಾರಹರನಂಜುವ ತೆರದಿ ಗಂ | ಭೀರಧ್ವನಿಯಿಂ ಬಾಲ ಚೀರಿದ ॥ ೨ ॥

|| ರಾಗ ಕಾಂಬೋದಿ ಝಂಪೆ ತಾಳ ||

ವಸುಧೀಶ ಲಾಲಿಸಾ | ಶಿಶುವಳಲುವುದ ಕೇಳು | ತಸವಸದಿ ಜನರೆಲ್ಲ ಬೆದರಿ ॥ ಅಸುರೆಯೆಡೆಸೈತರಲಿ | ಕುಸುರಿದಳು ಕೈಪಿಡಿದು | ಸಸಿನದಿಂದಿಹ ನೃಪಾಲನೊಳು ॥ ೧ ॥ ಇತ್ತ ಲಾಲಿಸು ರಾಯ | ಕಿತ್ತಡಿಹಸಾದದಿಂ | ಪತ್ನಿಯರು ಪಡದ ಮಗುವಿದನು ॥ ಅರ್ಥಿಯಿಂ ಸಲಹು ನಿನ | ಗುತ್ತರೋತ್ತರವಹುದು | ಸತ್ವಭುಜಬಲಯುಕುತನಹನು ॥ ೨ ॥ ಇಂದಿನಿಂದೆನ್ನ ಪೆಸರಿಂದ ಕರವುದು, ಜರಾ | ಸಂಧನೆನುತೆರಡುಸೀಳುಗಳ ॥ ಸಂಧಿಸಿದ ಕಥದಿ, ಜರೆ | ಯೆಂದು ಪೆಸರೆನಗಿನ್ನು | ಮುಂದೆ ಭಯವಿಲ್ಲ ಗುಣಶೀಲ ॥ ೩ ॥ ಸಾರ್ವಭೌಮತ್ವದಿಂ | ದೂರ್ವಿಯೊಳು ರಂಜಿಸುವ | ಪಾರ್ವರಿಗೆ ಹಿತವ ಚಿಂತಿಸುವ ॥ ಸಾರ್ವೆ ತಾನೆನುತೈದೆ | ಸೋರ್ವಮುದಬಾಷ್ಪದಿಂ| ದೂರ್ವರಾಧೀಶ ಮರಳಿದನು ॥ ೪ ॥

|| ವಾರ್ಧಿಕ್ಯ ||

ಚಂದ್ರಕುಲತಿಲಕ ಕೇಳರಮನೆಯೊಳಗೆ ಬಾಲ । ಚಂದ್ರಮನ ಜರೆವಪುತ್ರನ ಪೋಷಿಸುತ್ತಿರಲು । ಚಂದ್ರಚೂಡನ ದಯದಿ ಬಲಿದುದ್ದೈ ಮುಗುಧಂಗೆ ಷೋಡಶಾಬ್ದಗಳಾಗಲಿ ॥ ಬಂದೆಂದ ಚಂಡಕೌಶಿಕ ನಿನ್ನ ಡೆಯೊಳೆಸೆವ । ಬಂಧುರಂಗೀ ರಾಜ್ಯಪಟ್ಟವನುಂಗಟ್ಟಿ ಗೋ । ವಿಂದನಂ ಭಜಿಸು ಲೇಸೆಂದೆನುತ ತೆರಳೆ ನೃಪನಿಂತೆಂದ ಕರದು ಸುತಗೆ ॥ ೧ ॥

|| ರಾಗ ಸುರಟಿ ಏಕತಾಳ || (ದಾಟಿ — ಕೋಮಲಾಂಗಿಕೇಳೆ । ಮದಗಜ)

ಕೇಳು ಕುಮಾರಕನೆ । ಸದ್ಗುಣ । ಶೀಲ ಧುರಂಧರನೆ ॥ ಭೂಲಲನೆಯ ನೀ । ಪಾಲಿಸು ಗರುವದ । ತಾಳದೆ ಶಶಿಕುಲ । ದೇಳಿಗೆಯಳಿಸದೆ ॥ ಕೇಳು ॥ ೧ ॥ ಗುರುಬುಧರನು ಮುದದಿ । ಮನ್ನಿಸಿ । ಹರಿಹರರನು ಮನದಿ ॥ ಸ್ಮರಿಸುತಲನುದಿನ । ವರ ಕುಲದೇವಿಯ । ಮರೆಯದೆ ಪೂಜಿಸಿ । ಧುರಗಲಿಯಾಗೈ ॥ ೨ ॥ ಜಾತಿಸುನೀತಿಯನು । ಮಾಣದೆ । ಭೂತದಯದಿ ನೀನು । ಖ್ಯಾತಿಶಯದೊಳಾರಾತಿಗಳಿಲ್ಲದ । ರೀತಿಯನೆಸಗೆನ । ಲೀತೆರನರುಹಿದ ॥ ೩ ॥

|| ರಾಗ ಮಾರವಿ ಏಕತಾಳ ||

ಜನಕನೆ ಬಿಡು ಮನ । ದನುಮಾನವ ತನ । ಗಿನಿತರುಹುವದೇಕೆ ॥ ವಿನಯದಿ ಭಜಿಸುತ ಗಣಪನ ಮೆಚ್ಚಿಸಿ । ಮನದಿಷ್ಟವ ಪಡದು ॥ ೧ ॥ ನಿಖಿಳ ಮಹೀಶರ । ನಿಕರವ ಸೋಲಿಸಿ । ಸಕಲ ವಸುಂಧರೆಗೆ ॥ ವಿಕಟನೆನಿಸಿ ಜಸ । ಪ್ರಕಟಿಸದಿರೆ ನೆನ । ಲಕುಟಿಲಚಿತ್ತದಲಿ ॥ ೨ ॥

|| ಭಾಮಿನಿ ||

ವರಬೃಹದ್ರಥ ಧರಣಿಪಾಲಕ । ಹರುಷದಿಂ ಪಟ್ಟಾಭಿಷೇಕವ । ವಿರಚಿಸಿದನತಿ ವೈಭವದಿ ನೃಪರುಗಳ ಮಧ್ಯದಲಿ ॥ ತರುಣಿಯರನೊಡಗೂಡಿ ಲಕ್ಷ್ಮೀ । ಯೆರೆಯನಂ ಧ್ಯಾನಿಸುತ ವಿಪಿನಕೆ । ತೆರಳಿ ಋಷ್ಯಾಶ್ರಮವನಾಚರಿಸುತ್ತ ರಂಜಿಸಿದ ॥ ೧ ॥

|| ರಾಗ ಸೌರಾಷ್ಟ್ರ ತ್ರಿವುಡೆ ತಾಳ ||

ಧರಣಿಪತಿ ಕೇಳೊಂದಿವಸ ಭೂ । ವರ ಜರಾಸಂಧಾಖ್ಯ ತನ್ನೊಳ ಗರಿತು ನುಡಿದನು ಸಭ್ಯರಿಂಗತಿ । ಹರುಷದಿಂದ ॥ ೧ ॥ ಖಂಡಪರಶುವ

ಮೆಚ್ಚಿಸದೆ ಭೂ । ಮಂಡಲೇಶ್ವರರುಗಳ ದರ್ಪವ । ಖಂಡಿಸಲು ಬಹು ಸುಲಭವಲ್ಲೈ । ಖಂಡಿತವಿದು ॥ ೨ ॥ ಹರನನೇಕೋದೃಢದಿ ಭಜಿಸುತ । ವರವ ಸಂಪಾದಿಸುತ ಬಹೆಸೆಂ । ದುರುತರಾನಂದದಲಿ ನಡದನು । ಹರನ ಗಿರಿಗೆ ॥ ೩ ॥ ಪರಮ ಕೈಲಾಸಾದ್ರಿಯೆಡೆಗೈ । ತರುತ ಮಜ್ಜನಗೈದು ನಿರ್ಮಲ । ಸರಸಿಯಲಿ ಹರಶಂಭು ಎಂದೇ । ಸ್ಮರಿಸುತಿರ್ದ ॥ ೪ ॥ ತೊರದು ನಿದ್ರಾಹಾರಗಳ ಮೇಣ್ । ಬೆರಳವೂಗಿಸೊಳಿಟ್ಟು ಧ್ಯಾನಿಸು । ತಿರಲು ವೈದೋರ್ದೆಂದಸೀತೆರ । ಗಿರಿಜೆಯರಸ ॥ ೫ ॥

॥ ರಾಗ ನವರೋಜು ಏಕತಾಳ ॥ (ದಾಟಿ— ಅಮ್ಮಯ್ಯ ಬಿಡುದು ಡಾ । ನೀ । ಸುಮ್ಮನೆ)

ಮೆಚ್ಚಿಗೆ ಮೆಚ್ಚಿದೆ ಮಗನೆ । ನಿನ್ನ । ಹೆಚ್ಚಿನ ಸ್ವಾತ್ಯಕೆ ನೃಪನೆ ॥ ಉಚ್ಚರಿಪುದು ನಿ । ನ್ನಿಚ್ಛೆಯ ಸಲಿಸುವೆ । ನಿಶ್ಚಯವಾತಿದು । ನಿಚ್ಚಟ ಭಕುತಿಗೆ ॥ ಮೆಚ್ಚಿದೆ ಮೆಚ್ಚಿದೆ ॥ ೧ ॥ ಲಾಲಿಪುದೆನ್ನರಿಕೆಯನು । ಗಣ । ಪಾಲ ಮಹೇಶ್ವರ ನೀನು ॥ ಖೂಳನೃಪಾಲರ । ಸೋಲಿಸಿ ತ್ರೈಜಗ । ಪಾಲಕ ನಹ ತೆರ । ಪಾಲಿಸು ನೀ ವರ ॥ ೨ ॥ ತರಳನೆ ನಿನ್ನಯ ಮನದಿ । ಬಯ- । ಸಿರುವ್ರೋಲಪ್ಪುದು ಮುದದಿ ॥ ಧರಣಿವಲಯಕೀ । ಶ್ವರನಾಗೆನ್ನುತ । ಹರಸುತ ಲಿತ್ತನು । ವರತ್ರೈಭೇರಿಯ ॥ ೩ ॥

॥ ಭಾಮಿನಿ ॥

ಇದುಮಗಧ ವರವೃಷಭಚರ್ಮದ । ಪದರಿನಿಂ ನಿರ್ಮಿಸಿದ ಭೇರಿಗ । ಳದುಭುತದ ಭೈರವಿಯ ಗುಡ್ಡಿಯಂತದೊಳಗಿರಿಸುವುದು ॥ ಇದನು ಬಾರಿಸಿ ಪೋದಡೆಂದಿಗು । ಕದನದಿಂ ಜಯಲಕ್ಷ್ಮಿಯೊಲಿವಳು । ಸದರವಲ್ಲೊಂದಾಗಿ ಭೇರಿಗಳೊದೆದ ವೀರನಲಿ ॥ ೧ ॥

॥ ಕಂದಪದ್ಯ ॥

ಏನುತಂ ಮರಳಲ್ಕಭವಂ । ಮನದೊಳಗಕ್ಕಜದಿಂದಾ ಮಾಗಧ ತನ್ನರ । ಮನೆಯಂ ಸೇರಿರಲೊಂದಿನ । ಜನಪರ ಗೆಲ್ವ ನೆವದಿ ಮಂತ್ರಿ ಯೊಳಿಂತೆಂದಂ ॥ ೧ ॥

|| ರಾಗ ಕೇತಾರ ಗೌಳ ಝುಂಪೆತಾಳ ||

ಧಿರುರೆ ಮಂತ್ರೀಶ ಕೇಳು । ಬಾಹುಜರು । ಮೆರವರೈ ಭೂತಳದೊಳು || ಧುರದೊಳವರನು ಸೋಲಿಸಿ । ಕಪ್ಪವನು । ಹೊರಿಸಬೇಕಯ್ಯ ಸಹಸ || ೧ || ಸೆರೆಪಿಡಿದು ಕುನ್ನಿ ನೃಪರ । ಭೈರವಗೆ । ನರಬಲಿಯನಿತ್ತು ತೀರ || ಹರಹಿಸುತ ತನ್ನ ಜಸವ । ಬಾಳುವದು । ಹರುಷಿಸುತ ಪಿತೃಗೋತ್ರವ || ೨ || ಹೊಡಸು ರಣಭೇರಿಯನ್ನು । ಕೂಡಿಸೀ । ವ್ಯಥದಿ ಧುರಸನ್ನಾಹವನು || ಕಡುಗಲಿಗಳನು ನೆರಹಿಸು । ಪೊರಡುವೋಲ್ । ಪಡೆಗಳಲ್ಲಿ ವಿಚಾರಿಸು || ೩ ||

|| ವಾರ್ಧಿಕ್ಯ ||

ದೊರೆಯನುಜ್ಞೆಯನರಿತು ಮಂತ್ರಿತಾ ನೆರಹಿದಂ । ಕರಿತುರಗ ರಥ ಸೈನ್ಯ ಮಂದಿ ಮಾರ್ಬಲಗಳಂ । ಸ್ಮರಹರಂಗಾ ಬಗೆಯ ಬಣ್ಣಿಸಲ್ಕರಿದೆಂಬ ತೆರದಿಂದ ಲಾಕ್ಷಣದೊಳೂ || ಧರೆಯಧಿಪನಿತ್ತ ಕರತಳದಿ ಶಸ್ತ್ರಾಸ್ತ್ರಮಂ । ಧರಿಸಿ ಮಣಿಖಚಿತ ರಥವನ್ನಡರಿ ಪೊರಟು ಮೇ । ಣರಿರಾಯರಂ ಗೆಲ್ದು ಮುಂದೈದಿ ಕಾಶ್ಮೀರ ನಗರಮಂ ಮುತ್ತಲಾಗ || ೧ ||

|| ಭಾಮಿನಿ ||

ಚರರು ನಡುಗುತ ಶೂರಸೇನನ । ಚರಣದೆಡೆಗೈತಂದು ಭಯದಲಿ । ಪರನೃಪರ ಮುತ್ತಿಗೆಯ ಪರಿಯ ನಿವೇದಿಸಲು ಭರದಿ||ನರಹರಿಯೊ ಮೇಣ್ ಪ್ರಳಯಕಾಲದ । ಹರನೊ ತಾನೆಂಬಂದದಲಿ ಪಡೆ । ಪೆರಸುತೈತಂದೊರದ ಕಂಗಳೊಳಿಂಗಳವನುಗುಳಿ || ೧ ||

|| ರಾಗ: ಶಂಕರಾಭರಣ ಮಟ್ಟೆತಾಳ ||

ಆರು ನೀನು ಪೆಸರದೇನು । ಘೋರನೆನ್ನೊಳರುಹು ನಿನ್ನ । ವಾರತೆಗಳ ನಾವಕುಲೋ । ದ್ಧಾರನೆಂಬುದ || ವೀರಚಂದ್ರವಂಶ ವಾರ್ಧಿ । ಕೈರವಾಪ್ತ ಮಾಗಧೇಶ । ವೈರಿಕುಲಕುಠಾರ ನೃಪಸೆ । ಯಾರು ನೀನೆಲಾ || ೧ || ರಾಜಕುಲಲಲಾಮ ರಾಜ । ತೇಜ ಶೂರಸೇನನಹೆನು । ಮಾಜದರುಹು ಬಂದ ಕಾರ್ಯ । ದೋಜೆಯೆನ್ನೊಳು || ಆಜಿಯಲ್ಲಿ ಗೆಲಿದು ಕುನ್ನಿ । ರಾಜರುಗಳ ಕರವಗೊಂಡು । ರಾಜಿಸುವೆನು ಕಪ್ಪವಿತ್ತು । ಪೂಜಿಸೆನ್ನನು || ೨ || ಬರಿದೆ ಪರಸೆ ಬಂದಡಂಜಿ । ಕರವನೀವುದುಂಟೆ ನಿನ್ನ। ಪರಿಯಿದೇನು ಬಂದ ಪಥದಿ।

ತೆರಳು ವಿಹಿತವು ‖ ಆರರೆ ನಿನ್ನ ತೆರದೊಳಧಿಕ | ಧರೆಯಧಿಪರು ಹೆಣಗಿ ಕೆಟ್ಟು ದರಿತು ಮನ್ನಿಸದಡೆ ಯಮುನ | ಪುರವ ತೋರ್ಪೆನು ‖ ೩ ‖

‖ ರಾಗ: ಭೈರವಿ ಏಕತಾಳ ‖

ಮೂಢದುರುಳ ನೀಕೇಳು | ಹ್ಯೊ | ದಾಡಿಕೆಡದಿರಧಟಿನೊಳು ‖ ತೋಡುವೆ ನಿನ್ನಯ ಕರುಳ | ಬರ | ಮಾಡಿಕೊ ಪಿತೃಮಾತೃಗಳ ‖ ೧ ‖ ಹುಲುನೃಪ ನೀ ಹೆಮ್ಮೆಯೊಳು | ಯೇನ್ | ತಿಳಿಯದೆ ತವಜಿಹ್ವೆಯೊಳು ‖ ಗಳಹಿದರಿಂದೇನ್ ಫಲವು | ಸರಿ | ಯೊಲಿನಳೆ ಜಯಕಾಮಿನಿಯು ‖ ೨ ‖ ಹಾರದಿರೆಲೊ ಗರುವದೊಳು | ಕಡೆ | ಸಾರೆಲೊ ಧುರದಾದಿಯೊಳು ‖ ಪಾರಿಬರುಹವಿದೆಯೆನುತ | ಬಿಡ | ಲಾದುಶರವ ಝೋಂಪಿಸುತ ‖ ೩ ‖ ತರಿವುತಲೆಂದನು ಮಗಧ | ಎಂ | ತೊರದರು ನೀತಿಯ ಕಳದ | ಆರೆಮರುಳನೆ ನಿಲ್ಲೆನುತಾ | ಗಿರಿ | ಶರವೆಸೆಯಲು ಕೋಪಿಸುತ ‖ ೪ ‖ ಖಂಡಿಸಿಕುಲಿಶದಿ ನೃಪನು | ವರ | ಕುಂಡಲಿ ಶರಬಿಡಲದನು ‖ ಕಂಡು ಗರುಡದಿಂದಳಸಿ | ಜಡೆ | ಮುಂಡೆಗನಲಶರ ವರಸಿ ‖ ೫ ‖ ಶರ ಶರದಿಂದದತರಿದು | ಭೂ | ಪರನ ಧನುವನುರೆ ಮುರಿದು ‖ ಶರವೃಷ್ಟಿಯ ಪ್ರಳಯದೊಳು | ಬಹ | ವರುಷದ ತೆರ ಸುರಿಯಿಸಲು ‖ ೬ ‖

‖ ಭಾಮಿನಿ ‖

ಏನನೆಂಬೆನು ಮಗಧನೆಚ್ಚ ನ | ವೀನವಿಶಿಖದ ಹತಿಯ ತಾಳದೆ | ಕ್ಷೋಣಿಗುರುಳಿದ ನೃಪನ ಬಗೆಯನಿರೀಕ್ಷಿಸುತಲವನ ‖ ಪ್ರಾಣವಳಿಸುವೆನೆನುತ | ಖಡ್ಗವ | ತಾನೆ ಝಳಪಿಸಲೆದ್ದು ವಂದಿಸಿ | ಸಾನುರಾಗದೊಳೆಂವ ಕೈಜೋಡಿಸುತ ಭಯದಿಂದ ‖ ೧ ‖

‖ ರಾಗ: ಛೀಲ್ ಏಕತಾಳ ‖ (ದಾಟಿ — ಅಪರಾಧೀ | ನಾನಲ್ಲವೆ)

ಉಳಿಸಯ್ಯ | ಪ್ರಾಣವ ಜೀಯ ‖ ಪಲ್ಲ ‖ ಉಳಿಸೆನ್ನನು ನೀ | ನಳಿಸದೆ ಪ್ರೇಮದೊ | ಳುಳಿಸಯ್ಯ ‖ ಅನುಪಲ್ಲ ‖ ತಿಳಿಯದೆ ತವಭುಜ | ಬಲವನು ಯುದ್ಧದಿ | ಹಳಚಿದುದೆಣಿಸದೆ | ಸಲಹೆನ್ನನುದಿನ ‖ ೧ ‖ ಹಣ್ಣುಕತ್ತಿಗಳನು | ನಿನ್ನೆಡೆಯಿರಿಸಿದೆ | ತನ್ನಪೊರವ ಗುಣ | ರನ್ನನು ನೀನೆ ‖ ೨ ‖

॥ ರಾಗ: ಆರ್ಯ ॥

ಎನ್ನುವ ಭೂಪಸ। ಮನ್ನಿಸುತಲ್ಲಿಹ। ರನ್ನೆಗ ಶೆರೆಪಿಡಿದಾಕ್ಷಣದಿ॥ ತನ್ನಯ ಮಾರ್ಬಲ। ವನ್ನೊಡಗೂಡುತ। ಪನ್ನತಿಕೆಯೊಳೈದಿದ ಮುಂದೆ ॥ ೧ ॥

॥ ರಾಗ: ಮಾರವಿ ಯೇಕತಾಳ ॥

ಮುಂಗಥೆಯಾಲಿಪು। ದಂಗಜಸನ್ನಿಭ। ಸಂಗರದಲಿ ನಿಷಧ॥ ಅಂಗ ಕಳಿಂಗ ತೆ। ಲುಂಗ ಯವನಕುರು। ಬಂಗಾಳರ ಗೆಲಿದ ॥೧॥ ಧುರದಲಿ ಸಕುಲನ। ಕರುಷಣಪೌಂಡ್ರಕ। ವರಪಾಂಚಾಲರನು॥ ಪುರಜಿತ್ತಾದ್ಯರ ಗರುವವ ಭಂಗಿಸಿ। ಸೆರೆಹಿಡಿದನು ಭರದಿ॥ ೨॥ ಈ ರೀತಿಯೊಳವ। ನೂರೊಂದನ್ವಯ। ಧಾರುಣಿಪರ ಗೆಲಿದು॥ ಕಾರದೊಳಿಡಲಿ। ಪ್ಪತ್ತು ಸಾವಿರ ದೆಂ। ಟ್ನೂರು ನೃಪಾಲರನು॥ ೩॥ ಮತ್ತೆವರಿಸಿದನು ಚಿತ್ರವಿಚಿತ್ರ ಯ। ರುತ್ತಮ ಲಗ್ನದೊಳು॥ ಇತ್ತನು ಕಂಸನಿ। ಗತ್ಯಾನಂದದಿ। ಪುತ್ರಿಯರುಗಳನ್ನೂ ॥೪॥ ಗಿರಿವ್ರಜದಾಗ್ರದಿ। ನರಬಲಿಗೀಯುವ। ನರಸರ ಭೈರವಗೆ॥ ಒರೆಯುವದೇನಾ। ಧರಣಿಪನೆಸಗುವ। ದುರುಳತನಗಳನೂ॥ ೫॥

॥ ವಾರ್ಧಿಕ್ಯ ॥

ಇತ್ತಲೊಂದಿನ ಮಧುರೆಯೊಳು ಶೌರಿ ದೇವಕನ। ಪುತ್ರಿಯಂವೈವಾಹದಿಂದೊಲಿದು ಪತಿಕರಿಸಿ। ಸ್ವಸ್ಥಾನಕ್ಕೈದಲುದ್ಯುಕ್ತನಪ್ಪನ್ನೆಗಂ ಕಂಸನತಿ ಮೋಹದಿಂದ॥ ರತ್ನಮಯ ರಥದೊಳೇರಿಸಿ ವಧೂವರರ ತಾ। ನೊತ್ತಿನೊಳು ಸೂತನೋಲ್ ವಾಘೆಯಂಪಿಡಿದಿರಲಿ। ಕಾಯ್ತು ಬಾನ್ನುಡಿಯೊಂದು ಮರುಳೆದೇವಕಿಯಷ್ಟ ಗರ್ಭತವಶತ್ರುವೆಂದು॥ ೧ ॥

॥ ರಾಗ: ಸೌರಾಷ್ಟ್ರ ತ್ರಿವುಡೆತಾಳ ॥

ಅರರೆಯೇನಾಶ್ಚರ್ಯ ವೈಸಲೆ। ಪರಮವೈವಾಹೋತ್ಸವದೊಳಂ। ಬರನುನುಡಿಯಿದೇನ್ ದುಶ್ಶಕುನಫಲ। ಗಿರಿಜೆವರನೆ॥ ೧॥ ಅನುಜೆಯೆಂಬತಿ ಮೋಹದೊಳಗೀ। ವನಿತೆಯನು ಸಂಹರಿಸದೀರ್ದಡೆ। ತನಗೆಕಂಟಕನಾಗ ದಿರಸಿವ। ಕಣುಗನ್ನೈಸೆ॥ ೨॥ ಕ್ರೋಧವಿಡಿದಿವಳಸುವ ಕಳೆದಡೆ। ಬಾಧಿಸುವದಘವೆನುತ ಯೋಚಿಸು। ತಾದುದಾಗಲಿಯೆಂದು ಧೈರ್ಯವ।

ನಾದರಿಸುತ ॥ ೩ ॥ ಬಿಡದೆ ಹೂಬಿಡಲಾದ ವೃಕ್ಷವ । ಕಡಿಡಪ್ಪುದೆಸುಫಲ ವೆನುತತಿ । ದೃಢದೊಳವ ಕೂರಸಿಯನೊರೆಯಿಂ । ಜಡಿದುನಿಂದ ॥ ೪ ॥ ಕೆಡೆಯೆನುತದೇವಕಿಯ ಮುಂದಲೆ । ಹಿಡಿದುಖಡುಗವ ಕೊರಳಿಗಿಡಲಾ । ಕಡುನಿರೋಧದ ಬಗೆಯುಕಾಣುತ । ನುಡಿದ ಶೌರಿ ॥ ೫ ॥

|| ರಾಗ ಮಧ್ಯಮಾವತಿ ತ್ರಿವುಡೆತಾಳ || (ದಾಟಿ—ವೀರ ದಶರಥ ನೃಪತಿ)

ಭಳಿರೆ ಭೋಜ ಕುಲಾಬ್ಧಿ ಚಂದಿರ । ನಳುಕದಬಲೆಯ ಹತಿಸಲೆಳ ಸಿದ । ಒಳವಿದೇನಸಿಧಾರೆ ತಂಗಿಗೆ । ಬಳುವಳಿಯೊ ಬಹುಮಾನವೊ । ಕಂಸ ರಾಯ ॥ ೧ ॥ ಪುಟ್ಟಿದಾತಗೆ ಮರಣವೇದಿಗು । ಶಟ್ಟದಿರ್ಪುದೆ [illegible] ಕಷ್ಟಗ। ಳೊಟ್ಟು ತಪ್ಪಿಸಲಾರಿಗಳವೈ । ಸೃಷ್ಟಿಯೇ ಸ್ಥಿರವಲ್ಲವೈ । ಕಂಸರಾಯ ॥ ೨ ॥ ಆದಡರುಹುವೆ ಭಾವ ನಿನ್ನ ಸ । ಹೋದರಿಯು ಪಡದಣುಗರನು ಸಂ।ಮೋದ ದಿಂದರ್ಪಿಸುವೆ ಹರಣವ । ಛೇದಿಸದಿರೀಸಮಯದಿ ॥ ಕಂಸರಾಯ॥ ೩ ॥

|| ಭಾಮಿನಿ ||

ಎಂದ ದಾಲಿಸಿ ಕಂಸ—ನವರನು । ಬಂಧಿಸುತ ಕಾರಾಗೃಹದೊಳತಿ । ಮಂದಮತಿಗಳ ಕ್ಯಾಪಿಲಿಟ್ಟನು ಹರಣದಾಸೆಯೊಳು ॥ ಮುಂದೆ ಕೇಳ್ಳೈ ದೇವ ಕಿಗೆ ಸಾ । ನಂದದಿಂ ಷಡ್ಪುತ್ರರುದಿಸಲು । ಕೊಂದನಾಪುರದೊಡೆಯು ನಿರ್ದಯದಿಂದ ಪಗೆತನದಿ ॥ ೧ ॥

|| ವಾರ್ಧಿಕ್ಯ ||

ಧರಣಿಪತಿ ಕೇಳ್ ಕಂಸಮಗಧರುಪಟಳದಿ ಮುರ । ಹರಗೆ ಮೊರೆಯಿಡ ಲನಿಮಿಷರ್ ಮಾಯೆಯುಂ ಕಳುಹೆ । ತರುಣಿ ದೇವಕಿ ಯೇಳನೆಯ ಗರ್ಭಮಂ ರೋಹಿಣಿಯ ಜಠರದೊಳಗಿರಿಸುತ ॥ ವರನಂದನರಸಿಯುದರ ದೊಳುದಿಸ–ಲಾದಿನದಿ । ಹರಿಮಥುರೆಯೊಳು ಜನಿಸಲಾ ತರಳನಂ ಶೌರಿ । ಯರಿತು ಗೋಕುಲಕ್ಕೊಯ್ದು ಮಾಯೆಯುಂ ತಂದು ಗುಪಿತದೊಳಿಟ್ಟ ಸತಿ ಯೆಡೆಯೊಳು ॥ ೧ ॥

|| ಕಂದಪದ್ಯ ||

ಮೆಲ್ಲನೆ ಶಿಶುವಳುತಿರೆ ಖಳ । ರೆಲ್ಲರಿಗೆಚ್ಚರವಾಗೆ ತಿಳಿದು ದೊರೆಗರು ಹಲ್ ॥ ನಿಲ್ಲದೆನಡೆತರಲಣ್ಣಗೆ । ಸೊಲ್ಲಿಸಿದಳು ಯುಗಳಪದಕೆ ವಂದಿಸಿ ಮುದದಿಂ ॥ ೧ ॥

|| ರಾಗ ಮೋಹನ ಅಷ್ಟತಾಳ || (ದಾಟಿ—ಯಂರಮ್ಮ ಬಂದವಳು) ಸಂವಾದ

ಅಣ್ಣ ಕೇಳೆನ್ನ ಮಾತ । ನೀನಲ್ಲದಾ । ರೆನ್ನ ರಕ್ಷಿಸುವ ನಾಥ ॥ ನಿನ್ನ ಪುಣ್ಯದೊಳೀಗ । ಹೆಣ್ಣು ಪುಟ್ಟಿತು ನೋಡು । ಮಣ್ಣಗೂಡಿಸ ಬೇಡವೈ ॥ ೧ ॥ ತಂಗಿ ನೀನೆಂಬುದೇನು । ಪೆಣ್ಮಣಿಯೆ ನಿ । ನ್ನಂಗದೊಳೊಗೆದಡೇನು ॥ ಹಿಂಗದೆ ಕಂಸನ । ಭಂಗಿಪುದಲ್ಲವೆ । ಅಂಗಜ ಗಜಸಮಾನೆ ॥ ೨ ॥ ಹಿರಿಯನೆ ತವ ಜೀವವ । ಕಳೆಯಲಿಂಥ । ತರಳೆಗಪ್ಪುದೆ ಪ್ರೇಮವಾ ॥ ಇರಿಸಿ ರಕ್ಷಿಸು ವೃಥ । ತರಿದೆ ಮಕ್ಕಳನಾರ । ಕರುಣವಿಲ್ಲವೆ ನಿನಗೆ ॥ ೩ ॥ ಬಿಡು ಬಿಡೀ ಮಾತ ನೀನು । ಸಂಹರಿಸದೆ । ಬಿಡಲಾರೆ ಹಸುಳೆಯನು । ನಡೆಯುತ್ತ ಬಾನಿನ । ನುಡಿಯು ಸುಳ್ಳಾಗದು । ಕೊಡು ಮುದ್ದು ಮಗಳ ತಂಗಿ ॥ ೪ ॥ ಛಲ ಮಾಡದಿರು ದಮ್ಮಯ್ಯಾ । ಈ ಪೆಣ್ಣಾದ । ರುಳಿಯುಲಿ ಹಿರಿಯಣ್ಣಯ್ಯ ॥ ಅಳುಕದೆ ತನ್ನಯ । ತಲೆಯನೀವೆನು ವ್ಯರ್ಥ । ಗಳಿಸದಿರಪಕೀರ್ತಿಯ ॥ ೫ ॥

॥ ಭಾಮಿನಿ ॥

ಧಿಟ್ಟಖಳನದ ಕೇಳಿ ರೋಷದೊ । ಳಟ್ಟಹಾಸವಗೈದು ಕರದೊಳು । ಪುಟ್ಟಹಸುಳೆಯ ಪಿಡಿಯಲಾತನ ತಲೆಯ ತಾಮೆಟ್ಟಿ ॥ ಸೃಷ್ಟಿಯೊಳು ನಿನಗೊಬ್ಬ ವೈರಿಯು । ಹುಟ್ಟಿ ಬೆಳೆಯುವನೆಂದು ಗಗನಕೆ । ಥಟ್ಟನೈದಲು ಬಳಿಕ ಖಳಭಟರುಗಳ ಕರದೆಂದ ॥ ೧ ॥

॥ ರಾಗ: ತುಜಾವಂತು ಮಟ್ಟೆತಾಳ ॥ (ದಾಟಿ—ಕೇಳಿರೈ ಸಹೋದರಾದ್ಯರೂ)

ಕೇಳಿರೈ ಭಟಾಗ್ರಗಣ್ಯರು ॥ ಪಲ್ಲ ॥ ಪೇಳಲೇನು ಧರೆಯೊಳೆನಗೆ । ಕಾಲನಾಗಿ ಮೆರವ ಸೋರ್ವ । ಬಾಲನೆನುತ ಭಗಿನಿಗೊಗೆದ । ಮೂಳೆ ಯೊರೆದು ಚಿಗಿದಳೈಸೆ ॥ ಕೇಳಿರೈ ॥ ೧ ॥ ಬರಿದೆಯನುಜೆ ಯಣುಗರಿರಿದೆ । ಧರೆಯೊಳಧಿಕ ಪಾಪಿಯಾದೆ । ಪರಮ ಕುಲಕುಠಾರನಾದೆ । ದುರುಳನಾದೆ ನಗಕಿಯಾದೆ ॥ ಕೇಳಿರೈ ॥ ಚಕಿತನಾಗಿ ಮಾಳ್ಪುದೇನು । ವಿಕಟತನದಿ ಧರೆಯೊಳೆಸೆವ । ಸಕಲ ಶಿಶುಗಳಸುವ ಹೀರಿ । ಯುಕುತಿಯಿಂದ ಬನ್ನಿರೆಲ್ಲ ॥ ಕೇಳಿರೈ ॥ ೩ ॥ ಎಂದು ನೇಮವಿತ್ತಡನಕ । ಪಂವತನದಿ ಶಕಟವತ್ಸ । ಗಂಧವಾಹಧೇನುಕಾದ್ಯ । ರೊಂದುಗೂಡಿ ಪೊರಟರೆರಗಿ ॥ ಕೇಳಿರೈ ॥ ೪ ॥

॥ ರಾಗ: ಕಾಂಬೋಧಿ ಝಂಪೆತಾಳ ॥

ಇತ್ತಗೋಕುಲದೆಡೆಯೊ । ಳತ್ಯಧಿಕ ಸಂತೋಷ । ವೆತ್ತು ರೋಹಿಣಿ ಯುಶೋದೆಯರು ॥ ಪೆತ್ತಪುತ್ರರ ಕಂಡು । ವಿಸ್ತರಿಸಿದನು ನಂದ । ನುತ್ಸಾಹ ದಿಂ ಗಾರ್ಗ್ಯರೊಡನೆ ॥ ೧ ॥ ಅವಧರಿಸು ಜೀಯ ನಾ । ನವಿರುಡೆಯನುಟ್ಟಿ ವಾ । ಧವಸನುಗ್ರಹದಿಂದಲೆನ್ನ ॥ ಯುವತಿಯರ ಬಸಿರೊಳುದು । ಭವಿ ಸಿದುದು ಶಿಶುವೆರಡು । ವಿವರಿಸಲ್ಕರಿದು ಸೊಂಪುಗಳ ॥ ೨ ॥ ಏನನರುಹುವೆ ಮುನಿಪ । ಸೂನುಗಳ ಗಾಥೆಯಂ । ಸೂನಶರನಂ ನಾಚಿಸುವದು ॥ ನೀನೆಲ್ಲವರಿತ ಸು । ಜ್ಞಾನಿ ಯುತ್ತಮದಾಭಿ । ಧಾನವನ್ನಿಟ್ಟರುಹು ಫಲವ ॥ ೩ ॥ ಲಾಲಿಸೈ ಗೋಪ ತವ । ಬಾಲರಿರವರುಹುವಡೆ । ನೀಲ ಕಂಠನಿಗರಿದು ಜಗದ ॥ ಖೂಳರಳಿಸುವೊಡೊಗೆದ । ಶೀಲರೀ ಮೂಲೋಕ ಪಾಲರಿವರೈಸೆ ಧಣುಧಣುರೆ ॥ ೪ ॥ ನಂದನೀಬಾಲರಿಂ । ಗಂದದಲಿ ಪೆಸ ರಿಡುವ । ದಿಂದು ನಾ ನಾಮಕರಣವನು ॥ ಚಂದದಿಂ ಗೈಸೆ ನೃಪ । ನಿಂದಿಸುವ ದೇವಕಿಯ । ಕಂದರೆಂದರಿವುದವನಿಯೊಳು ॥ ೫ ॥ ಕುವರರಿಂ ಗಾವ ನಾ । ಮವನ್ನಿಡುನದೆಂರಿದಯೆ । ಭುವಿಯೊಳಿಹ ಶಿಶುಗಳಂತಲ್ಲ ॥ ಕವಡಿನಿಂದೇನು ಫಲ । ವವಧರಿಸು ಕಂಸನಿಂ । ದವಘಟಿಪುದೇನೆಂದ ಗೋಪ ॥ ೬ ॥ ಎನೆ ಕೇಳಿ ಗಾರ್ಗ್ಯನಾ । ತನನುಡಿಗೆ ಸಮ್ಮತಿಸ । ಲನಕ ನಂದನು ಗುಪಿತಸ್ಥಳಕೆ ॥ ಮುನಿಪನನು ಕರದೊಯ್ಯು । ಲನುನಯದೊ ಳೆಸಗಿದನು । ಗುಣನಾಮಕರಣ ಕ್ರಿಯೆಯನ್ನು ॥ ೭ ॥ ಪೃಥ್ವಿಯಲಿ ದೇವಕಿಯ । ಪುತ್ರರಿವರೆಂದರಿವ । ರುತ್ತಮರು ರೋಹಿಣಿಯ ಸುತಗೆ ॥ ಭಕ್ತಿಯಲಿ ರಾಮನೆಂ । ದಾತ್ಮಜನ ಕೃಷ್ಣನೆಂ । ದರ್ಥಿಯಲಿ ಪೆಸರಿಟ್ಟು ಸಲಹು ॥ ೮ ॥ ಧರೆಯೊಳತಿ ಖ್ಯಾತಿಯಿಂ । ಮೆರವರಿವರೆಂದರುಹಿ । ಗೊರವ ನೈದಲು ಬಳಿಕ ಗೋಪ ॥ ಹರುಷದೊಳು ತರಳರಿಂ । ಗುರೆ ವಿದ್ಯ ಬುದ್ಧಿಯನು ಅರುಹಿ ರಕ್ಷಿಸುತಿರ್ದನನಘ ॥ ೯ ॥

॥ ವಾರ್ಧಿಕ್ಯ ॥

ವಿಸ್ತರಿಪೆ ಮುಂಗಥೆಯ ಸ್ವಸ್ತಮಾನಸನಾಗಿ । ಪೃಥ್ವಿಪತಿ ಕೇಳಸುರ ಶತ್ರುಪತಿಗೋಪಳರ । ಮೊತ್ತದೊಡುನಾಡತಿರುವತ್ತ ಧೇನುಕ ತೃಣಾವರ್ತ ಪೂತನಿ ಪ್ರಲಂಬ ॥ ಮತ್ತೆ ಬಕ ಶಕಟನಘ ವತ್ಸ ವಾತಾರಿಷ್ಟ । ರತ್ಯಧಿಕ

ಮಾಯೆಯಿಂ ಸುತ್ತುತ್ತೈತರಲರಿದು । ಮಿತ್ರಸುತನೂರಿಗಾ ದೈತ್ಯರನ್ನಟ್ಟೀರ್ದನುತ್ಸವದಿ ಶೈಶವದೊಳು ॥ ೧ ॥

|| ರಾಗ ಭೈರವಿ ಝಂಪೆತಾಳ ||

ಹರಿಯಿಂತು ಗೋಕುಲದೊ । ಳಿರುತಿರಲು ಕಂಸನೃಪ । ನೊರೆದ ತನ್ಮನದೊಳಗೆ । ಭರಿತ ಚಿಂತೆಯೊಳು ॥ ೧ ॥ ಅನುಜೆಯ್ನಾಗಿಯು ಪೇಳ್ದ ಘನವಚನದನುವು ದೃಢ । ವೆನಿಸಲೆಂದಟ್ಟಿದೆನು । ದನುಜರನು ಜಗಕೆ ॥ ೨ ॥ ತೆರಳಿಪೋದಧಟರೀ । ವರೆಗೆ ಪುನರಪಿ ಯೆನ್ನ । ಸರಿಸಕೈತಂದುದಿಲ್ಲರರೆ ಮಹದೇವ ॥ ೩ ॥ ಕೆಡಹಿದರೊ ಹಗೆಯ ಮೇ । ಣಡಗಿದರೊ ತಾವಲ್ಲಿ । ಮಡಿದರೊ ಪೋದೆಡೆಯೊ । ಳೆಡರಡಸಿತೇನೊ ॥ ೪ ॥ ಮರುಗಲೇನಕ್ಕು ವಿಧಿ । ಬರಹದಂತಪ್ಪುದದ । ನೊರಸಲಾರಿಗೆ ಸಾಧ್ಯ । ಧರಣಿ ವಲಯದೊಳು ॥ ೫ ॥ ದುಃಖಿಸುತಲಿರಲಾನು । ದಿಕ್ಪಾಲರತಿನಗರಿ । ಪುಕ್ಕನಿಪನೆಂದೆನುತ । ರಕ್ಕಸೇಶ್ವರನು ॥ ೬ ॥ ಕಳವಳಿಸುತಿರಲಾಗ । ನಳಿನಜೋದ್ಭವನು ಬರ । ಲಳುಕದಿತ್ತನು ಪೀಠ । ನಲವಿನಿಂದೆರಗಿ ॥ ೭ ॥ ಮುಗುಳಿದ್ದು ನುಡಿದ ಮೂ । ಜಗದೊಳಪ ಪರಿಯರಿನ । ವಿಗಡ ನೀನಿಲ್ಲಿ ಬಹ । ಬಗೆಯೇನು ಮುನಿಪ ॥ ೮ ॥ ಆರುಹೆನಗೆ ಜೀಯ ನೀ । ತೆರಳಲಿಪ್ಪೆಡೆಯೆಸಲು । ಪರಮ ತಾಪಸಸವನ । ಹರಸುತಿಂತೆಂದಾ ॥ ೯ ॥

|| ರಾಗ ಸಾಂಗತ್ಯ ರೂಪಕತಾಳ ||

ಏನಯ್ಯ ಕಂಸ ನಿ । ನ್ನಾನನ ಬಳಲಿದು । ದೇನು ಕಾರಣ ವರುಹೆನಗೆ ॥ ಸಾನುರಾಗದಿ ಹೀಗೆ । ಕಾಣಲೈತಂದೆ ನ । ವೀನ ವಾರ್ತೆಗಳಿಲ್ಲ ಜಗದಿ ॥ ೧ ॥ ಎನಲೆಂದ ಮೂಗಾಲ । ವಸ್ತು ಬಲ್ಲ ಮುನಿ ನಿನ । ಗೆನಿತರುಹುವ ದಾದಡಾನು ॥ ವಿನಯದಿ ಪೇಳುವೆ । ನನುಜೆಗೋರ್ವನಾಗಿಯು । ಜನಿಸಿತೆಂಟನೆ ಬಸುರಿನೊಳು ॥ ೨ ॥ ತರಿವೆನೆಂದೆಣಿಸಲು । ಶಿರವನ್ನೊದೆದು ಪೋದ । ಳರಿಯೋರ್ವನಿಹ ನಿನಗೆನುತ ॥ ಅರಿವರಟ್ಟಿದೆ ದುರು । ಳರನಿಂದು ವರೆಗಾರು । ಬರಲಿಲ್ಲವೆಂದು ಚಿಂತಿಪೆನು ॥ ೩ ॥

|| ರಾಗ ಮುಖಾರಿ ಏಕತಾಳ || (ದಾಟಿ — ಓಹೋ ನೀನೇತಕೆ ಚಿಂತಿಪೆ ಮನದಿ)

ಓಹೋ ನೀ ಕಳವಳಿಸದಿರೆಲೊ ಕಂಸ । ರಿಪುತಮ ಹಂಸ ॥ ಪಲ್ಲ ॥

ಮೊದಲು ನೀನಟ್ಟಿದ ಭಟರುಗಳಸುವ । ಕಳದತಿ ಗೋಕುಲವ । ಮುದದಿ

ಪಾಲಿಸೆ ಗೋಕುಲದಿ ಬೆಳೆವ ‖ ಉದಿಸುತ ದೇವಕಿ । ಯುದರದಿ ನಂದನ । ಸದನವೊಳೆಸೆವಸು । ಅಧಿಕ ಮಹಾತ್ಮ ‖ ಓಹೋ ‖ ೧ ‖ ಸುರರು– ದೂರಿಡೆ ಹರಿ ದೇವಕಿಗುದಿಸೆ । ಗೋಕುಲಕೆ ಶೌರಿ । ಭರದೊಳೈದಿತ್ತನು ಮಾಯೆಯನರಿಸೆ ‖ ಅರಿಯದೆ ಶಿಶುವನು । ತರಿಯಲಿ ಕೆಳಸಿದೆ । ದುರುಳರ ನಟ್ಟಿದೆ । ತರಳನ ಬಾಯ್ಗೆ ‖ ಓಹೋ ‖ ೨ ‖ ಮುರುಳೆ–ನೀನರಿಯೆಯ ಪೂರ್ವಾಪರವ । ತವ ಮಾತೆಯು ದ್ರವಿಳ । ಸೆರೆಭೋ–ಗಿಸಿದರಿಂದುದಿಸಿದೆ ಚೆಲುವ ‖ ವರ ಯಮುನೇಮಿಯೆಂಬರಸೈ ಪೂರ್ವದಿ । ಸುರರೀ ಯಾದವ । ಪರಿವಾರಗಳೈ ‖ ೩ ‖

‖ ಭಾಮಿನಿ ‖

ನಾರದನ ನುಡಿಯಾಲಿಸುತ ನೃಪ । ನಾರುಭಟಿಯುಂ ಗೈದು ತಕ್ಷಣ । ಚೋರ ವಸುದೇವನ ಶಿರವ ತರಿದೊಟ್ಟದಿರೆನೆನುತ ‖ ಭೂರಿ ರೋಷದೊಳವನ ಕೊರಳಿಗೆ । ಕೂರಸಿಯ ಮೋಹುತಿರೆ ಕಂಡು ಕೃ । ಪಾರಸದೊಳಡ್ಡವಿಸು ತೆಂದನು ಸಾರೆನುತ ಮುನಿಯು ‖ ೧ ‖

‖ ರಾಗ: ಮೋಹನ ಅಷ್ಟತಾಳ ‖ (ದಾಟಿ–ಯಾರಯ್ಯ ಮನುಜೇಶ ತನ್ನ)

ಏನಯ್ಯ ತಿಳಿದೆಲ್ಲವನ್ನ । ವ್ಯರ್ಥ । ತಾನೆಸಗುವೆ ದುಷ್ಕೃತಿಯನು । ನೀನಹಿತನ ಸಂಹರಿಸದೆ । ಮಹ । ಜ್ಞಾನದೊಳಿವನ ಕೊಲ್ಲುವುದೆ ‖ ೧ ‖ ಹಗೆಯುನಿಲ್ಲಿಗೆ ಕರತರಿಸಿ । ಒಳ್ಳೆ । ದಗೆಯಿಂದ ಕೊಲುವುದು ಸಹಸಿ ‖ ಮಿಗೆ ಬಿಲ್ಲ ಹಬ್ಬವ ಮಾಡಿ । ಮೆರೆ । ಜಗದಿ ಪ್ರಖ್ಯಾತಿಯಿಂ ಖೋಡಿ ‖ ೨ ‖ ಎಂದು ನಾರದನೈದೆ ನೃಪನು । ಒಳಿ । ಕೊಂದೆಡೆಯಿಟ್ಟು ಧನುವನು ‖ ಚಂದದೊಳರುಹಿ ಮಲ್ಲರಿಗೆ । ಕರ । ದೆಂದನಕ್ರೂರ ಯಾದವಗೆ ‖ ೩ ‖

‖ ರಾಗ: ಶಂಕರಾಭರಣ ತ್ರಿವುಡೆತಾಳ ‖ (ದಾಟಿ–ಸುತಗೆ ಪಟ್ಟವ ಕಟ್ಟಬೇಕೆಂಬ)

ಇತ್ತ ಬಾರಕ್ರೂರ ತವಸತಿ । ಪುತ್ರರಿಂಗೆ ಪದುಳವೇ । ಬಿತ್ತರಿಪೆ ಸೊಂ ದುಕ್ತಿಯನು ನೀ । ಚಿತ್ತವಿಪುದು ‖ ೧ ‖ ಪರಮಬಂಧುವೆ ಬಿಲ್ಲಹಬ್ಬವ । ವಿರಚಿಸುವೆನೂ ಇನ್ನು ಮೇಲ್ । ಬರುವ ಚಾತುರ್ದಶಿಯ ದಿವಸದಿ । ಕರುಣಸಾಂದ್ರಾ ‖ ೨ ‖ ನಂದಗೋಕುಲಕೈದಿ ನಂದನ । ಕಂದರನ್ನೂ ಕರದುತಾ । ರೆಂದು ನಿನ್ನೊಳೀಲಾಪ್ತರಾರೆಲೆ । ಗಾಂಧಿನಿಜನೇ ‖ ೩ ‖ ಮರೆಯ

ಬೇಡೀಮಾತ ನಿನ್ನನು । ಮರೆವನಲ್ಲಾ ಸರ್ವದಾ । ಭರಣವಿದಕೋ ಧರಿಸು ರಥವಿಕೊ ತೆರಳು ಭರದೀ ॥ ೪ ॥

॥ ಭಾಮಿನಿ ॥

ಎನಲೊರೆದನಕ್ರೂರ ನಂದನ । ತನಯರಿಲ್ಲಿಗೆ ಬಂದುದಾದರೆ । ಹನನಮಾಳ್ಪರು ತವ ಮಹಾರ್ಬಲವನ್ನು ಪಗೆತನದಿ ॥ ಕ್ಷಣದಿ ಕರತಹೆನವರ ಮ್ಮೇಣ್ ನೀ । ಮನಕೆ ಕಂಡುದನೆಸಗು ಜಾಗ್ರತೆ । ಎನುತ ನೇಮವಗೊಂಡು ತನ್ನಾಲಯಕೆ ತೆರಳಿದನು ॥ ೧ ॥

॥ ರಾಗ: ಕೇತಾರಗೌಳ ಅಷ್ಟತಾಳ ॥

ಒರವೆ ಲಾಲಿಸು ನೃಪ । ಹರಿಸ್ಮರಣೆಯೊಳಂದು । ಇರುಳಿನೊಳೊರಗದಿದ್ದು ॥ ಸುರಮುನಿಗಳಿಗ ಗೋ । ಚರನಪ್ಪವನಕಾಂಬಾ । ತುರದಿಕಂಡನು ವ್ಯೋಮವ ॥ ೧ ॥ ಹರಿಯು ನೀಕ್ಷಿಪಯೋಗ್ಯ । ಏರೆ ತಪ್ಪಿಪನೊ ವಿಧಿ । ತರಣಿಯುದಿಸದಿರ್ಪನೊ ॥ ದುರುಳಸೇವಕನೆಂದು । ಜರೆವನಚ್ಯುತನೆಂದು । ಮರುಗಿರೆ ಬೆಳಗಾದುದು ॥ ೨ ॥ ಭರದಿ ಭವಾಬ್ಧಿಯು । ತ್ತರಿಸಿ ನಾ ಕೈವಲ್ಯ । ಸಿರಿಯನೊಲಿಸಿ ಶ್ರೀಶನ ॥ ಚರಣದೊಳ್ ಲೀನನಾಗಿರುವೆನಾತನೊಳೆಂದು । ಅರಿತು ರಥವನೇರ್ದನು ॥ ೩ ॥ ಒಂದಾಗಿ ಮೂರೆರ । ಡ್ಮೆದಾರೇಳೆಂಟೊಂಭ । ತ್ತೊಂದಿಸಿ ಹತ್ತರಿಂದೆ ॥ ಬಿಂದು ಮಾತ್ರದೊಳೆಸೆ । ದಂದು ನಾಲ್ಕಾರು ರೂ । ಪಿಂದೆಸದನೆ ಸಲಹು ॥ ೪ ॥ ಪರಮ ತತ್ವಾತೀತ । ನುರೆ ರಕ್ಷಿಸೆನ್ನನೆಂ । ಥರವಿಂದಾಕ್ಷನ ಮೂರ್ತಿಯ ॥ ಇರಿಸಿಹೃತ್ಕಮಲದಿ । ವರಜಿಹ್ವೆಯೊಳು ಹರಿ । ಸ್ಮರಣೆಯನೆಸಗುತ್ತಲಿ ॥ ೫ ॥ ಬರೆ ವೃಂದಾವನದಿ ಶ್ರೀ । ಯೆರೆಯನ ಹೆಜ್ಜೆಯ ಕುರುಹನೀಕ್ಷಿಸಿ ತಿಳಿದ ॥ ವರವಜ್ರಾಂಕುಶ ಚಕ್ರ ಪದ್ಮರೇಖೆಯೊಳೊಪ್ಪಿ । ಮೆರವ ಚರಣವೆನುತ ॥ ೬ ॥ ಬಲಿಯನ್ನೊದೆದ ಗಂಗೆ । ಯುದಿಸಿದ ಕಾಳಿಂಗ । ತಲೆಯನೊತ್ತಿದ ಹಂಸನ ॥ ಅಳಿಸುವ ದುಂದುಭಿಯೆತ್ತಿದ ಪಾದವೆಂ । ದೊಲಿದುರುಳಿದ ರಜದಿ ॥ ೭ ॥ ಎದ್ದು ರಥವನೇರಿ । ಶುದ್ಧಮಾನಸನಾಗಿ । ಶ್ರದ್ಧೆಯಿಂ ಗೋಕುಲದ ॥ ಮುಗ್ಧರೊಳಾಡಿ ವಿ । ದಗ್ಧರಿಂಗೆರಗುತ್ತ । ಪದ್ಮಾಕ ನೆಡೆಗೈದಿದ ॥ ೮ ॥

॥ ರಾಗೆ ಕಾಪಿ ಅಷ್ಟತಾಳ ॥ (ಧಾಟಿ–ಏನನುಸುರಲಿ ಮಾನುನಿಯ ಚೆಲುವಾನನದ ಪರಿಯು)

ಕಂಡನುರೆ ಬ್ರಹ್ಮಾಂಡನಾಯಕನ। ಭಾಗವತಕುಲಮಣಿ । ಗಂಡುಗಲಿಯುದ್ದಂಡ ವಿಕ್ರಮನ ॥ ಪಲ್ಲ॥ ಕಂಡು ಭಕ್ತರ । ಠಂಡದಿಚ್ಛೆಯ। ಕೊಂಡುಬರುವ ತ್ರಿ। ಪುಂಡ್ರಧಾರಿಯ। ಭಂಡದೈತ್ಯರ। ಹಿಂಡನಳಿಸುವ। ಚಂಡಬಲ ಮಾ । ರ್ತಾಂಡತೇಜನ ॥ ಕಂಡ॥ ಅನುಪಲ್ಲ॥ ಮುಂದೆ ಬಲಕುಳಿ । ತಂದವೆಡಬಲ । ತಂದೆತಾಯಿಯರು । ಶೋಭಿಪ । ಚಂದ ಸಭೆಯೊಳ । ಗಿಂದಿರೆಯ ಮುದ। ಪಿಂದೆ ಗೋಪಿಯರು ॥ ನಿಂದಾ । ಸಂದಮಣಿರಥ। ದಿಂದ ನಾಲ್ದೆಸೆ ಸಂದಿನಲಿ ಸಖರೂ ॥ ನೆರದಿಹ। ವೃಂದ ನಿಕಟದೊ। ಳೊಂದುಗೂಡುತ । ಬಂದ ಜತೆಯವರು। ತೀಡ್ವ ಸು। ಗಂಧ ಪ್ರೇಮದಿ ಬಂಧು ಬಾಂಧವ। ರಂದು ಹರಸುವ। ಮುಂದ ಘೋಷ ಮು। ನೀಂದ್ರರರ್ಚನೆ। ವಂದಿ ಮಾಗಧ। ಸಂದಣಿಯ ರವ। ದಿಂದ ಮೆರವುದ॥ ಕಂಡುನುರೆ ॥ ೧ ॥ ತರಣಿಕಿರಣವ। ಜರೆವ ಮುಕುಟದ। ವರ ರತುನಮಣಿಯ। ನ್ಮೈಯ್ಯೋಳ್ । ನಿರತ ಧರಿಸುವ। ಪರಮ ಪೀತಾಂ। ಬರದ ಜರಿನೆರಿಯ। ಬಲು ಬ। ಜ್ಜರದ ಕರ್ಣಾಭರಣದಂಪವ। ಚರಣದಂಗುಲಿಯ। ಸ್ವಾಮಿಯ। ಕೊರಳಕೌಸ್ತುಭ। ಪರಿಯ ಕನಕದಿ। ಮೆರೆವ ಕೈ ಬಳೆಯ ॥ ಸೊಂಟದೊಳಿರುವ ನೇವಳ ಸರಪಳಿಯ ಕಂ। ಡರಿತು ಹರಿಯ। ಲ್ಲಿರಿಸಿ ಚಿತ್ತವ। ನಿರಪೆ ಖಳಕುಲ। ಶರಧಿ ವಡಬನೆ। ಕರುಣ ನಿಧಿಯೆಂ। ದೆರಗಿ ನುತಿಸಿದ ॥ ೨ ॥

॥ ಗದ್ಯ ॥

ಶ್ರೀಮದಸಂಖ್ಯಾತ ಭೂಮಂಡಲಾಧಿನಾಯಕಂ । ಶ್ರೀ ವಧುಮುಖಾರವಿಂದಾದಿತ್ಯನನಂಗಸನ್ನಿಭಂ। ವರ ರಾಮ ರಾಮನುಜಂ। ಗುಣಧಾಮ ಸೋಮ ಮಿತ್ರಂ। ಖರವೈರಿಯಹೋರಣೀಯ ಮಹತೋ ಮಹೀಯನುಂ। ಹರಿ ಚರಾಚರದ ಚೈತನ್ಯಾತ್ಮ ಸಚ್ಚಿತ್ ಪ್ರಭಂ। ದಶರೂಪ ಕಪಟನಾಟಕ ಸೂತ್ರಧಾರಂ। ತಮಧೇನುಕ ಮಧು ಕೈಟಭ ವೃಕ ರಾವಣ ಕುಂಭಕರ್ಣಾದ್ಯಸುರವಂಶಾಂತಕಂ । ನತ ಪಾಲಕಂ। ಧ್ರುವ ನಾರದ ಗಜ ಪ್ರಹ್ಲಾದ ಅಂಬರೀಷ ಅಜಾಮಿಳಾದಿ ಭಕ್ತೋದ್ಧಾರಕಂ। ಗುರು ನಿರಂಜನ ಶುದ್ಧ ಪರಮಹಂಸ ಪರತರ ಬ್ರಹ್ಮ ವಿಶ್ವಾಕಾರಂ। ವೈಕುಂಠವಾಸನನಂತ

ಶಯನ ಸ್ಥಿರ ಪದ್ಮಾಸನಮುಘ ಕುಲ ಹರಣಂ । ಬಕ ಕೇಶಿ ವೃಷಭ ಶಕಟ ಪೂತನಿ ವಾತಾದಿ ಖಳಸಂಹಾರಂ । ನಿಖಿಳ ಭೂತಾಧಿನಾಥಂ । ಕರುಣಾಕರ ನನುರಾಗಾಂಬುಧಿ ತರುಣಾರುಣಸಂಕಾಶಂ । ಸೌಂದರ್ಯ ನವರತ್ನಾಂಕಿತ ಮಕುಟ ಮೌಕ್ತಿಕ ಪದಕ ಮಾಣಿಕ್ಯ ಕುಂಡಲ ಕೇಯೂರ ಹಾರ ವನ ಮಾಲಾ ಸುಶೋಭಿತಂ । ಪಂಕೇಜನಾಭಂ । ಗಿರಿಶಸಖನಭವ ನಿರ್ಗುಣ ಸ್ವೈರನಾನಂಶ । ನಿತ್ಯಾತ್ಮ ರಾಮ । ಮೋಹನ ರಾಮ । ಸಾನಂದ ರಾಮ । ಕಲ್ಯಾಣ ರಾಮ । ಕೌಸ್ತುಭ ರಾಮ ॥ ಜಯ ಜಯ ಶ್ರೀ ರಾಮ । ಕೃಷ್ಣ ಜಯಕೃಷ್ಣ ಮೂರ್ತಿರ್ ಭಜೇಹಂ ಭಜೇಹಂ ಭಜಾಮಿ ॥ ೧ ॥

॥ ರಾಗ ಕಲ್ಯಾಣಿ ಝಂಪೆತಾಳ ॥ (ಧಾಟಿ—ಮತಿ ಮರೆಯದಿರು ರಣದಿ)

ಯಾರಯ್ಯ ಭಾಗವತ ಜನ ಚಿಂತಾಮಣಿಯೇ। ಘೋರ ನೀಪರಿಯೇಕೆ ನುತಿಪೆ ಗುಣಮಣಿಯೆ ॥ ಪಲ್ಲ ॥ ಹರುಷವೆ ತವ ದೊರೆಗೆ। ಮೆರವ ಪುರಜನ ಗಳಿಗೆ । ವರ ಶೌರಿ ದೇವಕಿಗೆ । ಭರಿತಸುಖವೇನ್ಸೈ ॥ ಇರುವರೆಂತೆಲೊ ನಿನ್ನ । ತರುಣಿ ಮಕ್ಕಳು ತನ್ನ । ಬರಿದೆ ಪೊಗಳುವೆ ಯಾಕೆ । ಅರುಹು ಧಿಟವನ್ನು ॥ ೧ ॥ ತವಮೊಗದ ಸಿರಿಗೇನು । ಭವಣಿಯಡಸಿತು ನೀನು । ಕನ್ಯಮಾತನು ಬಿಟ್ಟು । ವಿವರಿಪುದು ಗುಟ್ಟು ॥ ಬವರವಡಸಿತೊ ಪುರದಿ । ಕವಲು ಮನ ಪಂಗಡದಿ । ಸವನಿಸಿತೊ ಕಂಸ ಮನು । ಹವಣ ಕಟ್ಟಿದನೊ ॥ ೨ ॥

॥ ರಾಗ ಕಾಂಬೋದಿ, ತ್ರಿವುಡೆ ತಾಳ ॥ ಧಾಟಿ — ಪಾಹಿ ಶ್ರೀ ಪದ್ಮನಾಭಾ।

ಪಾಹಿ ಲಕ್ಷ್ಮೀರಮಣ । ನಾರಾಯಣ । ಪಾಹಿ ನಂದನ ತರುಣ ॥ ಪಲ್ಲ ॥ ಪಾಹಿ ನರಹರಿ । ಹರಿಜ ಹರಿಧರ। ಪಾಹಿ ಹರಿ ಹರಿ ರೂಪ ಹರಿವರ ॥ ಅಸು ಪಲ್ಲ ॥ ದೇವ ದೇವರದೇವನೇ । ಎಲ್ಲವ ತಿಳಿ । ದೀ ವಿಧ ಕೇಳ್ಪುದೇನ್ಸೈ । ಸಾವಧಾನದೊಳೊರಪೆ ಧರೆಯೊಳು । ನೀವು ಜನಿಸಿದ ಬಳಿಕ ನೃಪಗೆನೆ । ದೇವರುಷಿ ನಿನ್ನಲ್ಲಿರಿಸಿ ವಸು । ದೇವ ಮಾಯೆಯನಿತ್ತನೆನ್ನುತ ॥ ಪಾಹಿ ॥ ೧ ॥ ಅರುಹಲಂಜುವೆ ದೇವನೇ। ಕೋಪಿಸಿದಡೆ । ಉರುಹುವೆ ತ್ರಿಜಗವನೆ ॥ ದುರುಳ ಕಂಸ ನೃಪಾಲನದ ಕೇ । ಳ್ದರಿತು ಖಳರಳಿಸಿದುದನಾಗಳೆ । ಕರೆಯ ಲಟ್ಟಿದ ನಿಮ್ಮನಲ್ಲಿಗೆ । ವರ ಚತುರ್ದಶಿ ದಿವಸದಾಂತದಿ ॥ ಪಾಹಿ ॥ ೨ ॥ ಬಿಲ್ಲಹಬ್ಬದ ನೆವದಿ । ಪೊರಡಿರಿನ್ನು । ನಿಲ್ಲದಲ್ಲಿಗೆ ಶೀಘ್ರದಿ ॥ ಪುಲ್ಲಶರ

ನಯ್ಯನೆ ಪರಮ ಕೈ । ವಲ್ಯ ಲಕ್ಮೀಶನೆ ಪರಾತ್ಪರ । ನಲ್ಲವೇ ಪರಬ್ರಹ್ಮ ನೀನೆ । ನ್ನಲ್ಲಿ ಕರುಣವನಿಟ್ಟು ರಕ್ಷಿಸು ॥ ಪಾಹಿ ॥ ೩ ॥

|| ರಾಗ: ಕೋರೆ ಆದಿತಾಳ || (ಧಾಟಿ–ಬಾರೆನ್ನಾ ಸುಕುಮಾರ ಕುಮಾರಸಮಾನ|)

ಎಂದು ಶ್ವಪಲ್ಕನ । ಕಂದನೊರದ ಸುಡಿ । ಗಂದು ಶಿರವನೊಲ । ದಾಡಿಸಿ ॥ ನಿಂದಾನಂದದೊ । ಳೆಂದನು ಗೋಪರ । ವೃಂದವನೊಟ್ಟೊಡ । ಗೂಡಿಸಿ ॥ ೧ ॥ ಕೇಳಿರಿ ಮಧುರೆಯ । ಪಾಲಕನೆಸಗುವ । ಲೀಲೆಯೊಳ್ ಬಿಲ್ಲಿನ । ಹಬ್ಬವ ॥ ಹೇಳಿ ಕಳುಹಿಸಿದ । ನೇಳಿರಿ ನೋಡುವ । ಬಾಳ ಮುದ ದೊಳಹ ಬೊಜ್ಜೆಯ ॥ ೨ ॥

|| ವಾರ್ಧಿಕ್ಯ ||

ಮತ್ತೆ ಒಲ ನಾರಾಯಣರು ಗೆಳೆಯರಿಂಗೆಲ್ಲ । ವಿಸ್ತರಿಸಲವರು ಪಾಲ್ಮೊಸರ ಭಾಂಡಗಳ ತರ । ಲೊತ್ತಾಗಿ ಭಕ್ತನೊಡನೇರಿ ಭಂಡಿಯು ಪೊರಡಲತ್ಯಧಿಕ ರಭಸದಿಂದ ॥ ಮತ್ತಕಾಶಿನಿಯುರದಕಂಡು ಗೋಳೆಂದಳಲು । ತರ್ಥಿಯಿಂ ಪಥದೊಳಡ್ಡೈಸಲನ್ನೆಗ ಕೃಷ್ಣ । ನಿತ್ಯಭಯವಂ ಸಡದನೇನೆಂಬೆ ಭೂಪ ಯಮುನಾ ನದಿಯ ತೀರದೆಡೆಗೆ ॥ ೧ ॥

|| ರಾಗ ಕೇತಾರ ಗೌಳ ಝುಂಪೆತಾಳ ||

ಇತ್ತ ಕೇಳಕ್ರೂರನು । ಜಲದಿ ಮಿಾ । ಯುತ್ತಿರಲಿಕೀಕ್ಷಿಸಿದನು ॥ ಭಕ್ತಜನ ಸುರಧೇನುವ । ಚೋದ್ಯದೊಳು । ಮತ್ತೆ ಕಂಡ ವರೂಥವ ॥ ೧ ॥ ಹರಿ ಬಲರ ನೋಡಿ ರಥದಿ । ಮುದದೊಳವ । ಮರಳಿ ಮಿಂದನು ಪಾಥದಿ ॥ ಅರರೆ ಯೇನಚ್ಚರಿಯಿದು । ಜಲಕ್ಕಾಕೆ । ಹರಿಬಲರು ಬಂದರೆಂದು ॥ ೨ ॥ ಭ್ರಮೆಯಿಂದ ಮುಳುಗಲಾಗ । ಪರಿಕಿಸಿದ । ಕ್ರಮದಿ ಮೂರಸೆಯೊಳನಘ ॥ ಸುಮನಸಾರ್ಚಿತನ ಪದವ । ವಿಶ್ವಮಯ । ನಮಳತರ ವೈಕುಂಠವ ॥ ೩ ॥

|| ವಾರ್ಧಿಕ್ಯ ||

ರಾಮ ನಾಮಂ ಕುವರ ಕುವರ ಮಾಯಾರಮಾ । ರಾಮ ರಾಮಾನುಜಂ ಚಿದ್ಘನ ನಿರಂಜನ ನಿ । ರಾಮಯಂ ರಾಮ ಮದ ಹರವರ ವಿರಾಡ್ರೂಪನಹಿತಲ್ಪಕುಲವಾರಿಧಿ ॥ ಸೋಮ ಸೋಮ ಪ್ರಿಯಂ ಭಕ್ತಜನ ಹೃತ್ಕುಮುದ । ಸೋಮ ಕಾಮದ ಕಾಮಜನಕ ನಿರವಧ್ಯ ಗುಣ । ಧಾಮ ದಾಮೋದರಂ ಪರಮಾತ್ಮ ಪ್ರೋಂ ಪರಂಜ್ಯೋತಿಯುಂ ಖಳ ಭೀಮನಂ ॥ ೧ ॥

|| ಭಾಮಿನಿ ||

ಇಂತು ಪರಿಕಿಸುತಾದಿ ಮೂರ್ತಿಯು । ನಂತರದಿ ನೀರಿಂದಲೆದ್ದಾ ನಂತ ಮೂರ್ತಿಯೆ ಕಂಡೆ ಮಹಿಮೆಯ ಧನ್ಯ ತಾನೆಂದ ॥ ಮುಂತೆ ಸಲ ದೆರಗೆ ಶರಣನ । ಸಂತವಿಸಿ ಬೀಳ್ಕೊಟ್ಟು ತಕ್ಷಣ । ಕಂತುಪಿತ ಮುಂಬರೆ ರಜಕನ ಕಾಣುತಿಂತೆಂದ ॥ ೧ ॥

|| ರಾಗ: ಶಂಕರಾಭರಣ, ಏಕತಾಳ || (ಧಾಟಿ—ಕಾಮಿನಿ ಕೇಳೆರೆಯನಿಂಗೆ)

ಆರೆಲೊ ರಜಕ ನೀನು । ಚಾರು ವಸ್ತ್ರವೆಲ್ಲಿಗ್ಯೊವೆ । ಘೋರ ನೀವ ದೆಮಗೆ ಲ್ ಷು । ಭೂರಿ ತೋಷದಿ ॥ ವೀರ ಕಂಸ ನೃಪನಿಗ್ಯೊವ । ಭಾ ಮುಡಿಯರುವೆಯನಿದಕು । ಮಾರರೀಯಲಾರೆನತ್ತ । ಸಾರಿ ಶೀಘ್ರದಿ ॥ ೧ ॥ ಎಲವೊ ರಜಕ ಕಂಸನೃಪನಿ । ಗಳಿಯರಾವು ಮುಡಿಯು ನೀಯ ।ಲಘುಕಲೇಕೆ ಪೋಪೆವಲ್ಲಿ । ಗೊಲಿದು ಪ್ರೇಮದಿ॥ಛಳಿರೆ ಮಕ್ಕಳಿರನೃಪಾಲ । ಗಳಿಯರಾದ ರೇನು ವ್ಯರ್ಥ । ಛಲವ ಮಾಡಬೇಡಿ ತನ್ನ। ಮುಳಿಸೆಬ್ಬಿಸದಿರಿ ॥ ೨ ॥ ಸಾಕು ಗರ್ವಿಸದಿರು ಬರಿದೆ। ಪೋಕತನದಿ ಕೆಡದಿರಧಮ। ನೀ ಕೊಡದಿರೆ ಮುಡಿಯು ಸೆಳದು । ನೂಕಿ ಬಿಡುವೆವು ॥ ಹೇಕುಮಾರರಿದನು ವರ ಪಿ । ನಾಕೆ ಬಂದು ಕೇಳಲೀಯೆ ಜೋಕೆ ಯೆಂದುತಡದು ನಿಂದ । ನಾಕೆವಾಳನು ॥ ೩ ॥

|| ಭಾಮಿನಿ ||

ರಾಯ ನೀ ಚಿತ್ರವಿಸು ರಜಕನ । ಕಾಯುವನು ತರಿದಾಂತು ಮುಡಿಯು ಹ । ಲಾಯುಧನ ಸಂಗಡಲೆ ಬರುತಿರೆ ತಂತುವಾಯನಗೆ ॥ ಪ್ರೀಯದಿಂ ಸಾರೂಪ್ಯ ಮುಕ್ತಿಯ । ನೀಯುತನಘ ಸುಧಾಮನಿಗೆ ನಾ । ರಾಯಣನು ಬಳಿಕಿತ್ತ ಸಕಲೈಶ್ವರ್ಯ ಸಂಪದವ ॥ ೧ ॥

|| ರಾಗ ಮಾರವಿ ಏಕತಾಳ || (ಧಾಟಿ—ಊರ್ಭಿ ಕುಮಾರಿಯ | ಗರ್ಭೋದ್ಭವರೆ)

ಏನನೆಂಬೆ । ಹರಿಯಿರ । ವೇನನೆಂಬೆ ॥ ಪಲ್ಲ ॥ ಭರದೊಳು ಮುಂದೈ। ತರುತಿರೆ ಕುಬ್ಜಾ । ತರುಣಿಯನೀಕ್ಷಿಸಿ । ಬೆರಗಿನೊಳವಳಿಗೆ । ಹರೆಯುದ ಪ್ರಾಯುವ । ಕರುಣಿಸಿ ಮಥುರಾ । ಪುರದಬಲೆ ಯರನು । ಕರಗಿಸಿ ಬಂದನು । ಯೇನನೆಂಬೆ ॥ ೧ ॥ ಘಳಿಲನೆ ಧನುವಿಹ । ಬಳಿಗೈತಂದದ । ನಳುಕದೆ ಮುರಿಯಲು । ತಿಳಿದತ್ತೈಸಿದ । ಖಳರನು ತರಿದತಿ । ಗೆಳೆಯರೊಡನೆ ಬಹು ನಲವಿಂದಲಿ ತಾನಲಿದಾಡಿದನವ । ನೇನನೆಂಬೆ ॥ ೨ ॥

॥ ವಾರ್ಧಿಕ್ಯ ॥

ಮುರಿದ ಬಿಲ್ಲೆರಡು ತುಂಡುಗಳ ಹರಿ ಬಲರು ತಾ । ಧರಿಸುತಿದಿರಾದ ಭಟರಂ ಸಪೆದು ಬಳಕಂದಿ । ನಿರುಳಿನೊಳ್ ನಿತ್ಯ ವಿಧಿಯಂ ಗೈದು ನಿದ್ರೆಯಿಂದಿರಲನ್ನೆಗಂ ಭಯದೊಳು ॥ ದುರುಳ ಕಂಸ ನೃಪಾಲ ಕನಸ ಕಂಡೆಚ್ಚರ್ತು । ಚರರೊರೆದ ಮಾತನಾಲೋಚಿಸುತ ನಡನಡುಗು । ತೊರೆದ ತನ್ಮನದೊಳಗೆ ಜೆಸನದಿಂವಳಿಯುರಂ ಗೆಲ್ಲಲಸದಳವೆನ್ನುತ ॥ ೧ ॥

|| ರಾಗ ತೋಡಿ ರೂಪಕತಾಳ || (ಧಾಟಿ — ಕಂಡಳಾಗ ಶಚಿಯ ರಂರದಿ)

ಏನನೆಂಬೆ । ದುಶ್ಯಕುನಗಳ । ಸಂಹರಿಸಲಿನ್ನಾ । ನೇನಮಾಡಲಳಿಯಂದಿರುಗಳ । ಕಾಣುವುದು ದುಃಸ್ವಪ್ನ ವಸ್ತ್ರ । ಹೀನನಾಗಿ ತೈಲಾಭ್ಯಂಗ । ಸ್ನಾನವಧಿಕ ವಿಷಭಕ್ಷಣವು । ಹೀನಶವಗಳಾಲಿಂಗನವು ॥ ೧ ॥ ಭರಿತ ಜಾಗರದೊಳಗಿರುತಿರೆ । ತೋರುವುದು ನಯನ । ಕೆರಡುಮೂರು ಚಂದ್ರ ಸೂರ್ಯರೇ ॥ ಶರದಿತೋರ್ಪ ಪ್ರತಿಬಿಂಬದೊಳು । ಶಿರವಕಾಣದಹುದು ಪನ್ನ । ಕೆರಕ ಮಗಗಳಪ್ಪುದನುಮ । ಚರಣದಡಿಯು ರಜದಿಕಾಣ । ದೇನನೆಂಬೆ ದುಶ್ಯಕುನಗಳ ॥ ೨ ॥

॥ ಭಾಮಿನಿ ॥

ತರಳರನು ಬರಹೇಳಿ ಕೆಟ್ಟೆನು । ಧುರದಿ ವಿಜಯವಿಲ್ಲೆಂದು ರಾತ್ರಿಯೊಳೊರಗದಿರ್ದುದಯದಲಿ ಜಟ್ಟಿಗಳೆಲ್ಲರನು ಕರೆಸಿ ॥ ಅರಿಗಳನು ಸಂಹರಿಸಿ ಬಹದೆಂ । ದರುಹಿ ದಂತಿಯುನಟ್ಟಲಾಗಳೆ । ಭರದಿ ಬಂದರು ಕಾಲನಾಳುಗಳಂತೆ ಭೀಕರಿಸಿ ॥ ೧ ॥

|| ರಾಗ ಆಹೇರಿ ಝಂಪೆತಾಳ || (ಧಾಟಿ—ಭಳಿರೆ ದುಶ್ಶಾಸನಾಖ್ಯಾ)

ಸಮರಕೈತಂದರಾಗ । ಜಟ್ಟಿಗಳು । ಕಮಠನಂಜವ ತೆರದಿ ಗಜದೊಳೊಡನೆ ಬೇಗ ॥ ಪಲ್ಲ ॥ ತರಳರನು ಕಂಡೊಡನೆ । ಸರಿಸಕೈತರಲನಕ । ಕರಿಯು ಸುಂಡಿಲನೆತ್ತಿ । ಭರದಿ ಬಂದಚ್ಯುತನ । ಚರಣದಿಂದೊತ್ತಲವನು । ದಂತಗಳ । ಮುರಿದಾಗಲದ ತರಿದನು । ಕ್ಷಣದಿ ಯಮ । ಪುರಕಟ್ಟಿ ಮಾವುತನನು ॥ ಸಮರ ॥ ೧ ॥ ಬಳಿಕ ಬಲಮುಷ್ಟಿಕನ । ನಳಿಸೆ ಚಾಣೂರನನು । ನಳಿನನೇತ್ರನು ವಧಿಸು । ತುಳಿದ ಜಟ್ಟಿಗಳಸುವ । ಕಳುಹಿಸುತ ಯಮನಗ

ರಿಗೆ । ಕಂಸನೃಪ । ನಿಳಯಕ್ಕೈದವನ ಬಳಿಗೆ । ಸಾರುತ್ತ । ಕುಳಿತನಾ ಮಂಚ ಮೇಗೆ ॥ ಸಮರ ॥ ೨ ॥

|| ಕಂದಪದ್ಯ ||

ಒಡನೀಕ್ಷಿಸಿ ಕಲ್ಪಾಂತದ । ಮೃಡನೋಲಾರ್ಭಟಿಸಿ ಕಂಸನಂದತಿರುಷದಿಂ ॥ ಸುಡಿದಂ ಯುಗನಯನದಿ ಕೆಂ । ಗಿಡಿಯಂ ಸೂಸುತಸಿಯ ಜಡಿದುರೆಗಜರುತ್ತಂ ॥ ೧ ॥

|| ರಾಗ: ಶಂಕರಾಭರಣ ಮಟ್ಟೆತಾಳ ||

ಆರರೆಗೋಪತರಳ ಎನ್ನ । ಪರಿಯನರಿಯದಾದೆಯಲ್ಲ । ಭರಿತ ಸಲುಗೆಯಾಯ್ತೆ ನಿನ್ನ । ತರಿವೆ ನೋಡೆಲ ॥ ನಿರಪರಾಧಿಗಳನು ಕೊಲುವ । ಚರಿತೆಯುಂಟೆ ಮಾವನೆಡೆಗೆ । ಬರಲು ಸಲಿಗೆಯೇನು ತನಗೆ । ಧುರ ಧುರೀಣನೆ ॥ ೧ ॥ ಗಳಹಬೇಡ ಕಪಟ ಸುಡಿಯ । ತಿಳಿದೆ ನಿನ್ನ ಬಗೆಯ ಭಟರ । ಕೊಲುವುದೇನು ನೀತಿ ಸತಿಯು । ರೊಲಿಸಿದಂದವೆ ॥ ಮಲತಭಟರ ತರಿದು ಜಗವ । ಸಲಹಲುಜ್ಜುಗಿಸಿದೆ ಜನರು । ತಿಳಿದ ಬಗೆಯು ಕರೆಸಿದೇಕೆ । ಅಳಿಯಂದಿರುಗಳ ॥ ೨ ॥ ಭೂರಿಭಟರ ಕೊಂದುದನು ವಿ । ಚಾರಿಸಲ್ಕೆ ಕರದೆ ನಮ್ಮ । ವೀರಶಕಟನನ್ನು ತರಿದ ಕಾರ್ಯವೇನೆಲ ॥ ಧಾರುಣಿಯೊಳು ಶಕಟನಾಗಿ । ಭೂರಿಮಕ್ಕಳಸುವ ಹೀರ್ದ । ಕಾರಣದಲಿ ಖಳಗೆ ಕಾಲ । ನೂರತೋರಿದೆ ॥ ೩ ॥ ಪೂತು ಮಝುರೆ ಜಗದಿ ಬಹಳ । ನೀತಿವಂತನಹುದು ಕಳ್ಳ । ಪೂತನಿಯಳ ಕೊಂದುದೇಕೆ । ಕೋತಿಗಳ ಸಖ ॥ ಸಾತಿಶಯದ ವಿಷದಮೊಲೆಯ । ನೋತು ಶಿಶುಗಳಿಂಗೆ ಕೊಟ್ಟು । ಘಾತಿಸಿದನು ತಿಳಿದು ಕೊಂದೆ । ಭೀತಿಯಿಲ್ಲದೆ ॥ ೩ ॥ ಅಕಟ ಪಾಲು ಬೆಣ್ಣೆ ಕಳ್ಳ । ವಿಕಟ ಸೀರೆ ಮಣ್ಣು ಕಳ್ಳ । ಒಕ ಪ್ರಲಂಬರುಗಳ ತರಿದ । ಯುಕುತಿಯೇನೆಲ ॥ ಪ್ರಕಟಗೋಪ ರೂಪನಾಗೆ । ಸಖಪ್ರಲಂಬನಿರಿದ ಬಲನು । ಬಕಸ್ವರೂಪನಾದ ಬಕನ । ಮುಖದಿ ಹತಿಸಿದೆ ॥ ೪ ॥ ಇತ್ತ ಜನಿಸುತತ್ತ ಬೆಳೆವ । ಧೂರ್ತನೆಮ್ಮ ವೃಷಭ ವ್ಯೋಮ । ವತ್ಸ ಧೇನುಕರನು ತರಿದ । ಕೃತ್ಯವೇನೆಲ ॥ ದೈತ್ಯರೆಮ್ಮ ತರಿಯಲೆಳಸಿ । ಮತ್ತೆ ವೃಷಭ ತುರಗ ಸುರಭಿ । ಕತ್ತೆಯಾಗಿ ಬರಲು ಕೊಂದೆ । ನರ್ಥಿಯಿಂದಲಿ ॥ ೫ ॥

॥ ಕಂದ ಪದ್ಯ ॥

ಮುರಹರನಸ್ತ್ರದಿ ಮಗಧೇ । ಶ್ವರ ವಿರಥನನಾಗಿ ಬಳಿಕ ಮೂರ್ಛಿಸ ಲುಳಿದವ ॥ ರರಿತು ಪಲಾಯನ ಗೈಯಲು । ಜರೆದಿಂತೊರದ ಮಹಾ ಪರ ಮಾತ್ಮಸ್ವರೂಪಂ ॥ ೧ ॥

॥ ರಾಗ ಬೇಗಡೆ ಏಕತಾಳ ॥ (ಧಾಟಿ—ವಂದಿಸುವೆಗುಣ ವೃಂದ ಮುನಿತಿಲಕಾ)

ಏನಿದೇನಿದು ಮಾಗಧೇಶ್ವರನೆ । ಹ್ಯೊದಾಡಿ ಯುದ್ಧದಿ । ಕ್ಷೋಣಿ ಗೊರಗಿದೆಯಧಿಕ ಬಲಯುತನೆ । ನೀನು ತ್ರಿಜಗದೊಳಧಟನೆಲೆ ನಾ । ವೇನು ಸತ್ವರು ಗೋಪತರಳರು । ಜಾಣ ಮುಂದಿನ್ನೆಂತು ವಕ್ತ್ರವ । ಕಾಣಿಸುವೆ ನೃಪರುಗಳ ಮಧ್ಯದಿ ॥ ಏನಿದೇನಿದು ॥ ೧ ॥ ಹುಲುನರರಿ ಗಳುಕುವವರಾವಲ್ಲೈ । ಬಲುನೃಪರ ಯುದ್ಧದಿ । ಗೆಲಿದು ಸೆರೆವಿಡಿದಧಟ ನೀನಲ್ಲೈ ॥ ಬಲುಹುತನವೇನಾಯ್ತು ತವಕ್ಕೆ । ಚಳಕವನು ತೋರೀಗ ಕಂಸನ । ಕೊಲೆಯ ತೀರ್ಚಲ್ಲದಡೆ ಸುಮ್ಮನೆ । ಕೊಲುವರಲ್ಲವು ಪೋಗು ಪಿಂದಕೆ ॥ ೨ ॥

॥ ಭಾಮಿನಿ ॥

ಎಲವೊ ವೀರನೆ ಭೂಪರನು ನರ । ಬಲಿಗೆ ಕೊಡುವತಿದುಷ್ಟ ನಿನ್ನನು । ಕೊಲದೆಬಿಡುವದಯೋಗ್ಯವಾದಡೆ ಮುಂದೆ ಜೀವವನು ॥ ಉಳುಹಿಕೋ ಮಮಹೆಸರನೆತ್ತದೆ । ನಲವಿನಿಂ ಪೋಗೆಂದು ಕೃಷ್ಣನು । ಸಿಳಯುಕೈಶರಲಿತ್ತ ಮಾಗಧ ನಡದ ಪುರದೆಡೆಗೆ ॥ ೧ ॥ ಧರಣಿಪತಿ ಕೇ ಳಾತನೊಂದಿನ । ಸರುವ ಸನ್ನಾಹನನು ಕೂಡುತ । ಧುರಕೆ ಬರುತಿರು ವನಕ ನಿಶಿಯಾಗಲ್ಕೆ ನಿದ್ರೆಯೊಳು ॥ ಇರಲು ಹರಿಬಲರವನ ಸೋಲಿಸಿ । ಭರದಿ ಸರ್ವವನಪಹರಿಸುತಾ । ತೆರಳಲಾಗಳೆ ತಿರಿಗಿ ಗೃಹಕ್ಕೈತಂದು ದುಃಖಿಸಿದ ॥ ೨ ॥

॥ ರಾಗ ನೀಲಾಂಬರಿ ರೂಪಕತಾಳ ॥ (ಧಾಟಿ—ಅಕಟಕಟೇನ್ ಭವಣಿಯೊ । )

ಅಕಟಕಟೇನೆಸಗಲಿ ದೇ ! ವಕಿ ಯಾತ್ಮಜರನು ಹತಿಸುವ । ಯುಕು ತಿಯು ನಿನ್ನುಳಿಯುವ ಗತಿ । ಮುಖ ಹರನೀ ತೋರು ॥ ಪಲ್ಲ ॥ ಪುತ್ರಿಯ ರುಕ್ತಿಯ ಕೇಳಿ ಸ । ಮಸ್ತ ಬಲವ ಕೊಡ್ಯೆರಡಾ । ವರ್ತಿ ಮಥುರೆಯನು ಮುತ್ತುತ । ಪೌತ್ರರೊಡನೆ ಹಳಚೆ ॥ ವಸ್ತು ಒಡವೆ ಧನ ಕನಕವ ಕಿತ್ತು

ಕೊಳುತ ಪ್ರಾಣದೊಳೆ । ನ್ನಿತ್ತ ಕಳುಹಿದರು ಹರನಿ ನ್ನಿತ್ತು ಮಾಡುವ ದೇನು ॥ ಅಕಟ ॥ ೧ ॥ ಶರಳರ ಸೋಲಿಸದಿರ್ದಡೆ । ಧರೆಯೊಳ ಗತಿ ನಿಂದೆ ಯು ಸುರ । ವರರತಿ ನಗುವರು ಭೂಪರು । ಜರದುರೆ ಮನ್ನಿಸರು ॥ ಧುರ ವೆಸಗುವೆನೆಂದಡೆ ಲಯ । ಹರನಂದದಿ ಶೋಭಿಸುವರು । ಸಿರಿಯತಿ ಬಲ ವೆಲ್ಲವು ಕುಂ । ದಿರುವುದು ಶಿವ ಶಿವನೆ ॥ ೨ ॥

॥ ವಾರ್ಧಿಕ್ಯ ॥

ಉತ್ತರೆಯ ಪುತ್ರ ನೀ ಚಿತ್ತವಿಪುದಿತ್ತ ಖಳ । ನತ್ತು ಮರುಗುತ್ತಿರಲಿ ಕತ್ತಲವ ತ್ಯಧಿಕ । ವಸ್ತುವತಿ ಶಸ್ತ್ರಾಸ್ತ್ರ ವೊತ್ತಿನಲಿ ವಿತ್ತಬಲ । ವಿತ್ತಡಾ ದೈತ್ಯ ಬಾಣ ॥ ಸುತ್ತೆ ಗಜರುತ್ತ ಮಮ ಶತ್ರುಗಳ ಮಿತ್ರಜನಿ । ಗಿತ್ತು ಬಹೆ ನುತ್ತ ರುಷವೆತ್ತು ಪುರು । ಷೋತ್ತಮನ ಪತ್ತನವ ಮುತ್ತಿದನು ಪೃಥ್ವಿಯ ಪರಿತ್ಪತಿಯು ಸುತ್ತಿತೆಸೆ ವಿಸ್ತಾರದಿ ॥ ೧ ॥

॥ ಭಾಮಿನಿ ॥

ವೀರ ಮಗಧನು ಪುರವ ಮುತ್ತಿದ । ವಾರತೆಯ ಚರರುಹಲಚ್ಯುತ । ಭಾರಿ ಯಾದವ ಸೈನ್ಯವನ್ನೊಗೂಡುತರಿ ಬಲಕೆ ॥ ಹಾರಿಸಲು ಮಣಿ ರಥ ವನನ್ನೆಗ । ಭೂರಿ ರೋಷದೊಳಚ್ಯುತಾಗ್ರಜ । ಕ್ರೂರ ಖಳಗಿಂತೆಂದ ಮುಸಲಾಯುಧವನುರೆ ಪಿಡಿದು ॥ ೧ ॥

|| ರಾಗ ಸಾವೇರಿ ಅಷ್ಟತಾಳ || (ಧಾಟಿ – ತನಯರು ಕೇಳ್ ದೃಢದೊಳಗಂದು)

ಎಲವೊ ಜರಾಸಂಧ ನಮ್ಮಯ । ಬಲವಳಿಸಲ್ಕೆ ತಂದೆಯು ನಿನ್ನಯ ॥ ತಲೆಯ ಗಡಿದು ಭೂತವರ್ಗಕೆ । ತೃಪ್ತಿ । ಗೊಳಿಸುವೆ ಪರಿತು ಸಾರೆಲೊ ಜೋಕೆ ॥ ೧ ॥ ಏನೆಲೊ ರಾಮ ಸತ್ವವ ತೋರಾ । ವರ । ಧೇನುಕ ಮುಷ್ಟಿ ಕಾದ್ಯಸುರರ ॥ ಪ್ರಾಣವಳಿಸಿದ ಧುರವಿದಲ್ಲ । ಅವ । ಸಾನದ ಕಾದಾಟ ನಿಮಗೆಲ್ಲ ॥ ೨ ॥ ಮೊದಲು ನೀನೆರಡು ಬಾರಿಯೊಳೆನ್ನ । ಕೊಲ್ಲ । ಲೊದಗಿ ಬಂದಪಜಯದೊಳು ಘನ್ನಾ । ನಧಿಕ ಭಂಗದಿ ಮರಳಿದ ಹೇಡೀ । ನಿನ್ನ । ವದನವೀಕ್ಷಿಸ ಬಾರದೆಲೆ ಖೋಡೀ ॥ ೩ ॥ ಮರುಳೆ ಬನವ ಕಾದು ತೀರ್ದು ದೇ । ಹುಲು – (ತುರುಗಾವ ವೃಜ್ಜುಗ ಹರಿದುದೇ । ಮರಳು ಹಾದರವನ್ನು ಜರವೆಯಾ । ಮೂರು– । ಧರಣಿಪರನು ಗೆದ್ದುದರಿಯೆಯಾ ॥ ೪ ॥ ಬಲ್ಲೆನು ಭೂಪರ ಗೆಲಿದುದ । ಮೇಣ್ – । ನಿಲ್ಲದ ವರಬಲಿ ಗೀವದ ॥ ಎಲ್ಲ ವೆರಡು

ಸಾರಿ ಕಳದುದ | ಈಗ—|ಗೆಲ್ಲಲು ಬಾಣನ ಸೇರ್ದುದ ‖ ೫ ‖ ಎನೆ ಸುರಿಸಲು ಶರಮಳೆಯನು | ಅರೆ—| ಕ್ಷಣದೊಳು ಖಂಡಿಸಿ ರಾಮನು ‖ ಕನಲು ತೆಚ್ಚಡೆ ದಿವ್ಯ ಕಣೆಗಳ | ನಾಂಟ | ಲನಕ ಕ್ಷೋಣಿಯೊಳೊರಗಿದ ಖೂಳ ‖ ೬ ‖

‖ ಭಾಮಿನಿ ‖

ಎಲೆಲೆ ಕುನ್ನಿ ಪಿಶಾಚಿ ತವ ತಲೆ | ಯುಳುಹುವವರಾರೈತರಲಿ ನಾ | ಕೊಲದೆ ಬಿಡೆ ನೋಡೆಂದು ಕಾಲೊಳು ತುಳಿದು ಮುಸಲವನು ‖ ಘಳಿಲ ನೆತ್ತಲು ಬಲನೆ! ಪವನಜ | ನಳಿಸುವೀ ಮಾಗಧನ ಜೀವವ | ಸುಳುಹು ಮುಸಲವ ನಿಳುಹು ಲೇಸೆನೆ ಗಗನ ನುಡಿಯಾಗ ‖ ೧ ‖

‖ ರಾಗ ಕಾಂಬೋದಿ ಝುಂಪೆತಾಳ ‖

ಭರದೊಳದ ಕೇಳ್ದು ಹಲ | ಧರನಧಿಕ ಬೆರಗಾಗು | ತರರೆ ಯೇನಾಶ್ಚರಿ ಯಿದೆನುತ ‖ ದುರುಳ ನಳಿಸುವ ಮನವ | ದೊರೆದು ಕಣು ಮುಳಿದು ಮನು | ಚರಣದೊಳು ತುಳಿದೆಂದ ಜರದು ‖ ೧ ‖ ಧೂರ್ತ ದುರ್ವ್ಯಸನಿ ತವ | ಸತ್ವವೇ ನಾಯ್ತು ಧುರ | ಪೃಥ್ವಿಯೊಳಗಿಂತು ಮಲಗುವುದೆ ‖ ಸತ್ತುಪೋಗಧಮ ನೀ | ನತ್ತ ಸಾರೆನುತ ಹರಿ | ಯೊತ್ತಿನಲಿ ಪುರಕೆ ಮರಳಿದನು ‖ ೨ ‖ ಆನಕ ಮಾಗಧನೆದ್ದು | ಮನದಿ ಚಿಂತೆಯ ತಾಳ್ದು | ಘನ ಜೇಗ ನಡೆದ ಪುರದೆಡೆಗೆ ‖ ಜನಪತಿಯೆ ಕೇಳಾತ | ನಿನಿತು ಪದಿನೇಳು ಸಲ | ವನು ವರದಿ ಜಯ ಕಾಣದಿರಲು ‖ ೩ ‖ ಇನ್ನೊಂದು ಬಾರಿ ಪಗೆ | ಯನ್ನು ತೀರಿಸಿ ಒಪ್ಪೆ | ನೆನ್ನುತೈತರಲಿತ್ತ ಮುದದಿ ‖ ನನ್ನಿಯಿಂ ಕಾಲಯವ| ನೆನ್ನುವತಿಬಲನೋರ್ವ | ವರ್ಣಿಸಿದ ಮಂತ್ರಿಯನು ಕರದು ‖ ೪ ‖

‖ ರಾಗ ಸೌರಾಷ್ಟ್ರ ತ್ರಿವುಡೆತಾಳ ‖

ಕೇಳಿಲವೊ ಮಂತ್ರೀಶನೆನ್ನಯ | ತೋಳ ಬಲುಹನು ತೋರಿ ಭೂಪರ | ಕಾಳಗಾಂತದಿ ಗೆಲಿದು ಕರಗೊಳು | ತಾಳ ಬೇಕೈ ‖ ೧ ‖ ಭಾಪುರೇ ರಣಧೀರನಾಗಿರೆ | ಕೂಪ ಮಂಡೂಕಗಳ ತೆರನಿರ | ಲೀ ಪರಿಯೊಳೇನ್ ಫಲವು ತ್ರಿದಶರ ಭಾಪೆನಿಸದೆ ‖ ೨ ‖ ಮರೆಯ ಪೊಕ್ಕರ ಸಲಹಿ ಮಲತರ | ಗರುವವನು ಭಂಗಿಸುತ ಕೀರ್ತಿಯ | ಮೆರಸಿ ಗೌರವದಿಂದ ಬಾಳುವ | ಹರುಷದಿಂದ ‖ ೩ ‖ ಸೆರಹು ಚತುರಂಗಾದಿ ಬಲಗಳ | ಶರಿಸು

ಧುರಸನ್ನಹವ ಮ್ಲೇಚ್ಛರಿ । ಗರುಹೆನಲು ಫರ್ತಿಸಿದನಾತೆರ । ವರಿತು ಮಂತ್ರಿ ॥ ೪ ॥ ಕಂಡದನು ಯವನೇಶ ಧನುವನು । ಗೊಂಡು ಮಣಿರಥ ವಡರಿ ಬರುತಿರ । ಲಂಡಲಾವೃತ ಬಂದ ನಾರದ । ಭಂಡನಿದಿರು ॥ ೫ ॥

॥ ರಾಗ: ಕೇತ್ಸಾರಗೌಳ ಅಷ್ಟತಾಳ ॥

ನಾರದ ಮುನಿಪನ । ಭೋರನೆ ಕಾಣುತ್ತ । ಚಾರು ಪದಕೆ ಮಣಿದು । ಊರಿನ ಪೊಸ ಪರಿ । ವಾರತೆಯುರುಹಿನ್ನು । ಸಾರುವದೆಲ್ಲಿಗೆಂದ ॥ ೧ ॥ ಕೇಳು ಯವನ ನಿನ್ನ । ಶೀಲ ವರಿಯಲತಿ । ವೇಲದೊಳೈತಂದೆನು ॥ ಪೇಳು ನೀ ಮ್ಲೇಚ್ಛರ । ಜಾಲದೊಡನೆ ಪೊರ । ಟಾಲೋಚನೆಯನೆನ್ನೊಳು ॥ ೨ ॥ ಎನಲೆಂದ ಮುನಿಪನೆ । ಜನಪರ ಸೋಲಿಸಿ । ರಣದಿ ಕಪ್ಪವ ಸೆಳವ ॥ ಮನದಿ ವಿಜಯ ಯಾತ್ರೆ । ಗೆನುತಲಿ ಪೊರಟವ । ನೆನ ಗಿದಿರಹರಾರಯ್ಯ ॥ ೩ ॥ ಮರುಳೆ ನೀನರಿಯೆಯ । ಹರಿಬಲರಧಟನು । ಧುರದೊಳು ಮಗಧಾದ್ಯರ ॥ ಗರುವವಿಳಿಸಿ ಮೆರ । ದಿರ ಲವರನು ಗೆಲ್ಲ । ದರಸರ ಜೈಸಲ್ಯಾಕೆ ॥ ೪ ॥ ಅರರೆ ಯೇನಿದು ಯತಿ । ವರನತಿ ಬಲರಪ್ಪ । ಹರಿ ಬಲರೆಂದೆಂಬುವಾ ॥ ಕರ ಳರಿಗಿರವೆಲ್ಲಿ । ಕುರುಹುಗಳೇನದ । ನರುಹಿರಿ ಗೆಲುವೆನಯ್ಯ ॥ ೫ ॥ ಕರದಿ ಮುಸಲ ಪಿಡಿ । ದಿರುತಿರ್ಪ ರಾಮನು । ವರ ಶಂಖ ಚಕ್ರವನು ॥ ಧರಿಸು ವಸಿತ ವರ್ಣ । ನರಿತುಕೊ ಮಥುರೆಯೊ । ಳಿರುವರೆಂದರುಹ ಲಾಗ ॥ ೬ ॥

॥ ಭಾಮಿನಿ ॥

ಸುರ ಮುನಿಯು ಇನಿತರುಹಲನ್ನೆಗ । ತಿರುಹಿ ಮಿಾಸೆಯ ಹೊಯ್ದು ಭುಜಗಳ । ನರರೆ ಗೋವಳ ಹುಡುಗರಧಟನು ಕಾಂಬೆ ತಾನೆನುತ ॥ ಭರದಿ ಮಥುರಾಪುರದ ಸನಿಯಕೆ । ಬರುತಿರುವ ಬಗೆಯರಿತು ಮಾಧವ । ನರುಹಿದನು ಬಲರಾಮನಿಂ ಗೆರಗುತ್ತ ವಿನಯದೊಳು ॥ ೧ ॥

॥ ರಾಗ ಸಾಂಗತ್ಯ ರೂಪಕತಾಳ ॥

ಅಣ್ಣ ಕೇಳಿಲ್ಲಿ ನಾ । ವಿನ್ನು ವಾಸಿಸಿದಡೆ । ಕುನ್ನಿಗ ಳುಪಟಳ ವಧಿಕ ॥ ಪಣ್ಣೆ ಕುತಂತ್ರ ವ । ನನ್ಯರಿಂದರಿ ಬಲ । ವನ್ನಳಿಸುವದೆಮ್ಮ ಕೆಲಸ ॥ ೧ ॥ ಹಂದೆ ಮಾಗಧ ಯುದ್ಧ । ಕಿಂದೊ ನಾಳೆಯೊ ಬಪ್ಪ । ಕೊಂದು ಕಳೆಯ ಲವನಿಂದ ॥ ಮುಂದಪ್ಪ ಕೃತಿಗಳು । ನಿಂದಿಪ್ಪುದದರಿಂದ । ಲೊಂದು

ಬಟ್ಟೆಯ ನೀಕ್ಷಿಸುವುದು ॥ ೨ ॥ ಕಾಲಯವನು ವ್ಲೇಚ್ಛ । ಜಾಲವನೊಡ ಗೂಡಿ । ಕಾಳಗಕ್ಕೈತರ್ಪನಣ್ಣ ॥ ಏಳು ಸಾಗರ ಮಧ್ಯ । ದಾಲಯವನು ಮಾಡಿ । ಖೂಳರ ಕೊಲುವ ಕೈತವದಿ ॥ ೩ ॥

|| ಭಾಮಿನಿ ||

ಅದು ಕುಶಸ್ಥಲಿ ಯೆಂಬ ನಿಜ ನಾ । ಮದಲಿ । ಶ್ರುತ ಪೂರ್ವವ ಡೆಮಗೆ ಮ । ತ್ತುದಧಿ ವೇಷ್ಟಿತ ತೋರಣಾಟ್ಟಾಳಾದಿ ರಚನೆಯಲಿ ॥ ಅದು ಸುದುರ್ಗವು ವೀ ಮನುಷ್ಯರಿ । ಗದನು ನಿರ್ಮಿಸಿ ಬಂಧು ವರ್ಗಕೆ । ಸದನ ವಸು ಮಾಡುವುದು ಮಂತ್ರವೆನುತ್ತ ಹೊರವಂಟ ॥ ೧ ॥

|| ವಾರ್ಧಿಕ್ಯ ||

ಮರಳಿ ಹರಿಮಯು ವಿಶ್ವಕರ್ಮರಂ ಬರಿಸಿ ಸಾ । ಗರ ಮಧ್ಯದೊಳ ಗೊಂದು ಪುರವ ನಿರ್ಮಿಸೆನಲ್ಕೆ । ತೆರಳಿ ನೂತನವಾಗಿ ದ್ವಾರಕಾ ಪಟ್ಟಣವ ನಿರ್ಮಿಸಿದರತಿ ವಿಭವದಿ ॥ ಭರಿತ ರೌದ್ರಾವೇಶಮಂ ತಾಳಿ ಕಾಲಯವ । ಮುರಿನಯುನನೋಲ್ ಗಜರಿ ರೋಷಭೀಷಣನಾಗಿ । ಭರದೊಳೈ ತರಲು ಯಾದವರ ಬಲಮಂ ಬಟ್ಟೆಯೊಳು ಪರಿಕಿಸುತಲೆಂದನು ॥ ೧ ॥

|| ರಾಗೆ: ಕೇತಾರಗೌಳ ಝುಂಪೆತಾಳ ||

ನೋಡಿದಿರೆ ಭಟರಹಿತರ । ವಿಗ್ರಹಕೆ । ಓಡುತಿಹ ಯದು ವೀರರ ॥ ಮೂಢ ಹಲಧರ ಕೃಷ್ಣರ । ನಡುಗಿ ಕರ।ಜೋಡಿಸುವ ಗೋಪಾಲರ ॥ ೧ ॥ ಪರಮ ಸ್ತ್ರೀ ಚೋರನಿವನು । ಕಂಸಾದಿ । ಧರಣಿಪರ ಗೆಲಿದಾತನು ॥ ವರ ಶಂಖ ಚಕ್ರವನ್ನು । ಕರದೊಳಗೆ । ಧರಿಸಿರ್ಪ ಕರಿಮೆಯ್ಯನು ॥ ೨ ॥ ನಾರ ದನು ಪೇಳ್ದುದೆಲ್ಲ । ನಿಜವಾಗಿ । ತೋರುತಿದೆ ಹರಿಯೊಳೆಲ್ಲ ॥ ವೀರಭಟರರಿ ಬಲವನು । ತರಿದು ಪಗೆ । ತೀರಿಸುವದೆಂದಾತನು ॥ ೩ ॥ ಪ್ರಳಯ ಭೈರವ ನಂದದಿ । ಕೆರಳಿ ಯದು । ಬಲವ ಬೆದರಿಸುತ ಭರದಿ ॥ ಹುಲು ಕೃಷ್ಣ ನಿಲ್ಲೆ ನ್ನುತ । ಮುಲತ ಮುಮ । ಹಿಳುಕ ಸವಿ ನೋಡೆನ್ನುತ ॥ ೪ ॥

॥ ರಾಗೆ ಘಂಟಾರವ ಅಷ್ಟತಾಳ ॥

ನಿಲ್ಲುನಿಲ್ಲೆಲೊ ಫಡ ಗೋಪತರಳನೆ।ಮಲ್ಲಕಂಸಾದ್ಯರ ತರಿದ ಬಲು । ಪಲ್ಲವೆನ್ನೊಳು ತೋರಿಸು ॥ ೧ ॥ ವ್ಯರ್ಥಹಾರದಿರಧಮ ಗರ್ವದಿ ಹೆಚ್ಚು ।

ಧೂರ್ತರಳಿದುದ ನೋಡಿಕಾಲನ । ಪೃಥ್ವಿಗೈದುವದುಚಿತವೆ ॥ ೨ ॥ ಧಿರುರೆ ಗೋವಳನರಿತುಕೊ ಯವನನ । ಪರಿಯಕಂಸಾದ್ಯಧಿಕ ವೀರರ । ತರಿದ ಧಟನೀ ತೋರದೆ ॥ ೩ ॥ ಎಲೆಲೆ ಕುನ್ನಿನೀ ಬರಿದೇಕೆ ಹರಣವ । ಕಳ ಕೊಳುವೆಮುನೆಲೆಯರಿತು ನಡೆ । ನಿಳಯಕುತ್ತಮಕೃತಿಯೆಲ ॥ ೪ ॥ ಎಂದಡಾಡನುಗಚ್ಛುತ ರೊಚ್ಚುತ । ಮಂದರಾಧರನಂಗೆಚ್ಚನು । ಮಂದ ಮತಿ ಬಹುಕೋಲ್ಗಳ ॥ ೫ ॥ ತರಿವ್ರತಾಗಳೆ ಹರಿಯೊಂದುಪಾಯವ । ಭರದಿಯೋಚಿಸುತೋಡ ತೊಡಗಲು । ಕರಕರದು ಜರದೆಂದನು ॥ ೬ ॥

॥ ರಾಗ: ಸೌರಾಷ್ಟ್ರ ತ್ರಿವುಡೆತಾಳ ॥

ಏನನೆನೆಯನು ನಾರದನು ನೀ । ನೇನ ಮಾಡಿದೆ ವೀರಗಜ ಪಂ । ಚಾನನನೆ ನಿಲುನಿಲ್ಲು ನಿನಗಿದು । ಮಾನವೇನೊ ॥ ೧ ॥ ಮೂರುಲೋಕದ ಗಂಡಗಡಕ್ಕೈ । ದೋರು ಕೈದೋರೆಲೆ ಪಲಾಯನ । ಗಾರರರಸನೆ ಹೋಗ ದಿರು ಕ್ಷಣ । ತೋರುಬಲುಹ ॥ ೨ ॥ ಮಿರಿದೈಮಾರ್ಗವನು ಮೃಗನು । ಮಾರಿದೈ ಬಯಲಿಂಗೆ ಮೊಸರನು । ಹೇರಿದೈನೀನೆನುತ ಜರದನು । ಶೂರತನದಿ ॥ ೩ ॥

|| ಭಾಮಿನಿ ||

ಭುವನಪತಿಯನ್ನಿಂತು ನಿಂದಿಸು । ತವಸರದಿ ಬೆಂಬೊತ್ತುತೈತರ । ಲವಿತನೊಂದು ಗುಹಾಂತರದಿ ಮುಚುಕುಂದನಾಕ್ಷಣದಿ ॥ ಜವದೊಳಕ್ಷಿಯ ತೆರೆಯುಲುರಿಯಿಂ । ಯವನ ಭಸ್ಮೀ ಭೂತನಾಗಲು । ದಿವಿಜಪುರಕಾ ನೃಪನಿ ಗಭಯವನ್ನಿತ್ತು ಕಳುಹಿದನು ॥ ೧ ॥

|| ಶರಷಟ್ಪದಿ ||

ಮುರಳಿಮುಕುಂದನು । ಹರುಷದಿ ಗುಹೆಯಿಂ । ಪೊರಟಾಗಿರಿಯಿಳಿದೈತರುತ ॥ ನೆರವಿಯೊಡನೆ ಮೆರ । ದಿರಲನ್ನಗ ಕರ । ದೊರದನು ಮಾಗಧ ಗಜರುತ್ತ ॥ ೧ ॥

||ರಾಗ: ಶಂಕ್ರಾಭರಣ ಮಟ್ಟೆತಾಳ || (ಧಾಟಿ — ಭಾನುತನುಜ ಭಳಿರೆ)

ಭಳಿರೆ ಕೃಷ್ಣ ಬಲವಗೆಲಿದ । ಬಲುಹ ಶೋರೆಲ । ಕೊಲುವೆ ಕಂಸ ಕೊಲೆಯ ನೋಡು । ಕಲಿತನಂಗಳ ॥ ಗಳಹಬೇಡ ಗಳಿಗೆಗೊಮ್ಮೆ । ಗೆಲುವ ಮಾತನು । ಛಲವ ಬಿಡು ಕೈ । ಚಳಕ ವಿಳಿಸಿ । ಚಲಿಸು ಮನೆಗಿನಿಸ್ನು॥ ೧ ॥

ಅಸುರಹರನ | ಇಂದಿನಳವಿ | ಅಣಕವಲ್ಲೆಲ || ಅಸಮಯವನ | ನಸುಪಕ ಳದ | ಅಥಟ ತೋರೆಲ || ಭಷಕನಂತೆ ಸಾವವರೆಗೆ | ಬಗುಳಿ ಕಾಲನ || ವಸುಧೆಗೈದಿ ನರಳ್ವನೀತಿ | ಯುಸುರಲೋಕದ ||೨|| ಕುಣಿಯಬೇಡ ರಣದಿ ಗೆಲ್ದ | ಮನುಜ ಸೋಲ್ವನು | ಕಣ್ಮುಸನ್ನಿಯ ಪರಿಕಿಸೆಂದು | ಶರಗಳೆ ಚ್ಚನು || ವನಜನೇತ್ರನಾಗಲದನು | ಹನನಗೈದನು | ಇನಿತು ಗೋಮಂ ತಾದ್ರಿಯಲ್ಲಿ | ಸೆಣಸುತೀರ್ದನು || ೩ ||

|| ರಾಗ ಭೈರವಿ ತ್ರಿವುಡೆತಾಳ || (ಧಾಟಿ ಮುತ್ತಿತಾಗಾ | ಪುರವನು ಸುತ್ತಿತಾಗಾ)

ಏನನೆಂಬೆ | ಧರಣಿಪ | ನೇನನೆಂಬೆ || ಪಲ್ಲ|| ಅರರೆ ಮಧುಕೈಟಭರ ನೃಪಕುಲ | ಹರಣಭುಜ ಬಹುಶತಕರಾಜಿಯ | ಧುರಕೆ ಮಿಗಿಲೆಂದುಲಿಯ ಲಮರರು | ಸರಿದನಸ್ತಾಚಲದಿ ಹರಿ ಹರಿ | ಯರಿತುಪಾಯವನೊಂದ ನಣ್ಣನ | ಕರವ ಪಿಡಿದರುಹುತ ಪ್ರವರ್ಷಣ | ಗಿರಿಯನೈದಗ್ರದೊಳಗಿರಲತಿ | ಭರದೊಳಡಗಿದರಿತ್ತ್ರಯಾದವ | ಧುರಗಲಿಗಳಲ್ಯಲ್ಲಿ ತಾ| ನೇನನೆಂಬೆ ||೧|| ಜರಾಸಂಧಾಖ್ಯನನ್ನೆಗ | ಹರಿಬಲರ ಪುಡುಕಾಡಿ ಕಾಣದೆ | ಭರಿತಚೋ ದ್ಯವ ತಾಳಿ ಯೋಚಿಸು| ತುರಿಯು ಗುಳಿಕಂಗಳಲಿ ಪಗೆಗಳ | ತರಿವ ತಂತ್ರವ ಪಣ್ಣಿ ಭೂಧರ | ಉರಿಸತೊಡಗಿದಡಾಗ ಜ್ವಲನರೆ | ಮರಗಳತಿ ಸತ್ವಗಳ ಹೋಮಿಸು | ತಿರಲು ಯಾದವರೈದಿ ಮಥುರಾ| ಪುರವ ಸೇರ್ದರು ಭರ ದೊಳದನಾ | ನೇನನೆಂಬೆ || ೨ ||

|| ಭಾಮಿನಿ ||

ಇರುಳಿನಲಿ ಗೋಪಾತ್ಮಜರು ಜನ |ರರಿಯದಂದದೊಳಾ ಪ್ರವರ್ಷನ| ಗಿರಿಯ ಶಿಖರದಿ ನಿಂದು ದ್ವಾರಾವತಿಗೆ ಲಂಘಿಸುತ || ಮೆರದಿರಲಿಕೀಜೆ ಯೊಳು ಮಾಗಧ | ನರಿಗಳಗ್ನಿಯೊಳಳಿದರೆನ್ನುವ | ಹರುಷದಲಿ ಸ್ವಸ್ಥಾನ ಗೈದಿದನೇನ ಬಣ್ಣಿಪೆನು || ೧ ||

ಒಂದನೇ ಸಂಧಿ ಸಮಾಪ್ತಿ; ಪದ್ಯಗಳು ೨೭೫.



# ಎರಡನೆ ಸಂಧಿ.

॥ ರಾಗ ಭೈರವಿ ಝಂಪೆತಾಳ ॥

ಇತ್ತಲೊಂದಿನ ಬ್ರಹ್ಮ । ದತ್ತನೊಡ್ಡೋಲಗವ । ನಿತ್ತನತಿವೈಭವದಿ । ವೃತ್ತಿಕಾಷ್ಣನದಿ ॥ ೧ ॥ ಸಬಲನೆನಿಸುತ ಹಂಸ । ಡಿಬಿಕಾದಿ ಪುತ್ರರೊಡ । ನಭವಗತಿಭಕ್ತನಾ । ನಿಭನಂತಿರಲ್ಕೆ ॥ ೨ ॥ ಮುರಹರನ ಸೊಕ್ಕುಗಳ ॥ ಮುರಿಯಬೇಕೆಂದೆಣಿಸಿ । ಕರದೆಂದ ದೂರ್ವಾಸ । ವರಮುನಿಯನಾಗ ॥ ೩ ॥ ಹರಿಯೆಡೆಗೆ ತೆರಳಿ ತನ । ಗುರೆ ಕರವ ತೆರಲೆಂದು । ಒರದಾತನಭಿ ಮತವ । ನರಿತು ಬಹುದೀಗ ॥ ೪ ॥ ತೊಡಗುವರು ಮುಖವೊಂದ । ನೊಡನೆ ಮಗೆ ಕಪ್ಪವನು । ಕೊಡದಿರಲು ಬಾಳಲೆಡೆ । ಬಿಡೆವೆಂದು ತಿಳುಹಿ ॥ ೫ ॥ ಕ್ಷಣದೊಳೈತಹುದೆನಲು । ಮುನಿಪನತಿ ಕೋಪಿಸುತ । ಘನಬೇಗ ಬರುತೀರ್ದ । ವನಜಾಕ್ಷನೆಡೆಗೆ ॥ ೬ ॥

|| ರಾಗ ಏಕತಾಳ || (ಧಾಟಿ—ನೀರೆ ಸುಗುಣೆ ದಯದೋರುತ ನೀ ಪೇಳ )

ವರ ದೂರ್ವಾಸನ ಭರವನು ಪರಿಕಿಸಿ । ಹರಿವಿಷ್ಟರವಿಳಿದು ॥ ಎರಗುತಲಾಸನ । ವಿರಿಸಿ ಸಪರ್ಯೆಯ । ವಿರಚಿಸುತಿಂತೆಂದ ॥ ೧ ॥ ಏನಾಶ್ಚರಿ ನಿಮ್ಮಾನನ ದಾರುಣ । ವೇನತಿ ರುಷವೇನು ॥ ದಾನವರುಪಟಳವಿುರ್ಪುದೆ ತವಕದೊ । ಳೇನಿಲ್ಲಿಗೆ ಬರಲು ॥ ೨ ॥ ಪ್ರಳಯುದ ಭೈರವನಂದದಿ ರೌದ್ರವ । ತಳೆದುಜ್ಜುಗವೇನು ॥ ತಿಳುಹಿಸಿ ತನಗತಿ ॥ ಮುಳಿಯದಿರೆಂದೆನೆ । ಘಳಿಲನೊರೆದ ಮುನಿಯು ॥ ೩ ॥

|| ರಾಗ ಕಾಂಬೋದಿ ಅಷ್ಟ ತಾಳ || ಧಾಟಿ — ಲಾಲಿಸಿ ಕೇಳೆನ್ನ ಸೊಲ್ಲ.)

ಲಾಲಿಸು ಯಾದವರಾಯ । ಗೋಪಿ—। ಬಾಲ ನಿನ್ನೊಳು ಪೇಳ್ವ ನುಡಿಯ ॥ ತಾಳಲಾರೆವು ಸ್ವಾಮಿ ಖೂಳರುಪದ್ರವ । ಬಾಳಲಿನ್ನೆಂತಯ್ಯೊ ನಮ್ಮಯ । ಕೋಳು ಹೋದುದು । ಕೇಳ್ವರಿಲ್ಲದೆ ॥ ಲಾಲಿಸು ॥ ೧ ॥ ವೃತ್ತಿಕ

ವನದೊಳಗೋರ್ವ । ಬ್ರಹ್ಮ- । ದತ್ತನೆನ್ನುವ ದುಷ್ಟನಿರುವ ॥ ಬಿತ್ತರಿಸುವ ದೇನಾ । ಧೂರ್ತಗೆ ನಾಲ್ವರು । ಪುತ್ರರಿರುತಿಹರದರೊಳೀರ್ವರು । ಕೃತ್ತಿವಾಸನ ಭಕ್ತರಾದರು ॥ ೨ ॥ ಅರುಹಲರಿದು ಮುರಮಥನ ! ದುರು—।ಳರು ಗೈವ ಕೃತ್ಯದ ಹದನ ॥ ಭರದೆನ್ನಾಶ್ರಮ ಪೊಕ್ಕು । ಪರಿಕಿಸಿ ವಧುಗಳ । ವರಸತೀತ್ವವನಳಿಸಿ ಸಮ್ಮಯ । ಸರುವ ವಸ್ತುವನಪಹರಿಸಿದರು ॥ ೩ ॥ ದುರುಳರಟ್ಟಿದರೆನ್ನನಿಲ್ಲಿ । ದೇವ—। ಭರಿತ ಕಪ್ಪವ ಕರಲಲ್ಲಿ ॥ ಚರಣಕಾನತನಾಗಿ ಮರೆ ಸೇರದಿರೆ ನಿನ್ನ । ಗರುವವನು ಭಂಗಿಸದೆ ಬಿಡೆನೆಂ । ದರುಹಿ ಪಡಿನುಡಿ ತಿಳುಹಲೆಂದರು ॥ ಲಾಲಿಸು ॥ ೪ ॥

|| ವಾರ್ಧಿಕ್ಯ ||

ತಡೆಯಲಾರೆವುಜೀಯ ಧಡಿಗರುಪಟಳವೆನ್ನು।ತಡಿಗಡಿಗೆ ಸುಯ್ಲಿಡುವ ಮುನಿಗಭಯವನ್ನಿತ್ತು । ಜಡಧಿಶಯನಂ ಮುದದಿ ಸಾತ್ವಕಿಯ ಕರದೆಂದ ಸಾಲ್ವ ನೃಪರೆಡೆಗೈದುತ ॥ ಬಿಡಿ ಮರುಳತನವಿನ್ನು ಯತಿಗಳನು ಬಳಲಿಸದೆ । ನಡೆಯುವುದು ಸನ್ಮಾರ್ಗದೊಳಗಲ್ಲದಡೆ ಬಲಿಯ । ಕೊಡುವೆನೈ ಶಸ್ತ್ರಾಸ್ತ್ರ ಮುಖದೊಳೆಂದರುಪಿ ಹದುಳವ ಮುರಿದು ಬಹುದೆನಲ್ಕೆ ॥ ೧ ॥

|| ಕಂದಪದ್ಯ ||

ಭರದೊಳು ಸಾತ್ವಕಿ ಹರಿಪದ । ಕೆರಗುತ ಮುನಿಯೊಡನೈತರಲಸವಸದಿಂದಾ ॥ ವರ ಸಾಲ್ವಾನ್ವಯ ತಿಲಕಂ । ಪರಿಕಿಸುತಾಸನ ವಿತ್ತುಪಚರಿಸುತಲಿಂತೆಂದಂ ॥ ೧ ॥

|| ರಾಗ ಕೇತಾರ ಗೌಳ ಝಂಪೆತಾಳ ||

ವಂದಿಸುವೆ ಜೀಯ ನಿನಗೆ । ಪೋಗೀಗ । ಬಂದೆಯೇನೈ ಮನಸಿಗೆ ॥ ಚಂದವಾಯ್ತಿದನು ವರೆಯೆ । ಗೋಪಾಲ । ನೆಂದನೇನರುಹು ಗುಣಿಯೆ ॥ ೧ ॥ ಲಾಲಿಸೈ ಭೂಪ ನೀನು । ಪೇಳ್ದೆ ಗೋ । ಪಾಲನಿಗೆ ತವ ವಾರ್ತನು ॥ ಆಳಾಗಿ ಸಾತ್ವಕಿಯನು । ಕಳುಹಿರುವ । ಕೇಳವನೊಳುತ್ತರವನು ॥ ೨ ॥ ಎಲವೊ ಚೋರನ ಚಾರನೆ । ಕಪ್ಪವನು । ನಳಿನಾಕ್ಷನೆವುಗೀವನೆ ॥ ವುಲತು ನಿಲುವನೆ ಸಮರಕೆ । ಮತ್ತೇನು । ತಿಳುಹಿ ಕಳುಹಿದನು ಗಳಿಕೆ ॥ ೩ ॥ ಕೇಳಯ್ಯ ವಿಧಿದತ್ತನೇ । ಮಾಧವನು । ಪೇಳಿ ಕಳುಹಿದ ವಾತನೆ ॥ ಖೂಳ

ತನಮಿಸ್ನಾದರೂ । ಬಿಟ್ಟ ಮುನಿ । ಜಾಲವಳಲಿಸದಿರಾರು ॥ ೪ ॥ ತೆರುವ
ಕಪ್ಪವ ಧುರದೊಳು । ಶಸ್ತ್ರಾಸ್ತ್ರ । ದೆರವಿನಲಿ ಕೈಕೊಳ್ಳಲೂ ॥ ಬರಲೆಂದ
ರಿನ್ನು ಹರಿಯ । ಮರೆಯ ಪೊಗು । ಕರವ ಜೋಡಿಸುವೆನಯ್ಯ ॥ ೫ ॥
ಅನಕ ತಾ ಗಜರುತೆಂದ । ತಸ್ಕರಗೆ । ಮಣಿಯುಲೆಂದೆಯ ಮದಾಂಧ ॥ ರಣ
ಕೈತರಲಿ ನೋಳ್ಪೆನು । ಪಗೆಗಳಿಂ । ತೆನಲಿಂತೊರೆದ ಹಂಸನು ॥ ೬ ॥

॥ ರಾಗ ಮಾರವಿ ಏಕತಾಳ ॥

ಛೀಸಾಯ್ತೆಮ್ಮನು । ದೂಷಿಸಿ ಕಪ್ಪವ । ಶ್ರೀಶನು ಕೊಡದಿಹುದು ॥
ವಾಸಿಯೊಳ್ಳಾತನ । ನಾಶಿಸಿ ಮಡಿದರ । ತೋಷಿಪ ಸಮಯವಿದು ॥ ೧ ॥
ಧೀರರೆ ಸಾತ್ವಕಿ । ಚೋರನ ಯುದ್ಧಕೆ । ಭೋರನೆ ಬರ ಹೇಳೂ ॥ ಮಾರಿ
ಪಡೆಗೆ ಹುರಿ । ಯೇರಿಸಿ ಸತ್ವವ । ತೋರುಷೆನೆನಲನಕ ॥ ೨ ॥ ವರಡಿಬಿ
ಕಾಖ್ಯನು । ಕೆರಳಿದ ನೀಶನ । ತರಿದಡೆ ತನ್ನಂತೆ ॥ ಧುರಕೈತರ್ಪನು ।
ಮುರಹರನಾಗಳೆ । ಶಿರವರಿಯುಲು ಸುಲಭ ॥ ೩ ॥ ಪೂತು ಮುಝರೆ ಹರಿ ।
ದೂತನೆ ನಿನ್ನನು । ಘಾತಿಪೆ ನೀಕ್ಷಣದಿ ॥ ಸಾತಿಶಯವಿದೆಂ । ದರಿಯುದೆ
ತಡೆಯುವ । ಕೋತಿಗಳಾರಿಹರೂ ॥ ೪ ॥ ಎಂದೊಡೊರೆದ ಗುಣ । ಸಿಂಧು
ಮದಾಂಧರೆ । ಸಂಧಾನವ ಮಾಡೆ ॥ ಬಂದವನೊಳಗಿದು । ಚಂದವೆನಾ
ಗೋ । ವಿಂದನ ಚರನ್ಯೆಸೆ ॥ ೫ ॥ ಆದಡೆ ನಿಮ್ಮನು ಭೇದಿಸಲಪ್ಪಣೆ । ಮಾಧ
ವನಿತ್ತಿಲ್ಲ ॥ ಕಾದುವದೇಕೆಂದ್ಯೆದಿದನಾಕ್ಷಣ । ವೋದದಿ ದ್ವಾರಕಿಗೆ ॥ ೬ ॥

॥ ಭಾಮಿನಿ ॥

ಎಲೆ ಪರೀಕ್ಷಿತ ಕೇಳು ಸಾತ್ವಕಿ । ನಳಿನನೇತ್ರಂಗೆರಗಿ ಖಳಕುಲ ।
ತಿಲಕರರುಹಿದ ಬಗೆಯನೆಲ್ಲವ ಪೇಳಿದಾಕ್ಷಣವೆ ॥ ಭಳಿರೆ ಕುನ್ನಿಗಳಿಂಗಿನಿತು
ಬಲು । ಬಲುಹುತನವಾಯ್ತೆಂದು ಯಾದವ । ಬಲವ ನೆರಹಿಸಿ ಬಲಿದ
ರೋಷದಿ ಬಲನಿಗಿಂತೆಂದ ॥ ೧ ॥

॥ ರಾಗ ದೇಶಿ ಅಷ್ಟತಾಳ ॥ (ಧಾಟಿ — ಏನಯ್ಯ । ಇಂಥದ್ದೇನಯ್ಯ.)

ಕೇಳಯ್ಯ । ಅಣ್ಣ ಕೇಳಯ್ಯ । ಕೇಳಣ್ಣ ದಯವಿಟ್ಟು ಪೇಳುವ ನುಡಿ
ಯ । ಖೂಳ ಸಾಲ್ವಾದ್ಯರು ತಿಳುಹಿದ ಬಗೆಯ ॥ ಪಲ್ಲ ॥ ವರ ವೃತ್ತಿಕಾ
ವಸದೊಳಗಿಪರಂತೆ । ಧುರಧೀರರಹ ಬ್ರಹ್ಮದತ್ತಾದ್ಯರಂತೆ ॥ ಧರಣಿಗೆ

ಕಂಟಕರಂತೆ ತಾ ಬಳಲಿ | ಒರೆದರು ಪರಮ ದೂರ್ವಾಸಾದ್ಯರಳಲಿ ‖ ೧ ‖ ಸಂಧಿಗಟ್ಟಿದೆನು ಸಾತ್ವಕಿಯುವರೆಡೆಗೆ | ಹಿಂದುಮುಂದರಿಯದೆ ಬೈದರು ತನಗೆ ‖ ಇಂದೆ ಒರಲಿ ಘುರಕಲ್ಲದಡೆಮಗೆ | ವಂದಿಸಿ ಬಾಳಲೆಂದೊರೆದರು ಕಡೆಗೆ ‖ ೨ ‖ ಇನ್ನನ್ಯ ಯೋಚಸೆ ಯಾಕೆ ಬೇಗೇಳು | ಸನ್ನದ್ಧನಾಗು ಪೊರಡಲಿ ಕಲಿಗಳು ‖ ಎನ್ನುತ ಮಣಿರಥವೇರೆ ರೋಷದೊಳು | ಅನ್ನೆಗ ಸಿದ್ಧವಾಯ್ತುಧಿಕ ಬಲಗಳು ‖ ೩ ‖

‖ ಭಾಮಿನಿ ‖

ಜನಪ ಕೇಳಾ ರಾಮಕೃಷ್ಣರು | ಕ್ಷಣದಿ ಪೊರಟೈತಂದು ಚದರಿದ | ರಿಸಿತು ವಾಣೀನದಿಯ ತಟದೊಳು ಖಳರ ಹೋರಟಿಗೆ ‖ ಅನಕ ತಾನದ ಕಂಡು ಖೂಳರು | ಕನಲುತಾರ್ಭಟಿಸುತ್ತ ಸೇನಾ | ವನಧಿ ಯೊಡನಿದಿರಾದ ರಿಳೆಯುಲ್ಲಾಡುವಂದದಲಿ ‖ ೧ ‖

‖ ರಾಗ: ಶಂಕ್ರಾಭರಣ ಮಟ್ಟೆತಾಳ ‖ (ಧಾಟಿ — ಬಂದನಾಗ ಭಾನುಕೋಪನೂ)

ಏನನೆಂಬೆನಂದಿನಳವಿಯ ‖ ಪಲ್ಲ ‖ ಏನನೆಂಬೆ ಖಳರ ನೆರವಿ | ತಾನೆ ಬಂದು ಯಾದವರನು | ಚಾಣಹಾನಿ ಮಾಡ ತೊಡಗಿ | ತೇನನೆಂಬೆ ‖ ‖ ಅನುಪಲ್ಲ ‖ ಸುರಗಿಚಾಪ ಮುಸಲ ಕುಂತ | ಪರಶು ಪರಿಘ ಶೂಲಾದಿ ಗಳ | ಕರದಿ ಧರಿಸುತಾರುಭಟಿಸಿ | ಕರಭನುತ್ತಮಾಂಕ ಸಾಲ್ವ | ವರ ತ್ರಿ ಗರ್ತನಾನು ಸಾಲ್ವಾ | ದ್ಯರು ಮಹಾನಿರುದ್ಧ ನಿಶಟ | ಸ್ಮರಗದಾದಿ ವೀರ ರೊಡನೆ | ಕರಿಗೆ ಕರಿ ರಥಕ್ಕೆ ರಥವು | ತುರಗಕಶ್ವ ಬೆರಸಿವ್ಯೊಯ್ದು | ದೇನ ನೆಂಬೆ ‖ ೧ ‖ ವರಮಗಧ ಶಪಳವಿಗೆಂದು | ಬರುತ ದೂರ್ವಾಸಾಖ್ಯನಿರವ | ನರಿತು ಜೆದರಿ ಪುರಕೆ ತಿರುಗಿ | ಭರದಿ ಹಾ ಹಾ ಹೀ ಹೀ ಯೆಂಬ | ಪುರು ಪ್ರಮಥರು ಗಜರಿ ದೈತ್ಯ | ಹರನ ಕಿವಿಯ ಕಚ್ಚುತಿರಲು | ಕೆರಳಿ ಘುಡಿ ಘುಡಿಸುತಲವರ | ಕರದಿ ಪಿಡಿದು ಬಿಸುಟೆ ರಜತ | ಗಿರಿಗೆ ಬಳಿಕ ಪುರವ ಸೇರ್ದ | ರೇನನೆಂಬೆ ನಂದಿನಳವಿಯ ‖ ೨ ‖ ಅನಿತರೊಳಗೆ ವೀರ ಹಂಸ | ಕನಲಿ ಸಿಂಹನಾದ ಗೈದು | ರಣಕೆ ಕೃಷ್ಣನನ್ನು ಕರೆಯ | ಲನಕ ಡಿಬಿಕ ರಾಮಗಿದಿರು | ಸೇಣಪತಿರಲು ಬ್ರಹ್ಮದತ್ತ | ನನಲನಯನನಂತೆ ಗಜರಿ | ಕ್ಷಣದಿ ಸಾತ್ವಕಿಯುನು ತಡೆಯೆ | ಕಣೆಯ ಮಳೆಯು ಸುರಿಸುತೆಂದ | ನಿಸಿತು ರೋಷ ಭರಿತನಾಗು | ತೇನನೆಂಬೆ | ನಂದಿನಳವಿಯ ‖ ೩ ‖

|| ರಾಗ ಕಾಂಬೋದಿ ಝುಂಪೆತಾಳ ||

ಎಲವೊ ಮುದಿ ಜರಡ ನೀ | ತಿಳಿದೆಮ್ಮೊಳಾಹವಕೆ | ಮಲತು ನಿಂದೆ
ಯು ಮೂಢ ಬರಿದೆ || ಗಳಿಗೆ ಮಾತ್ರದಿ ನಿನ್ನ | ತಲೆಗಡಿದು ಶಾಕಿನೀ | ಬಳಗ
ಕುಣಿಸದೆ ಬಿಡೆನು ಭರದಿ || ೧ || ಏನೊರದೆಯಧಮ ಕುಲ | ಹೀನ ವರ
ದಂತಿಯೊಳು | ಶ್ವಾನಗಳವಿಯು ಸದರವೇನೊ || ನೀನೇಕೆ ಸಾಪೆ ಫಡ |
ದಾನವಾರಿಯ ಕಳುಹು | ಕೇಣವಿಲ್ಲದೆ ನಮ್ಮ ಸೇರು || ೨ || ಬಿಡು ಮುಪ್ಪಿ
ನರೆಭ್ರಾಂತಿ | ಯೊಡನಲ್ಲ ಸಲ್ಲದೀ | ನುಡಿಯಾಡಿ ದೈವದ್ರೋಹದೊಳು ||
ಕೆಡೆಲೇಕೆ ನಡೆಯಲ್ಲ | ದಡೆ ತೊಡಗು ಯುದ್ಧವನು | ಬಡಕುರಿಯು ಹರಿಯ
ಮರಿಗಿದಿರೇ || ೩ || ಒರೆಯ ಬೇಡೆಲೊ ಹರಿಯು | ವರದಿ ಯೆಲ್ಲವನರಿತು |
ಧುರ ಧುರಂಧರನ್ನೈಸೆ ತಾನು || ವರ ಮಗಧಗಂಜಿ ಸಾ | ಗರದಿ ಮನೆಗೈದ
ತ | ಸ್ಕರನಿಂದಲಪ್ಪುದೇನೆಂದ || ೪ || ಮುಖದ ಕೊರತೆಯ ನೋಡೆ |
ಮುಕುರವಿಲ್ಲದಡಹುದೆ | ವಿಕಳಮತಿಯಂತೆ ಮಾಗಧನು || ಅಖಿಳ ಸಲ
ಸೋಲೆ ಹರ | ಸಖನಳುಕಿರುವನೆಂದು | ಪ್ರಕಟಿಸುವಡಜ್ಞಾನಿಗಹುದೆ || ೫ ||
ಆದಡೀಕ್ಷಿಸು ಸತ್ವ | ವೀ ಧುರದಿ ನಿನ್ನಸುವ | ಛೇದಿಸುತ ಯದುಕುಲಪ
ಸವರಿ || ಮಾಧವನ ಗೆಲಿದು ಜಯ | ದಾದಿ ಶಕ್ತಿಯನೊಲಿಸಿ | ಮೋದದಿಂ
ರಂಜಿಸುವೆನೆಂದು || ೬ || ಬಿಡೆ ದಿವ್ಯ ಕಣೆಗಳದ | ಕಡಿದು ಸಾತ್ವಕಿಯಾಗ |
ಘುಡಿಘುಡಿಸಿ ಹರಿಯ ಧ್ಯಾನಿಸುತ || ಕಡು ದುರುಳ ನಿಲ್ಲೆಂದು | ಧಡಿಗ
ನಿಂಗೆಸೆದ ಪ | ಲ್ಗಡಿದರ್ಧ ಶಶಿರೂಪ ಶರವ || ೭ ||

|| ಕಂದ ಪದ್ಯ ||

ಭರದಿಂದಾ ಕೂರ್ಗಣೆಯಾ | ದುರ್ಜಳನ ಮಸ್ತಕವ ತರಿದು ಬಿಸುಡಲಿ
ಕಾಗಳ್ || ಭರಿತಾಮರ್ಷದಿ ಡಿಬಿಕನು | ಕೆರಳುತ ಕರಕರದೊರೆದನು
ರೇವತಿವರನೊಳ್ || ೧ |

|| ರಾಗ: ಸೌರಾಷ್ಟ್ರ ತ್ರಿವುಡೆತಾಳ ||

ಬಾರೆಲವೊ ಬಲಭದ್ರಯುದ್ಧಕೆ | ತೋರು ಶೌರ್ಯಪರಾಕ್ರಮಂಗಳ |
ಘೋರನೇತಕೆ ಪಲ್ಗಿರಿವೆ ಮರ | ಹಾರ್ವನಂತೆ || ೧ || ಭಲರೆ ಡಿಬಿಕನೆ
ಗಳುಹುತೀಪರಿ | ಮಲತು ತವಪಿತನಿಳೆಗೆ ಮಲಗಿದ | ಒಳವ ಭಾವಿಸಿ

ಕೆಡುವುದೇತಕೆ । ನಿಳಯಕ್ಕೈದು ॥ ೨ ॥ ಸಾಕು ಸುಡು ಪನ್ನತಿಕೆಯನು ಜಯ । ಸೋಕದನಿಶವು ದೈವತಂತ್ರವೆ । ಟೀಕಿನಲಿ ತೋರ್ ಧೇನುಕಾದ್ಯರ । ನೂಕಿದಧಟ ॥ ೩ ॥ ದುಷ್ಟರುಗಳಿಂಗೆನಿತು ನೀತಿಯ । ಸ್ಪಷ್ಟಗೊಳಿಸಿದ ಡಹುದೆ ಮನಸಿಗೆ । ಇಷ್ಟವೆಲೊ ತಾ ಪುಟ್ಟು ಗುಣಗಳು । ಬಿಟ್ಟುದುಂಟೆ ॥ ೪ ॥ ಖರೆಯು ತವನುಡಿಯಾದಡೆಂದಿಗು । ತುರುವಕಾವಪ್ರವೃತ್ತಿಯಲ್ಲದೆ । ಧುರದಿ ಜೈಸುವಡರಿದು ಗೋವಳ । ತರಳರಿಂಗೆ ॥ ೫ ॥ ಎನಲು ಹಲಧರ ನೆಸೆಯೆ ಶರಗಳ । ನನಕ ತರಿದಾಶನನು ಪೊಯ್ವುತ । ಷಣಸುತಿರೆ ಹರಿಗೆಂದ ಹಂಸನು ಕಣದೊಳಿತ್ತ ॥ ೬ ॥

॥ ರಾಗ: ಕೇತಾರಗೌಳ ಝುಂಪೆತಾಳ ॥

ವೀರ ನೀನೇನೊ ಜಗದಿ । ಹರಿಯೆನುವ । ಚೋರ ದೇವಕಿಯುದರದಿ । ಘೋರನುದ್ಭವಿಸಿದಧಮ । ಕಂಸಾದಿ । ಶೂರರನು ತರಿದ ಮಹಿಮ ॥ ೧ ॥ ಎಲೆ ಮೂಢ ಲೋಗರೆನ್ನ । ಹರಿಯೆನುವ । ರಿಳೆಯ ಭಾರಕರ ಮುನ್ನ । ಅಳಿಸಿರುವೆನುಳಿದವರಸು । ಕೊಲುತಿಹೆನು । ಕಳದಿ ಪೇಳ್ ತವನೆಲೆಯನೂ ॥ ೨ ॥ ವೃತ್ತಿಕಾವಸದೊಳೆಸೆವ । ವರ ಬ್ರಹ್ಮ । ದತ್ತಸುತ ಹಂಸನೆನುವ ॥ ಸತ್ವಬಲಯುತನಪ್ಪೆನು । ಕರವಿತ್ತ । ಡರ್ಥಿಯಿಂ ಪಾಲಿಸುವೆನು ॥ ೩ ॥ ಕಪ್ಪವನು ಶಸ್ತ್ರಮುಖದಿ । ತೆರುವೆನದ । ನೊಪ್ಪಿಕೈಕೊಳ್ಳು ಧುರದಿ ॥ ಅಪ್ಪಳಿಪೆ ಬಪ್ಪರಾರು । ಬೆಂಬಲದಿ । ಧೊಪ್ಪನಡಗಿರೆ ಪ್ರಮಥರು ॥ ೪ ॥ ಮರುಳೆ ಬ್ರಹ್ಮಾದಿ ಸುರರು । ಎಮ್ಮ ಸಂ । ಗರಕಂಜಿ ನಡುಗುತಿಹರು ॥ ಸರಿಯೆಂತು ಯದುಕುಲಜರು । ಬರಿದೆ ನೀ । ನರಿತು ಮಣಿಯದೆ ಕೆಡದಿರು ॥ ೫ ॥ ವೀರದೂರ್ವಾಸಾದ್ಯರ । ಬೆಳಲಿಸಿದ । ಚೋರರಿಗೆ ಕಾಲನೂರ ॥ ತೋರಿಸುವೆ ನಿಲ್ಲು ನೀನು । ನೋಳ್ಪೆ ಸುರ । ವಾರವಂಜುವ ಬಗೆಯನು ॥ ೬ ॥

॥ ರಾಗ ಘಂಟಾರವ ಅಷ್ಟತಾಳ ॥ (ಧಾಟಿ—ತಾಳಿಪವ ೯ ಕಲ್ಮರಂಗಳನೆಲ್ಲ)

ಧಿರುರೆ ಗೋವಳ ಹುಡುಗನೀ ಕೊಳ್ಳೆಂದು । ಕೆರಳುತೆಚ್ಚಡೆ ದಿವ್ಯಕಣೆಗಳ । ತರಿದನಂತರ ಪಥದೊಳು ॥ ೧ ॥ ಮತ್ತೆ ಕುಂಡಲಿಶರ ಬಿಡಲದ ಗರುಡಾಸ್ತ್ರದಿಂ ಭಗ್ನಿಸಿದಡೆಚ್ಚನು । ಗೋತ್ರಬಾಣವ ರೋಷದಿ ॥ ೨ ॥ ಕುಲಿಶದಿಂ ಹರಿ ಪುಡಿಗೈದು ಮುನಿಗಳ । ಬಳಲಿಸಿದ ಫಲಕೊಳ್ಳೆನುತ ವಿಧಿ ।

ಹಿಳುಕನೆಚ್ಚನು ಗಜರುತ ‖ ೩ ‖ ಖುಲ್ಲನಾಗತದಸ್ತ್ರದೊಳಾಶರ । ಧಳ್ಳುರಿಯ ಧಾಳಿಯನು ತಣಿಸಿದ । ನೆಲ್ಲಿ ಪಡೆದಿಹೆಯೆಂದನು ‖ ೪ ‖

‖ ಭಾಮಿನಿ ‖

ಧಿಟ್ಟನಹೆಯೋ ವೀರ ಮಾಡಿ । ನ್ನಟ್ಟಹಾಸವನೆನುತ ಧನುಜಘ । ರಟ್ಟನಧಿಕಾಟೋಪದೊಳು ನಾರಾಯಣಾಸ್ತ್ರವನು ‖ ತೊಟ್ಟಡಾಶಾರ್ಙದಲಿದಿವವನು । ಬಿಟ್ಟು ತ್ರಿದಶರು ಚೆಲ್ಲಲಾ ಝುಳ । ಧಿಟ್ಟಿಣಿಸಿ ಭುಗಿಲೆಂದು ಬಹ ಶರವೀಕ್ಷಿಸಿದ ಖಳನು ‖ ೧ ‖

‖ ರಾಗ: ಭೈರವಿ ಏಕತಾಳ ‖

ಏನಚ್ಚರಿಯಿದು ಹರನೇ । ಹುಲು । ಬಾಣವು ಮೃತ್ಯುವ ತೆರನೇ । ಕ್ಷೋಣಿಯೊಳಟ್ಟುತ ಬಹುದು । ಕ್ಷಣ । ತಾನುಳಿಯುವ ಪಾಡರಿದು ‖ ೧ ‖ ಹೊತ್ತುವದೀ ಜಗವೆನುತ । ಭಯ । ವೆತ್ತು ರಥವನಿಳಿಯುತ್ತ ‖ ಶಸ್ತ್ರಾಸ್ತ್ರವ ಬಿಸುಟಲ್ಲಿ । ಮೇ । ಣತ್ತಿತ್ತೈದಲು ಬಳಲಿ ‖ ೨ ‖ ಫಲ್ಲಶರನಪಿತನಾಗ । ನೀ । ನಿಲ್ಲೆಲೊ ಶರಣೆನು ಬೇಗ ‖ ಕೊಲ್ಲೆನೆನುತ ಮೂದಲಿಸಿ । ರಣ । ಮಲ್ಲನನಟ್ಟಿದ ಜರೆಸಿ ‖ ೩ ‖ ಪ್ರಾಣದ ಬಯಕೆಯೊಳೋಡಿ । ಜಗು । ನಾ ನದಿಯನು ತಾನೋಡಿ । ಮಾಣದೆ ದುಮ್ಮಿಕ್ಕಿದನು । ಹರಿ । ತಾನಡಿಯಿಂದೊತ್ತಿದನು ‖ ೪ ‖ ರಂಗನ ಪದಸೋಕಲ್ಕೆ । ನಾ । ಗಂಗಳೆಯೆಡೆಯ ಸೇರಲ್ಕೆ ‖ ನುಂಗಲು ಧೃತರಾಷ್ಟ್ರಕನು । ರಣ । ರಂಗಕೆ ಹರಿ ಮರಳಿದನು ‖ ೫ ‖

‖ ರಾಗ: ಮಧ್ಯಮಾವತಿ ತ್ರಿವುಡೆತಾಳ ‖

ಅರಸಕೇಳಾ ಹಂಸನಪಗತ । ದಿಳವನೀಕ್ಷಿಸಿ ಸುರರು ಜಯವೆಂ । ದಿರದೆ ಕೈವಾರಿಸಲು ಕೇಳುತ । ಲುರುಪರಾಕ್ರಮಿ ಡಿಬಿಕನು । ಧುರವ ಬಿಸುಟು ‖ ೧ ‖ ಹರಿಯೆಡೆಗೆ ನಡೆತಂದು ವಂದಿಸು । ತೊರೆದ ಮಾಯಾ ಮನುಜ ವಿಗ್ರಹ । ಗರುಡವಾಹನ ಪರಮಪುರುಷನೆ । ಹಿರಿಯನಿದ್ದೆಡೆ ಯಾವುದು । ಕರುಣಿಸೆನಗೆ ‖ ೨ ‖ ಹೇಳು ಹಂಸನು ಪೋದ ಪಥವ ಕೃ । ಪಾಳು ಗಡ ನೀನೆನಲು ಲಕ್ಷ್ಮೀ । ಲೋಲನೆಂದನು ನಗುತ ನಡೆ ನಿ । ಭೃನ್ನಾಲಯಕೆ ಹಿರಿಯಾತನ । ಕೇಳಲೇಕೆ ‖ ೩ ‖ ಬೆಂಬಲಕೆ ತಾನಿಹೆನು ಗಂಸನ । ಹಂಬಲವ ಬಿಡು ಧರೆಯ ರಾಜ್ಯವ। ನುಂಬುದುಪಚಿತ ರಾಷ್ಟ್ರ

ಕೋಶವ । ನಂಬು ನಡೆ ನಾನೀವೆನೂ । ನೇಮವೆನಲೂ ॥ ೪ ॥ ಆದು ದಾಗಲಿ ಹೇಳು ಮಾಧವ । ಪೋವನೆಲ್ಲಿಗೆ ಹಿರಿಯ ತನಗೀ । ಮೇದಿನಿಯ ರಾಜ್ಯವಿದು ವಿಸ್ತೀ । ರ್ಣೋದಕಾಹಿತ ಸೇತುವೂ । ಕರುಣಾನಿಧಿಯೇ॥ ೫ ॥ ತಂದೆತಾಯ್ ಒಡ ಹುಟ್ಟಿದವರಿವ । ರೆಂದು ನೋಳ್ಪರೆ ರಾಜ್ಯಕಾಮುಕ । ರಿಂದು ಕೈಗಾಯುವೆನು ನಡೆ ತವ । ಮಂದಿರಕೆ ನೀನಂಜದಿ । ರೆಂದ ಹರಿಯೂ ॥ ೬ ॥ ಏಕೆ ಕೃಷ್ಣ ವೃಥಾಕಲಾಪವಿ । ದಾಕುಲನು ತಾನಲ್ಲ ಹಂಸನ । ಲೋಕವೇ ತನಗೈಸೆ ರಾಜ್ಯ ಶ್ರೀ । ಕರನೆ ಭಯವಿಲ್ಲ ನೀ । ಕೊಲುವೆಯೆಂದೂ ॥ ೭ ॥ ಕೇಳು ಯಮುನೆಯೊಳಣ್ಣನಿರವನು । ಹೇಳು ವಳು ನಿನಗೆಸಲು ನೃಪಸಿರಿ । ಲೋಲನಾಜ್ಞೆಯೊಳೈದಿದನು ಕೃಷ್ಣ । ಗಾಲ ತಡೆಯುದೆ ಹಂಸನ ಶೋಧಿಸುತ್ತ ॥ ೮ ॥

|| ವಾರ್ಧಿಕ್ಯ ||

ಭರಿತ ಶೋಕಾತುರದಿ ಕರಕರದು ಹಂಸನಂ । ಪರಮ ಕಾಳಿಂದಿ ಯೊಳಗರಸಿ ಕಾಣದೆ ಜಲವ । ನಿರದೆ ಕದಡುತಲೆನ್ನ ಪೊರಗಿರಿಸುತೆಲ್ಲಿಯಡ ಗಿದೆಯು ಬಾರಣ್ಣದೇವ ॥ ಒರೆಯುದೇಶಕೆ ಸುಮ್ಮನಿಹೆಯೆಂದು ಪಾತಾಳ । ವರಿಗೆ ಪರಿಕಿಸಿ ಕಾಣದಿರಲಾತ ನಾಲಗೆಯು । ಕರದಿ ಪಿಡಿದೆಳದಿನ್ನು ಬಾಳ ಲೇಕೆಂದೆನುತಲಾತ್ಮಹತ್ಯವ ಗೈದನು ॥ ೧ ॥

|| ಭಾಮಿನಿ ||

ಇತ್ತಲಾ ಮುರಮಥನ ಮೂವರು । ಧೂರ್ತರೀತೆರನಳಿಸಲಾ ಮುನಿ । ಪೋತ್ರಮರು ಜಯವೆಂದು ಪೊಗಳಲು ಒಳಿಕಲೆಲ್ಲವರ ॥ ಚಿತ್ತವನು ಸಂಪೂ ರ್ಣಗೊಳಿಸುತ । ಭಕ್ತವರದಾಯಕನು ಯದುಬಲ । ದೊತ್ತಿನಲಿ ತಾನೈದಿ ದ್ವಾರಾವತಿಯೊಳಿರುತಿರಲೂ ॥ ೧ ॥ ಹಿಗ್ಗದೇ ತನ್ನನು ಬಯಸಿ ಬಹ । ರುಗ್ಮಿಣಿಯೆ ಮೊದಲಾದ ಸ್ತ್ರೀಯರ । ಲಗ್ನಗೈದತಿ ದುಷ್ಟರಹ ಮುರನರಕ ಬಾಣಾದಿ ॥ ಅಗ್ಗಳಿಗರನು ತರಿದು ತಲೆಯನು । ಬಗ್ಗಿಸುವ ಸಜ್ಜನರ ಪಾಲಿಸಿ । ಸಗ್ಗಿಗರ ದಾತಾರನೆಸೆದನು ಪರಮವೈಭವದಿ ॥ ೨ ॥

|| ರಾಗ: ಕಾಂಬೋಧಿ ಝಂಪೆತಾಳ ||

ಪೃಥ್ವಿಪತಿಕೇಳ್ ಶಕ್ರ । ಪ್ರಸ್ತದೊಳಗೆಸೆವ ಯಮ । ಪುತ್ರನುರೆ ವೈಭವದ ಬಗೆಯ ॥ ವಿಸ್ತರಿಸಲರಿದು ಮಯ । ನಿತ್ತ ಮಂಟಪದೊಳಗೆ ।

ಯಿತ್ತನೋಲಗವೊಂದು ದಿವಸ ॥ ೧ ॥ ನರಭೀಮ ನಕುಲರೊ । ಪ್ಪಿರಲಿಕ್ಕೆಲದಿ ದೃಪದ । ತ೦ಳೆಯೇರ್ದಳು ತೊಡೆಯಮೇಲೆ ॥ ತರಳರಿರೆ ಮುಂದೆ ಸಾದರದಿ ಸೌಭದ್ರಾದಿ । ತರುಣಿಯರು ರಂಜಿಸಿದರಲ್ಲಿ ॥ ೨ ॥ ಇಂತಿರುವ ಸಭೆಯೆಡೆಗ । ನಂತದಿಂದಿಳಿವ ರವಿ । ಯಂತೆ ನಾರದನೈತರಲ್ಕೆ ॥ ಅಂತಕಾತ್ಮಜ ಕಾಣು । ತಿಂತು ವೈಯಿಕ್ಕಿ ಮತಿ । ವಂತನಾಸನವೇರಿಸಿದನು ॥ ೩ ॥ ಈರೆಂಟು ಪೂಜೆಗಳ । ಭೋರನೆಸಗುತಲೆಂದ । ನಾರದಾಂಕನೆ ಭರದೊಳಿಲ್ಲಿ ॥ ಸ್ವಾರಿಯಾಗುವಡೇನು । ಕಾರಣಗಳೆಲ್ಲಿ ಪೊಸ । ವಾರತೆಗಳರುಹು ತನಗೆಂದ ॥ ೪ ॥ ಹದುಳವೇ ತವಜ್ಞಾತಿ । ಸುದತಿಪುತ್ರರಿಗೆಲ್ಲ । ಕದನಸಗಲಿಗಳಿಗೆ ಪುಳಕಿತವೇ ॥ ಅಧಿಕ ಸೌಭಾಗ್ಯವಿರ । ಲೊದಗಿಹುದು ಕೊರತೆಯೊಂ । ದದನರುಹಲೈತಂದೆನಿತ್ತ ॥ ೫ ॥ ಇಂದ್ರ ವರುಣಾದಿ ಸಭೆ । ಯಂದವನು ನೋಡಿ ರವಿ । ನಂದನಾಸ್ಥಾನಕೈತರಲು ॥ ಸಂದರ್ಪೈ ಸ್ವರಕೆ ಹರಿ । ಶ್ಚಂದ್ರಾದ್ಯರಧ್ವರದೊ । ಳೆಂದ ತವಪಿತ ನಳಲಿ ಹೊರಳಿ ॥ ೬ ॥ ಎನಲದಕುಪಾಯವೇ । ನೆನಗರುಹು ನಡಸಿದಪೆ । ನೆನುತ ಧರ್ಮಜನೆಂದಡನಕ ॥ ಜನಪ ಕೇಳ್ ಚಿಂತಿಸದಿ । ರನುಜರೊಟ್ಟೊಡಗೂಡಿ । ಕ್ಷೊಣಿ ರಾಜಾಧ್ವರವ ತೊಡಗು ॥ ೭ ॥

|| ಭಾಮಿನಿ ||

ಆ ಮಹಾಕ್ರತು ವರವನೀ ಮಾ । ಡಾಮಹೀಶ್ವರ ಪಂಕ್ತಿಯಲ್ಲಿ ನಿ । ರಾಮಯನು ನಿಮ್ಮಯ್ಯನಿಹನು ಸತೇಜದಲಿ ಬಳಿಕ ॥ ಸೋಮವಂಶದ ರಾಯರೊಳಗು । ದ್ದಾಮರಹ ನಿಮಗೇನರಿದು ಗುಣ । ಧಾಮಹರಿಯನು ಕರದು ತಹನದಕೆಂದು ತೆರಳಿದನು ॥ ೧ ॥

|| ರಾಗ: ಸೌರಾಷ್ಟ್ರ ತ್ರಿವುಡೆತಾಳ ||

ಇಳೆಯಧಿಪ ಕೇಳ್ ಯಮಜ ಮುನಿಪನ । ಕಳುಹಿ ಧೌಮ್ಯಾದಿಗಳಿಗರುಹುತ । ನಳಿನನೇತ್ರನ ಭಜಿಸುತಿರ್ದನು । ಕಳವಳಿಸುತ ॥ ೧ ॥ ಇತ್ತಲಸುರಾರಾತಿಯೋಲಗ । ವಿತ್ತನತಿವೈಭವದಿ ಯಾದವ । ರೊತ್ತಿನೊಳಗಾಗೋರ್ವ ನೋಲೆಯ । ನಿತ್ತನೆರಗಿ ॥ ೨ ॥ ಆರು ನೀನೆಲ್ಲಿಂದ ಬಂದನ । ನಾರು ಕಳುಹಿದರೇನು ಕಾರಿಯ । ವಾರಲಿಖಿತವಿದೆನುತ ಕೇಳಲು । ಚಾರನೆಂದ ॥ ೩ ॥ ವಂದಿಸುತಲಿಂತೆಂದ ಗಿರಿವ್ರಜ । ದಿಂದ ತವಪದದರುಶನಕೆ

ನೃಪ। ರಿಂದು ಕಳುಹಿದರೇನೆನಲು ಕೇ। ಳಿಂದಿರೇಶ ॥ ೪ ॥ ಎಕ್ಕತುಳದಲಿ ಕಾದಿ ಮಾಗಧ। ನಿಕ್ಕಿದನು ಸಂಕಲೆಯ ವೈರದಿ। ಸಿಕ್ಕಿದೆವು ಮುರಹರಿಯೆ ತವಮರೆ। ಯೊಕ್ಕೆವೈಸೆ ॥ ೫ ॥ ಕಾವುದೆಮ್ಮನು ಕರುಣದಲಿ ವರ। ಸೇವಕ ರನೆನುತಿರುವ ಸಮಯದಿ। ದೇವಋಷಿಯೈತರಲು ವಂದಿಸಿ। ಕಾವ ನಯ್ಯ ॥ ೬ ॥ ಧಾರುಣಿಯುಲೇನುಂಟು ಸಂಪ್ರತಿ। ಧಾರುಣೀಪತಿಗಳಲಿ ಪಾಂಡುಕು। ಮಾರರಂತಿಹರೆನುತ ಪೀಠವ। ನೇರಿಸಿದನು ॥ ೭ ॥ ಕಿರು ನಗೆಯೊಳಿಂತೆಂದ ಮುನಿ ನಿನ। ಗರಿವಿರದ ಪರಿಯುಂಟೆ ರಾಜಾ। ಧ್ವರವ ತೊಡಗುವನೆಮುಜನಯ್ಯನ। ಹರುಷಗೊಳಿಸೆ ॥ ೮ ॥ ಅಜಭವಾಸುರವಂದ್ಯ ಚರಣಾಂ। ಬುಜನೆ ನಿನ್ನನು ಕರೆಯ ಬಂದೆನು। ಬಿಜಯಗೈದುದ್ಧರಿಸು ನಂಬಿದ। ಭಜಕರನ್ನು ॥ ೯ ॥

॥ ವಾರ್ಧಿಕ್ಯ ॥

ಕೇಳಿ ತಲೆದೂಗುತಸುರಾರಾತಿ ಯುದ್ಧವನೊ। ಳಾಲೋಚನೆಯ ಗೈದು ಮಗಧ ಶಿಶುಪಾಲಾದಿ। ಖೂಳರಿಗೆ ಕಡೆಗಾಲ ತೋರಲಿದು ಸಮಯ ವಂದರಸರಟ್ಟಿದ ದೂತನ॥ ಬೀಳುಕೊಟ್ಟೆಮುರಮುನಿಯೊಡನೆ ರಥವಡರಿ ಯದು। ಜಾಲದೊಡಗೂಡಿ ಪೊರವಂಟನೇನೆಂಬೆ ಜನ। ಪಾಲನಾಯಕ ವಾಡಿಗಳು ವನಿತೆಯರ ದಂಡಿಗೆಗಳೊತ್ತಿನಲಿ ಬರುತಿರೆ ॥ ೧ ॥

॥ ಕಂದ ಪದ್ಯ ॥

ಮುರಹರನೈತರುವುದ ಕಂ। ಡರಸನನುಜರೊಡನೆರಗುತಲತಿ ಸಂಭ್ರಮದಿಂ ॥ ಕರಶರಲಂತಃಪುರದೊಳ್। ಕಿರುನಗೆ ಸೂಸುತಲೊರೆದನು ಖಳಕುಲಹರಣಂ ॥ ೧ ॥

॥ ರಾಗ: ಕೇತಾರಗೌಳಿ ಅಷ್ಟತಾಳ ॥

ಏನಯ್ಯಾ ಯಮುಜ ನಿ। ಸ್ನಾನನ ಬಳಲಿದು। ದೇನೆನ್ನ ಬರಿಸಿದುದು ॥ ದಾನವರೊಳು ಕುರು। ಸೇನೆಯೊಳ್ ವಿಗ್ರಹ। ವೇನಡಸಿತು ತಿಳುಹು ॥ ೧ ॥ ಇನಿತಿಲ್ಲ ಕೌರವ। ಧನುಜರ ವಿಗ್ರಹ। ವನಜನೇತ್ರನ ದಯದಿ॥ ಜನಕ ಗಿಲ್ಲವು ಸ್ವರ್ಗ। ವೆನುತ ನಾರದನೆಂದ। ನಿನಿಬರಿದ್ದೇನ್ ಫಲವು ॥ ೨ ॥ ಜೀಯ ಕೇಳದಕೊಂದು। ಪಾಯ ಪೇಳಿದ ರಾಜ ॥ ಸೂಯಾಧ್ವರವ

ಮಾಡಲು ‖ ರಾಯರಿಂದರ್ಘವ । ಪ್ರೀಯದಿಂದಾರ್ಜಿಸ । ಲಾಯವೇನರು ಹೆಸಗೆ ‖ ೩ ‖ ಎನೆ ನಗುತೆಂದನು । ಮುನಿ ಸಾಥನುರುಲೊಳು । ಜನಪನೀ ಸಿಕ್ಕಿದೆಯ ‖ ಧನವಸೀವರೆ ವೃಥಾ । ಮಣಿವರೆ ನೃಪರೆಲ್ಲ । ರಣದಿ ಜೈಸುವವರಾರು ‖ ೪ ‖ ಕೌರವಾದಿಗಳಿದ ಪೂರ್ವೈಸ ಬಿಡರತಿ । ಕ್ರೂರಮಾಗಧ ಚೈದ್ಯರ ‖ ಭಾರಿಸೈನ್ಯಗಳನೆ । ಧಾರುಣಿಯೊಳು ಗೆಲ್ವ । ವೀರರಿಹರೆ ನಿನ್ನೊಳು ‖ ೫ ‖ ಹಂಸಡಿಬಿಕ ಮುರ । ಕಂಸಾದಿದುಷ್ಟರ । ಧ್ವಂಸಿಸಿ ಮಗಧಗಂಜಿ ‖ ಹಂಸಭಾಸನೆ ಯದು । ವಂಶಜರೊಡನಬ್ಧಿಯಂಶದಿ ಮನೆಗೈದೆನು ‖ ೬ ‖ ಒರೆಯಲೇನೀಮುಖ । ಕುರೆಕಂಟಕರು ಚೀನ । ನರಜ ಬಾಹ್ಲಿಕಮುಖ್ಯರು ‖ ಇರಲಿ ಮಾಗಧ ಚೈದ । ರಿರುವರೆ ಪರರೊಳ । ಗುರುವರೆಂದೆನೆ ಭೂಪನು ‖ ೭ ‖

‖ ಭಾಮಿನಿ ‖

ಈಸು ಘನವೇ ಕೃಷ್ಣ ಯಾಗ । ದ್ವೇಷಿಗಳು ಪಿರಿದಾಗಲಿವಗಿ । ನ್ನೈಸಲೇ ವರರಾಜಸೂಯಾಧ್ವರಕೆ ಸನ್ಯಾಸ ‖ ಈಸು ದೈತ್ಯರು ನಿನ್ನ ಕೈಯಲಿ । ಘಾಸಿಯಾದರು ಮಗಧ ಚೈದ್ಯರು । ವಿಾಸಲಳಿಯರೆನಲ್ಕೆ ಪವನಜನೆಂದ ಘುಡುಘುಡಿಸಿ ‖ ೧ ‖

‖ ರಾಗಃ ಕೇತಾರಗೌಳ ಝಂಪೆತಾಳ ‖

ಧಿರುರೆ ಲಕ್ಷ್ಮೀಲೋಲನೇ । ಮಾಗಧನು । ಕರುಬನೇ ಚೈದ್ಯಬಲನೇ । ಕರುಣಿಸೆನಗಪ್ಪಣೆಯನು । ತರಿದು ಬಹೆ । ನುರೆ ಕೆಡಿಸದಿರು ವ್ರತವನು ‖ ೧ ‖ ಮುರಿವೆ ಮನ್ನೆಯರ ಗಳವ । ಛೇದಿಸುವೆ । ವರದ್ವೀಪಪತಿಗಳಸುವ ‖ ಕರವ ಹೊರಿಸುವೆನವರಲಿ । ಬೆದರದಿರು । ನೆರಹು ಪಾರ್ಥರ ಭರದಲಿ ‖ ೨ ‖ ಕಳವಳಿಸಬೇಡಪಣ್ಣಾ । ಬಂಧುಗಳ । ಕರಸುವುದು ಕಳುಹುತೆನ್ನ ‖ ಪರಮಯಾಗವು ನಡೆಯಲಿ । ಯೆನಲಾಗ । ನರನೆಂದ ಕಿರು ನಗೆಯಲಿ ‖ ೩ ‖ ಲೋಕರಕ್ಷಾಶಿಕ್ಷೆಗೆ । ಸಲ್ಲದಿರ । ಲೇಕೆ ಗಾಂಢೀವವೆನಗೆ ‖ ನಾಕೇಶರಸ್ತ್ರಂಗಳು । ಸುಡಲಿ ಹುಲು । ಲೋಕೇಶರಳಿಸದಿರಲು ‖ ೪ ‖ ತರುವೆನತಿ ಧನಕನಕವ । ಭೂಪರಿಂ । ಹರಹು ದಿಶೆ ದಿಶೆಗೆಮ್ಮವ ‖ ಗರವಿಗಳ ಶಿರವ ನರಿವೆ । ಸಾಧುಗಳ । ಪೊರೆವೆ ಖ್ಯಾತಿಯ ಮೆರಸುವೆ ‖ ೫ ‖ ಎನಲೆಂದ ಸಿರಿ

ಲೋಲನು | ದಂಡಧರ | ನಣುಗನೊಳು ನೇಮವನ್ನು ॥ ಅನುಜರಿಂಗಿತ್ತು ಕಳುಹು | ದಿಗ್ವಿಜಯ | ಕನಿತು ನೋಡವರ ಬಲುಹು ॥ ೬ ॥

॥ ಭಾಮಿನಿ ॥

ಎನೆ ಹಸಾದವೆನುತ್ತ ಪೂರ್ವಕೆ| ಅನಿಲಸುತನನುತ್ತರಕೆ ವರಫಲು | ಗುಣನ ಪಶ್ಚಿಮ ದಕ್ಷಿಣಕೆ ಮಾದ್ರಿಜರಕಳುಹಿದನು ॥ ರಣದೊಳೆಲ್ಲರ ಗೆಲಿದು ಕಪ್ಪವ | ನಿನಜಸುತನಿಂಗಿತ್ತು ಮಗಧಾ | ವನಿಪನಿರವನು ತಿಳುಹ ಲಿಂತೆಂದೊರೆದ ಹರಿಯೊಡನೆ ॥ ೧ ॥

|| ರಾಗ ಕಲ್ಯಾಣಿ ಅಷ್ಟತಾಳ || (ಧಾಟಿ—ಯಾಕಿನಿತುಸುರುವಿರಿ | ತನ್ನೊಳು)

ಏನ ಹೇಳಲಿ ಹರಿಯೇ | ಚಿತ್ತದೊಳು ದು | ಮ್ಮಾನ ಪೆಚ್ಚಿಃ ಗುಣಿ ಯೆ ॥ ಮಾಣದರ್ಥವನಾರ್ಜಿಸಲು ಸಿ | ನ್ನಾಣತಿಯ ತೆರನನುಜರಟ್ಟಿದ | ಮೇಣಧಿಕ ಲೋಗರ ಗೆಲಿದು ಕರ | ಕಾಣಿಕೆಯ ತಂದೆನ್ನೊಳರುಹಿದು | ದೇನ ಹೇಳಲಿ ॥ ೧ ॥ ಮಾಗಧನೀಯನಂತೆ | ಕಪ್ಪವ ಶಿರ | ಬಾಗಿಸಿ ಮಣಿ ಯನಂತೆ ॥ ಸಾಗದವನಲಿ ಕಲಹವೆನುತಲೆ | ದೂಗುವರು ತಲೆಯ ಮಮ ತೊಡಗಿದ | ಯಾಗವನು ಪೂರೈಸಿ ಕೊಡು ದಯ | ಸಾಗರನೆ ಸಾಗರ ಶಯನ ವಿಧಿ ॥ ಏನ ಹೇಳಲಿ ॥ ೨ ॥ ಬೆದರದಿರೆಲೊ ಮನದಿ | ಮಾಗಧ ನನ್ನು | ವಧಿಸಿ ಕೊಡುವೆ ದೃಢದಿ ॥ ಕದನ ವಿಜಯದ ಸೇಸೆಯಿಕ್ಕುತ | ಲದಕೆ ಭೀಮಾರ್ಜುನರ ಕನ್ನೊಡ | ನಧಿಕ ಪ್ರೇಮದಿ ಕಳುಹು ನೃಪ ಯಾ | ಗದ ಹೊರಿಗೆ ಸಲೆ ತನ್ನದೆಂದೆನ | ಲೇನ ಹೇಳಲಿ ॥ ೩ ॥

|| ರಾಗ: ಭೈರವಿ ಝಂಪೆತಾಳ ||

ನಯನವನುಜರು ಚಿತ್ತ | ಭಯ ಹರನೆ ನೀನಿನ್ನು | ಭಯವೇನು ನಿನಗೆ ಮಮ | ಜಯ ಸೋಲವೆನುತ ॥ ೧ ॥ ನರ ಭೀಮರನು ಹರಿಯು | ಕರಕಿತ್ತು ತರಳರಿವ | ರರಿಯುಡವರುರೆ ದಯದಿ | ಪೊರೆ ಯೆಂದನೆರಗಿ ॥ ೨ ॥ ದೈತ್ಯಾರಿಯುಜಾತ | ಶತ್ರುವನು ಸಂತವಿಸಿ | ಮತ್ತೆ ಪೊರಟನು ಭೀಮ | ಪಾರ್ಥರೊಡಗೂಡಿ ॥ ೩ ॥

|| ರಾಗ: ಮಾರವಿ ಏಕತಾಳ ||

ಭೂತಳಪತಿ ಕೇಳ್ | ಸ್ನಾತಕ ವ್ರತ ಮುನಿ | ಯಾ ತೆರದಿಂದವರು ॥ ಸ್ವಾತಿಶಯದಿ ಗಂ | ಗಾ ತಟವೇರುತ | ಲಾ ತಕ್ಷಣ ಮುಂದೆ ॥ ೧ ॥ ಬರು

ತಿರೆ ಮುಖವನು । ತಿರುಗಿಸಿ ಪೂರ್ವಕೆ । ಪರಿಕಿಸುತೂರುಗಳ ॥ ಹರುಷ ದೊಳೀಕ್ಷಿಸಿ । ಗಿರಿವ್ರಜ ಶಿಖರವ । ಸರಸರನಡರಿದರು ॥ ೨ ॥ ಘೋರನೆ ಮೂವರು । ಭೇರಿತ್ರಯವನು । ಬಾರಿಸಿದರು ಪೊಯ್ದು ॥ ಧಾರುಣಿ ವಲಯ ದೊ । ಳಾರವ ತುಂಬಿರ । ಲಾ ರಾತ್ರಿಯೊಳೆದ್ದು ॥ ೩ ॥ ಧರಣಿಪ ಮಗದೇ । ಶ್ವರನತಿ ನಡುಗುತ । ಕರಸಿದ ಬುಧ ಕುಲವ ॥ ನೆರೆದಾನಗಳಿ । ತ್ತುರೆ ತಛ್ಛಾಂತಿಗೆ । ವಿರಚಿಸುತಿರೆ ಮಖವ ॥ ೪ ॥ ಮುರಹರ ಕುಂತೀ । ತರಳ ರೊಡನೆ ಭೂ । ಸುರರೋಲ್ ಮೂರ್ಗಡವ ॥ ಮುರಿನೈತಂದರ । ಪರದ್ವಾರ ದೊಳಾ । ನರುಳನ ಸಭೆಗಾಗಿ ॥ ೪ ॥

॥ ಭಾಮಿನಿ ॥

ಬಪರಿಗರ ಕಂಡೆದ್ದು ಮಾಗಧ । ನವರನುಚಿತೋಕ್ತಿಯಲಿ ಮನ್ನಿಸಿ । ಜವದಿ ಮಧುಪರ್ಕಾದಿ ಪೂಜೆಯನೆಸಗಿ ಕುಳ್ಳಿರಿಸಿ ॥ ಎವೆಯನಿಕ್ಕದೆ ಪರಿಕಿ ಸುತ ನಿ । ವ್ಮವನಿ ಯಾವುದು ನಾಮವೇನರೆ । ಜವನಿಕೆಯಿದೇನರುಹಿ ರೆಂದಳಲಿದನು ಕಳವಳದಿ ॥ ೧ ॥

॥ ರಾಗ ಸೌರಾಷ್ಟ್ರ ತ್ರಿವುಡೆತಾಳ ॥

ಹೇ ಶಿವನೆ ವರ ಸ್ನಾತಕ ವ್ರತ । ವೇಷದವರಿವರಾರೊ ಕೈತವ । ಭೂಸುರರು ದೃಢ ಸತ್ವಯುತರೆನೆ । ಭಾಸಮುಹುದು ॥ ೧ ॥ ಸೂರೆಗೈದೀ ಪುರವನಪರ । ದ್ವಾರದಲಿ ಬರಲಹಿತವಲ್ಲದೆ । ಭೂರಿ ಹಿತಚಿಂತಕರೆ ಸರ್ವಥ । ಕಾರುಣಿಕರು ॥ ೨ ॥ ಹರ ನಳಿನಭವ ಸುರಪ ಮುಖ್ಯಾ । ಮರರು ಶತ್ರು ಗಳಲ್ಲ ವೀತೆರ । ದರಸರೊಳು ನಾ ಕಾಣೆ ಧಿಟ್ಟರ । ಘುರಕೆ ಬರಲು ॥ ೩ ॥ ಸದ್ಯ ಗಜಪುರದರಸರತಿ ಬಲು । ಹಿದ್ದವರು ತನಗಧಿಕ ಮಿತ್ರರು । ಯುದ್ಧ ಕೈತರರೆಂದು ಪಾಂಡವ । ರುದ್ಧಟದಲಿ ॥ ೪ ॥ ಯದು ಕುಲಜರೇನ್ ಲಕ್ಷ್ಯ ಗೋಪರ । ಸದೆಗ ಕೃಷ್ಣನದಂತಿರಲಿ ಸುಡು । ಕದನದುಕ್ತಿಯನಂಜಿ ಬಾಳು ವ । ನುದಧಿಯೊಳಗೆ ॥ ೫ ॥ ಎಂದು ತತ್ತರಗೊಂಡು ಮಗುಳಿಂ । ತೆಂದ ನಿಮ್ಮಿರವರುಹಿ ಕಪಟಿಗ । ರೆಂದು ತೋರ್ಪುದು ಧಿಟ ಸಟೆಯು ನೆನೆ । ಲೆಂದ ಹರಿಯು ॥ ೬ ॥

|| ರಾಗ; ಭೈರವಿ ಅಷ್ಟತಾಳ ||

ಮರುಳೆ ಮಾಗಧನೆಮ್ಮಯ । ದೃಢವ ಪೇಳ । ಲರಿದು ಶತ್ರುಗಳ ಕೈಯ ॥ ವರ ಸ್ನಾತಕ ವ್ರತ । ವರಸರಿಗಿಲ್ಲವೇ । ನರಿಯೆಯ ಶ್ರುತಿಶಾಸ್ತ್ರವ ॥ ೧ ॥ ಅರರೆ ಶತ್ರುಗಳೆ ನಾವು । ವಿಪ್ರರ ವಿಳಿ । ದರುಹೇನು ಪಗೆತನವು ॥ ಧರಣಿಯೊಳಾರುಪಾ । ಧ್ಯರು ನಿಮಗಿಲ್ಲವೆ । ಹಿರಿಯರು ಗುರು ಬುಧರು ॥ ೨ ॥ ಪೊಡವಿಪರೆಲ್ಲರನು । ಶೆರೆಯೊಳಿಟ್ಟ । ಕಡು ಹಗೆಯವರ ನೀನು ॥ ಬಿಡು ದುಷ್ಟ ವೃತ್ತಿಯ । ಬಿಡಲುಪದೇಶಿಪ । ಧಡಿಗರುಪಾಧ್ಯರ್ಕೈಸೆ ॥ ೩ ॥ ಭಲರೆ ನೀ ನೃಪರುಗಳ । ಬಾಂಧವನೊ ಕ । ರುಳ ಕೋಮಲನೊ ಗಾವಿಲ ॥ ಅಳಿಯನೊ ಚರನೊ ಚೊ । ಚ್ಚಲ ಸುತನಾಪ್ತನೊ । ತಿಳುಹು ನಿನ್ನಂಘವಣೆ ॥ ೪ ॥ ಅರಿಯೆಯ ಧರಣಿಯೊಳು । ಶಿಕ್ಷಾರಕ್ಷೆ । ಗುರೆ ಕರ್ತರಾವೇಗಳು ॥ ದುರುಳರೆಲ್ಲರ ಕೊಂದು । ಪರಿಪಾಲಿಸುವೆ ಧರ್ಮ । ವರಸರ ಶೆರೆಯ ಬಿಡು ॥ ೫ ॥ ವರ ಜಗದವನ ಶಿಕ್ಷಾ । ಯಜ್ಞದಿ ದೀಕ್ಷಿ । ತರು ಕೈತವದೊಳು ದಕ್ಷ ॥ ರುರೆ ನೀವೊ ನಾವೊ ಸಾ । ಕಿರಲಂತು ಪೇಳಿ ನಿ । ಮ್ಮರವಲ್ಲದಡೆ ತೆರಳೀ ॥ ೬ ॥ ಆದರಾಲಿಸು ಭೀಮನು । ಈತನು ಕೃಷ್ಣ । ನಾ ಧನಂಜಯನಿವನು ॥ ಕಾದಾಡು ಶವಮನ । ಕಾದವರೊಡನೆ ಸಂ । ಪಾದಿಸು ಜಯವ ನೀನು ॥ ೭ ]

|| ಭಾಮಿನಿ ||

ಕೇಳಿ ತಮ್ಮವರುಗಳನೀಕ್ಷಿಸಿ । ಕಾಲಯವನನು ಕೊಲಿಸಿದವ ನಿವ । ನಾಳುಗಳು ಬಹು ಬಲ್ಲಿದರಲ್ಕೈ ರಣ ಪಲಾಯನಕೆ ॥ ಮೇಲು ಜಗವನು ಮೇಣವನಿ ಪಾ । ತಾಳವನು ಹೊಗಲಿನ್ನು ಬಿಡೆ ಮಹ । ಕಾಲನಲ್ಲಾ ಭಾಗಕ್ಕಾನೆಂದೊರೆದ ತಲೆದೂಗಿ ॥ ೧ ॥

|| ರಾಗ: ರೂಪಕತಾಳ || (ಧಾಟಿ–ಮಾರಸುಂದರ | ಬಾರಸ್ವಾಕೆ)

ಓತುಕೇಳಿ । ರೀತನಿರವೆ । ಮ್ಮಾತನೀಶನು ॥ ಭೀತ ಶೌರಿ । ಜಾತ ಮಥುರಾ । ನಾತಗಳಿಯನು ॥ ಮಾತಿಲೇನು । ಪೌತ್ರನೆಮಗೆ । ನೀತಿ ಹೀನನು । ಭೂತಪತಿಯ । ಖ್ಯಾತಿವಂತ । ಜಾತಿಹೀನನು ॥ ೧ ॥ ಭೂರಿ ಕುಲ ಕು । ಠಾರನಿವನು । ಜಾರಚೋರನು । ಭಾರಿರಣದಿ । ತೋರಿಬಲುಹ ಹೋರಿಜಯವನು ॥ ತೋರದೋಡಿ । ವಾರಿಧಿಯನು । ಸೇರಿಬಾಳ್ದನು ।

ಭೋರನಿಲ್ಲಿ । ಸಾರಿ ಬಂದು । ತೋರ್ವನಧಟನು ॥ ೨ ॥ ಇತ್ತನೋಡಿ । ರೊತ್ತಿಲಿರುವ । ಕ್ಷತ್ರಿಕುಲಜರು ॥ ಸತ್ತಪಾಂಡು । ಪುತ್ರರೈಸೆ । ಪಾರ್ಥ ರೆಂಬರು ॥ ಮಿತ್ರರೆಮಗೆ । ಭಕ್ತರಿವಗೆ । ಮತ್ತೆ ನೆಂಟರೂ ॥ ಸತ್ವಯುತರು । ಹಸ್ತಿಪುರದ । ಪೃಥ್ವಿಪಾಲರು ॥ ೩ ॥ ಹಿಂದೆ ಕಪ್ಪ । ಕೆಂದು ಸೆಣಸ । ಬಂದ ತರಳಗೆ । ಮುಂದಿನವರು । ಹಿಂದುಮುಂದಿ । ನಂದವರಿಯದೆ ॥ ಇಂದು ಹರಿಯ । ಪಂದನುಡಿಗೈ । ತಂದರೆನ್ನುತ । ಮಂದಹಾಸ । ದಿಂದ ಪೌತ್ರ । ಗೆಂದ ಗಜರುತ ॥ ೪ ॥

॥ ರಾಗ ಕಮಾಚ್ ರೂಪಕತಾಳ ॥ (ಧಾಟಿ— ನಡೆಯೆಲೋ । ಮುರಾರಿಸುಖದೊಳು)

ಪದರವಲ್ಲವೆನ್ನ ಕೊಳುಗುಳ । ಹೇ ಕೃಷ್ಣಮರಳಿ । ಕೆಣಕಲಿಂತು ಲಜ್ಜೆಯಿಲ್ಲೆಲ ॥ ಪದರವೇನೊ ಬಧಿದೆ ತನ್ನೊ । ಳೊದಗಿಕಾದಲಮಮ ನಿನ್ನ । ಮದವ ತೋರು ಸುದತಿಯರೊಳು । ನಿಧನಗೊಳಿಪೆ ಪೋಗು ಜೋಕೆ ॥ ೧ ॥ ಕೊಳಲರಾಗರಹಿಯೊ ಹಳ್ಳಿಯ । ಸೂಳೆಯರೊಳೆಸೆವ । ಬಲಿದ ಹಾದರವೊ ಸುಕಲ್ಲಿಯ ॥ ಕಳಸುಗೂಳೊ ಸಮರಗೋವು । ಗಳೊ ಮೃಗಗಳೊ ಸುಭಟರೆಲ್ಲ । ಹಿಳುಕವಿದ್ಯೆಯರಿವೆಯೇನೊ । ಬಲಸಮರ್ಥ ನಹೆಯೊ ಕಳ್ಳ ॥ ೨ ॥ ತುರಗವೃಷಭ ವಧು ಸಮೀರಣ । ಕರಿ ಗಾರ್ಧ ಭಾಜ । ಗರಬಕಾದಿ ಭಟರಸೂದನ ॥ ಮುರನ ಹೋರಟೆಯೊ ಡಿಬಿಕನ । ಧುರದ ಬಳನೊ ಹಂಸನಿರವೊ । ನರನಹರಿಬ ವೇಸಿದಮಮ । ಹರಿಗೆ ನರಿ ಯೋಲೊದಗಿದೆಮಲ ॥ ೩ ॥

॥ ಭಾಮಿನಿ ॥

ಅಸಗನನು ಕೆಡೆತಿವಿದು ಕಂಸನ । ವಸನವೆಲ್ಲವ ಸೆಳದೆ ಗಡ ಮಾ । ಣಿಸಿದಿಯ್ಯೆ ಧಿಟಘಟ್ಟವಾಳ್ತಿಯ ವ್ಯೆಯಃ ಮೂಹೊರಡ ॥ ಮಸಗಿಬೀಸುವ ಕಂಸನಾನೆಯ । ನಸುಬಡಿದು ಮಲ್ಲರನು ಮರ್ಧಿಸು । ತಸಮುಶ್ವಶುರನ ತರಿದಧಟ ತೋರಥಮನೆನಲೆಂದ ॥ ೧ ॥

॥ ರಾಗ: ಮಾರವಿ ಏಕತಾಳ ॥

ಫಡ ಮೂಢಾತ್ಮಬರಿದೆ । ತವ । ಕಡುಹನು ಬಗುಳದಿರರಿದೆ ॥ ತೊಡಗು ಧುರವನೋಡುವೆನು । ತಲೆ । ಗಡರಿದಮಲನಿಳಿಸುವೆನು ॥ ೧ ॥ ಭರ್ಗ

ಸಖನೆ ಮೆಚ್ಚಿದೆನು ವರ| ವಿಗ್ರಹವೊಳು ನಿನ್ನವಸು || ನಿಗ್ರಹಿಸುತ ಪುತ್ರಿ| ಯರ ದುಃ| ಖಾಗ್ನಿಯು ತಣಿಸುವೆ ಬಾರೊ| ೨ || ಒರೆಯುದಿರೆಲೋ ಗರ್ವ ವನು | ಹಲ| ಧರನಿಂದಳಿದುಳಿದವನು ॥ ಪರಿಕಿಸಿದೆನು ಬಲುಬಾರಿ | ತವ| ಧುರಧೀರತ್ವವ ಹೋರಿ ॥ ೩ ॥ ಸುಡು ತವ ಗಳಿಕೆಯ ಕೃಷ್ಣ| ನಾ| ಕೆಡಹದೆ ಬಿಡೆ ಮುಕ್ಕಣ್ಣ || ತಡೆಯುಲಿ ಮಡಿದಭಟರನು | ನಿ| ನ್ನೊಡಲ ಬಗಿದು ಕುಣಿಸುವೆನು ॥ ೪ || ಎನಲಾರ್ಭಟಿಸುತ ಭೀಮ | ಮಗ| ಧನಿಗಿಂತೆಂದನು ರಾಮ || ದನುಜಾರಿಯು ಬಗೆಯರಿತು | ಪಗೆ | ತನದಿ ಕೆಡದಿರರೆ ಮರೆತು ॥ ೫ || ಹುಡುಗರೆ ಗೋವಳನೊಡನೆ| ವೃಥ| ಕೆಡದಿರಿ ಬಿಡಿ ನೇಹ ವನು |ಕಡು ಹೇಡಿಗಳ್ ಯಾದವರು| ಬಾಯ್| ಬಡಿಕರು ಲಜ್ಜಾಯುತರು ॥ ೬ ॥ ಅರಿತಿಹೆ ಮಾಧವನಿರವ | ನೀ| ನರುಹಲು ಬೇಡವೊ ಮತಿಯು ॥ ಪರಮಾನಂತವತಾರೀ| ಖಳ | ಹರಣನು ಕೇಳೀ ಶೌರಿ ॥ ೭ ॥

॥ ಭಾಮಿನಿ ॥

ಪಂಚವದನ ಸ್ವರೂಪ ನಿಖಳ ಪ್ರ| ಪಂಚರಕ್ಷಣ ನೀತನೇ ಗಡ| ಪಂಚವದನನ ಪಿತನೆ ಗಡ ವರ| ಪಂಚ ಮುಖನೆ ಗಡ|| ಪಾಂಚಜನ್ಯಾ ಧಾರಿಯೇ ಗಡ | ಪಂಚಮುಖನಾಂತಕನೆ ರಿಪುಕರಿ | ಪಂಚಮುಖನಿವ ನಾದಡುದಧಿಯೊಳಡಗಿಕೊಂಡಿಹನೇ || ೧ ||

|| ರಾಗಃ ಕಾಂಬೋದಿ ಝಂಪೆತಾಳ ||

ಎಲವೊ ಜಾಹಿರ ಮಗಧ| ಗಳಹುತೀಪರಿ ಕಾಲ| ಕಳೆಯಲೇತಕೆ ಕೆದನಕೊದಗು || ತಿಳಿದು ಮೂವರೊಳೋರ್ವ| ನೊಳು ಮಲೆತು ಕಾದು ನಿನ | ಗಳಿವು ನಿಶ್ಚಯವೆಂದ ಕೃಷ್ಣ ॥ ೧ ॥ ಕೇಳಿ ನೆರದಭಟರೀ| ಕಾಳಗವ ವಶ್ಯಕವೆ| ಬಾಳ ದುರ್ಯಶವಿಲ್ಲ ನೋಡಿ ॥ ಹೇಳಲೇನ್ ಕೃಷ್ಣ ಯದು ಜಾಲಕಂಜುವೆವು ನಿ ನ್ನಾಳುತನ ಪ್ರಕಟವದೆಯೆಂದು ॥ ೨ ॥ ತರಳನುರೆ ಪಾರ್ಥರಣ | ದಿರವನೇನರಿಯು ನೀ | ಮರುತಜನೆ ಬಲುಗೈಯ ವೀರ || ಧುರವಿತ್ತನಾತನೊಡ| ನರೆನಿಮಿಷ ಶಸ್ತ್ರಾಸ್ತ್ರ| ದುರಿಯುನಾನಲು ಶಕ್ತ ನಹನು ॥ ೩ || ಎಂದು ದರಹಸಿತ ಮುಖ | ದಿಂದ ವಸ್ತ್ರಾಭರಣ | ತಂವಲಂಕ ರಿಸಿ ಪ್ರತಿಭಟರ ॥ ಮುಂದಿಟ್ಟ ಲೇಪನಕೆ | ಗಂಧಾದಿ ಕರ್ಪೂರ| ಸಾಂದ್ರ ಕಂಪಿನ ಭರಣಿಗಳನು || ೪ ||

॥ ವಾರ್ಧಿಕ್ಯ ॥

ಬಳಿಕ ವಿವಿಧಾಯುಧಗಳಸಿಲಜನಿಗಿತ್ತು ಕಳ| ಕಿಳಿದು ತೋರಥಟ ಸುರಗಣ ಮೆಚ್ಚಲೆಂದು ಕೊಳು | ಗುಳಕೆ ಕವಳವ ನೀಡಿದಂ ಮಗಧ ಕಾರ್ತೀಕ ಶುದ್ಧ ಪಾಡ್ಯದೊಳಳುಕದೆ॥ ಇಳೆಯಧಿಪ ಕೇಳು ನೋಟಕರಾದ ರಲ್ಲಿ ಹರಿ | ಫಲುಗುಣರು ಪುರಬಾಹ್ಯದೊಳಗೆ ಜನಸಂದಣಿಸ| ಲೊಲಿದು ಹತ್ತಾಹತ್ತಿಗನುವಾದ ಪಟುಭಟನೊಳೆಂದನಾರ್ಭಟಿಸಿ ಭೀಮ ॥ ೧ ॥

॥ ಭಾಮಿನಿ ॥

ರಣದೊಳಾವುದು ಕೈದು ಹಿರಿಯು | ಬ್ಬಣವೊ ಪರಿಘವೊ ಸುರಗಿಯೋ ಡೆಂ | ಕಣೆಯೊ ಗಧೆಯೊ ಪಿಂಡಿವಾಳವೊ ಪರಶು ತೋಮರವೋ ॥ ಕಣೆಧನುವೋ ಕಕ್ಕಡೆಯೊ ಮುಷ್ಟಿಯೋ | ಹಣಿದು ಕಾವುದು ಸದರವದರಲಿ | ಕೆಣಕಿ ನೋಡಾ ತನ್ನನೆನಲಿಂತೆಂದ ಮಾಗಧನು ॥ ೧ ॥

॥ ರಾಗ: ಶಂಕರಾಭರಣ ಮಟ್ಟೆತಾಳ ॥

ಎಲವೊಹುಡುಗನಾವಕೈದು| ಗಳೊಳು ಕಾದಲೊಂದೆ ಬಲುಪು | ಕಲಿತನವೊ ಹೆಗ್ಗಳಿಕೆಯೆಂದು | ತಿಳಿಯಬೇಕದು ॥ ಭಳಿರೆ ಮಗಧನಸ್ತ್ರ ಶಸ್ತ್ರ | ದಳವೆ ಕಲಿಗೆ ತನ್ನ ಗಧೆಯ | ಚಳಕ ನೋಡು ಸದೃಶವಲ್ಲ | ಬಲೆನು ನಿನಗೆಲ ॥ ೧ ॥ ನದಿಯೊಳುರುಳಿ ಮಡುವಿನೊಳಗೆ | ಹುದುಗಿ ನಂಜನುಂಡು ಸರ್ಪ | ವದನ ಸೇರಿ ಬಾಳ್ದ ತಂತ್ರ | ವಿದಿರು ಸಾಕೆಲ ॥ ಯದುಕುಲಜರೊಳಂಜಿ ಬದುಕಿ | ದಧಟ ತೋರು ಬಲನು ದಯದಿ | ವಧಿಸದುಳುಹಿದಂತೆ ಬಾಳ | ಬಿಡೆನು ತಿಳಿದುಕೊ ॥ ೨ ॥ ದುರುಳ ದುರುಳೆಯನ್ನು ವರಿಸಿ | ಮರಸಿ ಕುರುಹ ತಿಂದು ಕೂಳ | ತರಿದು ಬಕನನೋರ್ವಳ್ಯೆವರ್ | ವರಿಸಿದಂಪವೆ ॥ ಜರೆಯ ದಯ ದಿ ಬೆಳದು ಹಗನ | ವರದಿ ನೃಪರ ಗೆಲಿದು ಸೆರೆಯೊ | ಳಿರಿಸಿ ಸರಬಲಿಯನು ಕೊಡುವ | ಪರಿಯನರಿತಿಹೆ ॥ ೩ ಹುಡುಗ ಸಾಕು ಹರಿಯು ತನ್ನ | ಕಡೆಯೊಳಿರುವನೆಂದು ನಂಬಿ | ಕೆಡದಿರಳಿವಿ ಮರವಲುಗಿಪ | ಕಡುಹಿವಲ್ಲೆಲ ॥ ಮಿಡಿದಧಿಕ ಖಳರು ಮದದ | ಹೊಡತದಿಂದ ಗಧೆಯೊಳಂತು | ಧಡಿಗರಿದರಿನ್ನದರೊಳು | ಕಡೆಯ ಗಾಲವು ॥ ೪ ॥ ಅರಿಯೆಯಿಂತು ಹರಿಯು ಕಾದಿ | ಶರಧಿ ಮನೆಯ ಗೈದನನಿತು | ಯಿರವ

ರಚಿಸು ಬೇರೆ ನಿಮ್ಮೊ । ಳೆರಕವಾಯ್ತಲ ॥ ಬರಿಯ ಮಾತಿಲೇನು ಫಲವು । ಧುರ ಸಮರ್ಥತೆಯನು ಹೆಣಗಿ । ಪರಿಕಿಸೆಂದು ಕರದನಾಗ । ಸರಳ ಮಳೆಯನು ॥ ೫ ॥ ಗಾಢಗರ್ವದಿಂದ ಮಗಧ । ನೋಡಿ ಭೀಮನೊಡನೆ ಖಾಡಾ॥ ಖಾಡಿಹಳಚಲಾಗ ತೊಡಗ । ಲಾಡಲೇನದ ॥ ಗೂಢವಾದಿ ತ್ರಿದಶರಿವರ । ಪಾಡಿಸವರ ಕಾಣೆವೆಂದು । ಕಾಡುತಿರಲು ನುಡಿದ ಮಗಧ । ರೂಢಿ ಪಾಲನು ॥ ೬ ॥

|| ಭಾಮಿನಿ ||

ಧೀರುರೇ ಜಗಜಟ್ಟಿ ರಾಜಕು । ಮಾರ ಚೌಪಟ ಮಲ್ಲ ಕುರುಕುಲ । ಕೈರವಾಮೃತ ಕಿರಣ ಧಿರುಧಿರು ಭಳರೆ ಧಣು ಧಣುರೆ ॥ ಭಾರಪಣೆ ಲೇಸಾಯ್ತು ನೀತಿ ಮು । ಖಾರವಿಂದದೊಳಿಂದ್ರಿಯಾದಿಗ । ಳಾರಿಸುತ ಶ್ರುತಿ ಶಿರದಿ ತತ್ವವನರಸುವಂತೆನಗೆ ॥ ೧ ॥



|| ರಾಗ: ಸಾವೇರಿ ಅಷ್ಟತಾಳ ||

ಮರುತಜ ಸಹಸಿಯ್ಯೆ ಸಲೆಧಿಟ್ಟ । ಸಾ । ಸಿರಗಜ ಸತ್ವನೆಂಬುದು ಸ್ಪಷ್ಟ ॥ ಧರೆಯೊಳು ನಿನಗೆಣೆಗಾಣೆನು । ತವ । ಧುರಧೀರತ್ವಕೆ ಬೆರಗಾದೆನು ॥ ೧ ॥ ಖರೆಯೆನಗೆಣೆಯಹ ವೀರರ । ಕಾಣ । ದುರೆ ಹಂಬಲಿಸುತಿದ್ದೆ ಪುರಹರ ॥ ಕರುಣದಿ ನಿನ್ನೊಡನೊದಗಿತು । ಈಗ । ಧುರಗಲಿತ್ವ ನೋಡಲಾಯಿತು ॥ ೨ ॥ ರಷದೊಳಂತೆನಲವರೀರ್ವರು । ನೀಲ । ನಿಷಧಕ್ಕೆ ಮಲವಂತೆ ಮಲತರು ॥ ಉಸುರಲೇನ್ ಹೆಣಗಿದರಂದಿಲಿ । ಧರೆ । ಕುಸಿವಂತೆ ಬಲು ಧಿಟ್ಟತನದಲಿ ॥ ೩ ॥ ಕಾದಿದಡಿನಿತ್ಯೈದು ದಿನದೊಳು । ತೋರ । ದಾದುದು ಜಯಸೋಲವಾರೊಳು ॥ ಮಾಧವನಯ್ಯನ ಬಲುಹನು । ಕೊಂಡು । ಸಾಧಿಸಜಜ್ಜಿಗವೆನಲಾತನು ॥ ೪ ॥

|| ವಾರ್ಧಿಕ್ಯ ||

ವರವೃಕೋದರನಾಗಲನಿಲರೂಪಧ್ಯಾನ । ಪರನಾಗಿ ಬರಸೆಳದು ಕರದಿಂದ ಮಾಗಧನ । ಎರಡು ಕಾಲನು ಹಿಡಿದು ಸೀಳಿ ಬಿಸುಟಾಕ್ಷಣವೆ ಸಂಧಿಸಿದಡನಿತು ಬಾರಿ ॥ ಸರತಿ ಮೀರೆಗೆ ಸೀಳ್ದು ಬಂಗಬಡುತಿರಲಸುರ । ಹರನು ಕರಯುಗಳ ಪಲ್ಲಟವಾಗಿ ಜೋಡಿಸಿದ । ಡರಿತುಮಾತೆರನೆಸಗಿ ತಿರುಹಿ ನೂರೆಂಟು ಸೂಳೆಳೆಗಪ್ಪಳಿಸಿದ ಬಳಿಕ ॥ ೧ ॥

|| ದ್ವಿಪದೆ ||

ಜನಪ ಕೇಳಾಭರದಿ ಮಗಧೇಶ್ವರನು । ಇನಜನಾಲಯಕೈದನೇಸೆಂಬೆನದನು ॥ ೧ ॥ ಧುರಕೊದಗಿ ಪದಿನೈದು ದಿನವಲ್ಲಿಗಾಯ್ತು ॥ ವರಮಗಧ ನರಸಿಯರ ಸಹಗಮನವಾಯ್ತು ॥ ೨ ॥ ಸಹದೇವನಿಂದ ಪಿತೃಸಂಸ್ಕಾರವನ್ನು ॥ ಬಹು ವಿಧದಿ ಗೈಸುತವಗಿತ್ತು ಪಟ್ಟವನು ॥ ೩ ॥ ಮುರಮಥನ ನಾಗ ಸೆರೆಬಿಡಿಸಿ ನೃಪರುಗಳ । ಹರಸಿ ಬೀಳ್ಕೊಟ್ಟು ಬೇಕಾದ ವಸ್ತುಗಳ ॥೪॥ ಕೈಕೊಂಡು ಕರಸಹಿತ ಚತುರಂಗಬಲವ । ಟೀಕಿನಿಂದಲಿ ನೆರಹಿ ಪೊರಟನೈದೇವ ॥ ೫ ॥

|| ಭಾಮಿನಿ ||

ಭೂವರನೆ ಕೇಳ್ ಯಮಜನಾಸುರ । ದೇವನೈತಹ ಭರವ ಕೇಳುತ । ಜೀವವೇ ಬಂದಂತೆ ಬಹಳಾನಂದದಲಿ ಮುಳುಗೀ ॥ ಆವ ಧನ್ಯನೊ ತಾನೆನುತ ಸ । ದ್ಭಾವಭಯಭಕ್ತಿಯಲಿ ವಂದಿಸಿ । ಮಾವಿನೋದಿತನನ್ನು ಕರತಂದುಪಚರಿಸುತೆಂದಾ ॥ ೧ ॥ ಬ್ರಹ್ಮರೂಪನೆ ನಾಭಿಕಮಲ । ಬ್ರಹ್ಮಯೋಗಿಯೆ ವದನವಿಹಿತ । ಬ್ರಹ್ಮ ಬಾಹುಕ್ಷತ್ರಿ ವೈಶ್ಯೋರ್ವಂಘ್ರಿಶೂದ್ರಜನೇ ॥ ಬ್ರಹ್ಮಚಾರಿ ಗೃಹಸ್ಥ ವನಗ । ಬ್ರಹ್ಮ ತದ್ವಿಪರೀತಹೇತುವೆ । ಬ್ರಹ್ಮವಾಕ ವೃತ್ತಿಯೆ ಜೆಸಸು ಮುಂದಿನ ಪಥವನೆಂದಾ ॥ ೨ ॥

॥ ರಾಗ: ಸೌರಾಷ್ಟ್ರ ತ್ರಿವುಡೆತಾಳ ॥

ಎಲೆ ಮಹೀಪತಿ ನಿನ್ನ ಯಜ್ಞ । ಸ್ಥಳಕೆ ಬಾಧಕರಿಲ್ಲ ವನದಲಿ । ಪುಲಿಯಿರಲು ಮೃಗಕುಲವು ಬಾಳ್ವುದೆ । ಕಲಹದಿಂದಾ ॥ ೧ ॥ ರಚಿಸು ಯಜ್ಞಾರಂಭವನು ನೃಪ । ನಿಚಯವನು ದಾಯಾದ್ಯರನು ಬರಿ । ಸುಚಿತ ವಚನದಿ ಹದುಳವಪ್ಪುದು । ಅಚಲಧವನೇ ॥ ೨ ॥ ಎನಲು ಧರ್ಮಜನೆರಗಿ ಮಾಧವ । ನನುಮತಿಯ ತೆರ ಚರರನಟ್ಟಿದ । ಮುನಿಗಳೆಡೆಗೋಲೆಯನು ಕಳುಹಿದ । ಜನಪರಿಂಗೇ ॥ ೩ ॥ ಬರಿಸಿದನು ಕುರುಕಟಕವನು ಕೇ । ಳರಸ ಬಣ್ಣಿಸಲರಿದು ಭೂಪರ । ಭರವ ಹರ ಬ್ರಹ್ಮಾದಿ ತ್ರಿದಶರು । ನೆರೆದು ದಾಗಾ ॥ ೪ ॥

|| ರಾಗ ಸಾಂಗತ್ಯ ರೂಪಕತಾಳ ||

ಅನ್ನೆಗ ಮಯ ವಿಶ್ವ । ಕರ್ಮರು ಕ್ರತುಶಾಲೆ । ಯನ್ನು ರಚಿಸೆ ಸುಲಕ್ಷಣದೀ ॥ ಕಣ್ವರೋಮಶ ಗಾರ್ಗ್ಯ । ಸನಕಾದ್ಯರೈತರೆ । ಮನ್ನಣೆ

ಗೈದನು ಯುಮುಜಾ ॥ ೧ ॥ ರಾಯ ಧರ್ಮಜ ಕುರು । ರಾಯಾದಿ ಭಟರಿಗಾ। ಯಾಯ ಕಜ್ಜದ ಒಡೆತನವಾ ॥ ಈಯಲು ಮುಖದ ದ್ವೈ । ಪಾಯನಾದ್ಯರು ಕೃಷ್ಣ । ರಾಯನಪ್ಪಣೆಯಂತೆ ತೊಡಗೇ ॥ ೨ ॥ ವೈಶಾಖ ಪೌರ್ಣಿಮ । ವಾಸರದಲಿ ಭೂಪ । ನಾ ಸುಯಜ್ಞದಿ ದೀಕ್ಷೆಯಾಂತಾ ॥ ಭೂಸುರರುರೆ ಮಂತ್ರ । ಘೋಷ ಪೆಚ್ಚಲು ಪುರೋ । ಧಾಶಾದಿ ಸಂಬಾಗದಿಂದಾ ॥ ೩ ॥ ಮೆರದುದಧ್ವರಶಾಲೆ । ಯರುಹಲೇನೇಳು ವಾ । ಸರವು ವೈದಿಕ ವಿಧಾನದಲೀ ॥ ಕೊರತೆಯಿಲ್ಲೆಂಬಂತೆ । ವರ ರಾಜಸೂಯವ । ವಿರಚಿಸಿದರು ಮೌನಿವರರೂ ॥ ೪ ॥

|| ವಾರ್ಧಿಕ್ಯ ||

ಜನಪಕೇಳಾಮುಖದ ಸಂಭ್ರಮವನೇನೆಂಬೆ । ದಣಿದರಮರರು ಹವಿರ್ಭಾಗವಂ ತಿಂದು ದ । ಕ್ಷಿಣೆಯಲೂಟದಲಾದರಣೆಯೊಳವನೀಸುರರು ಹಿಗ್ಗಿ ಪೊಗಳಿದರು ಹರಸೀ ॥ ಮುನಿವರರಿಗತಿ ತುಷ್ಟಿಯಾದುದೆಲೆ ಚಾಂಡಾಲ । ಜನಕೆ ಸಹ ತೃಪ್ತಿಯಾದುದು ಬಳಿಕ ಗಂಭೀರ । ಧ್ವನಿಯೊಳಿಂತೆಂದ ಧರ್ಮಜನಿದರೊಳಾರಗ್ರಪೂಜಾರ್ಹರೆಂದು ಭೇದೀ ॥ ೧ ॥

|| ರಾಗ: ಸೌರಾಷ್ಟ್ರ ಅಷ್ಟತಾಳ || (ಧಾಟಿ—ಮನಸಿಜಪಿತನೀನು ಮಾತೆಲ್ಲ)

ಎನಲೆದ್ದು ಸಹದೇವ ಕೈಯೆತ್ತಿ ನುಡಿದನು । ಕೇಳಿರೆಲ್ಲಾ । ಇಲ್ಲಿ ವನಜಾಕ್ಷನಿರಲರ್ಹರಾರಗ್ರಪೂಜೆಗೆ । ಕೇಳಿರೆಲ್ಲಾ ॥ ಅಣೋರಣೀಯನು ಮಹತೋಮಹೀಯನು । ಕೇಳಿರೆಲ್ಲಾ ॥ ಕೃಷ್ಣನೆನುವ ಮಹಾತ್ಮನ ಲೇಸು ಪೂಜಿಸಿದಡೆ ಕೇಳಿರೆಲ್ಲಾ ॥ ೧ ॥ ಈತನುಕ್ತಿಯು ಸೈ, ಸೈಯೆಂದೊಡಂಬಟ್ಟರು । ಕೇಳುತೆಲ್ಲಾ ॥ ಜನ ರಾತತೂಕ್ಷಣ ಪೀಠವೇರಿಸಿ ಕೃಷ್ಣನ । ಕೇಳುತೆಲ್ಲಾ ॥ ನೂತನ ಪಡಿಗದಿ ಚರಣವ ತೊಳೆದರು । ಕೇಳುತೆಲ್ಲಾ ॥ ಲಕ್ಷ್ಮೀನಾಥನಿಗೆರಗಿ ಪೂಜಿಸಿ ಸತ್ಕರಿಸಿದರು ಕೇಳುತೆಲ್ಲಾ ॥ ೨ ॥

॥ ಭಾಮಿನಿ ॥

ಭದ್ರಮುಖವಿಭವದಲಿ ಭುವನ ಚ । ತುರ್ದಶದ ಜನ ದಣಿದು ದೊಲಿದು ಜ । ನಾರ್ದನಗೆ ಕೊಡಲಗ್ರಪೂಜೆಯನದನು ಕಾಣುತ್ತಾ ॥ ಎದ್ದನಾ ಶಿಶುಪಾಲನೇರಿದ । ಗದ್ದುಗೆಯ ನೂಡೆಹೊಯ್ದು ಮೀಸೆಯ । ತಿದ್ದಿ ಸಿಂದನು ನುಡಿದನಾಸಭೆಯೊಳಗೆ ಕೈನೆಗಹೀ ॥ ೧ ॥

|| ರಾಗ: ಸೌರಾಷ್ಟ್ರ ತ್ರಿವುಡೆತಾಳ ||

ಕೇಳಿದಿರೆ ನೆರೆದಖಿಲ ಪೃಥ್ವೀ । ಪಾಲರೀ ಸಹದೇವನಾಡಿದ । ಬಾಲಭಾಷಿತವನು ಯುಧಿಷ್ಠಿರ । ನಾಳುತನವಾ ॥ ೧ ॥ ಆಲಿಸಿದಿರ್ವೈರ ಮುಖಕೆ ಗೋ । ಪಾಲನಾದನು ಪೂಜ್ಯನಿದಕನು । ಕೂಲರಾದಿರೆನುತ್ತ ಜರೆದನು । ಖೂಳತನದೀ ॥ ೨ ॥ ತರಳನೀ ಸಹದೇವನೊಲಿದಾ । ದರಿಸಿದರೆ ಗೋಪನನು ಹರಹರ । ಹಿರಿಯವರ ಮತಿಗೇಕೆ ಪಲ್ಲಟ । ಹರಿಯೊಳಾಯ್ತು ॥ ೩ ॥ ಹರಹಿಕೊಳುತಿದೆ ಜನನಿಕರ ಕಾ । ಹುರದ ನೆರವಿಯದಂತಿರಲಿ ಮುನಿ । ವರರು ಮುಗ್ಧರೆ ನೀವಿದಕೆ ಮನ । ವಿರಿಸಿದಿರಲ್ಲೈ ॥ ೪ ॥

॥ ಭಾಮಿನಿ ॥

ಹೀನಕುಲ ಸಂಜಾತನಾಶ್ರಮ । ಹೀನನಮಲ ಕ್ಷತ್ರಧರ್ಮ ವಿ । ಹೀನನಿಹಪರ ಲೋಕಗತಿಮತಿಹೀನ ಗುಣಹೀನಾ ॥ ಹೀನನಾಚಾರದಲಿ ಸುಕೃತ ವಿ । ಹೀನಸುರುತರ ಬಾಹುಸತ್ವ ವಿ । ಹೀನಗೇನೆಂದಿತ್ತರಗ್ರಾರ್ಪಣವನಿದನೆಂದಾ ॥ ೧ ॥

॥ ರಾಗ: ಕಾಂಬೋಧಿ ಝುಂಪೆತಾಳ ॥

ಎಲವೊ ಸಹದೇವ ನೃಪ । ತಿಲಕರಂತರದಿ ಗೋ । ವಳನಗ್ರಪೂಜಾರ್ಹನೇನೋ ॥ ಕುಲದೊಳಧಿಕನೊ ಕಳ್ಳ । ಕಲಿಯೊ ಬಲಯುತನೊ ನೀ । ತಿಳಿದೆಯೇನವನೊಳಿಹ ಗುಣವಾ ॥ ೧ ॥ ಅರಿಯದವನೀತ ಯಮು । ತರಳ ನೀನರಿತರಿತು । ಬರಿದೆ ಕೆಡಿಸಿದೆ ಮುಖವನಕಟಾ ॥ ಹಿರಿಯರಿದನೇನಗೈ । ದರು ನೃಪಾಲರೊಳು ಬಾ । ಹಿರನಿವನು ಪದಭ್ರಷ್ಟನೈಸೆ ॥ ೨ ॥ ತರಳರಿವದಿರು ಕೃಷ್ಣ । ನುರೆ ಪ್ರೌಢನೆನುತಲಾ । ಧರಿಸಿದೆಯ ಶಿಷ್ಟಯೋಗ್ಯತೆಯಾ ॥ ಅರುಹು ಗಾಂಗೇಯನಿವ । ನುರೆಧಾನ್ಯಭಟ್ಟನೆಲೆ । ಗುರುವಲ್ಲ ಸರ್ವಜ್ಞನಲ್ಲ ॥ ೩ ॥ ಮುನಿವರರು ಮನ್ನೆಯರು । ಜನಪರುರೆ ಕೂಡಿರಲು । ದನುಜಾರಿ ಯೋಗ್ಯನೆಂದಿಲ್ಲಿ ॥ ಇನಿತು ಪೂಜಿಸಿ ಕ್ರತುವ । ಹನನಗೊಳಿಸಿದ ಫಲವ । ಕ್ಷಣ ತೋರಿಸುವೆನೆಂದ ಗಜರೀ ॥ ೪ ॥ ವರವ್ಯಾಸ ತವ ಮನಕೆ । ಹರುಷವೇ ಕರವಿತ್ತೆ । ವರಸರೆಂದಲ್ಲದೀ ಭಟರ ॥ ಬ್ಬರಕಂಜಲುಂಟಿ ಯಾ । ದರು ಸರ್ವರಭಿಮಾನ । ವರಿಸಿದರೆನುತ್ತ ಹರಿಗೆಂದಾ ॥ ೫ ॥

॥ ರಾಗ: ಕೇತಾರಗೌಳ ಝುಂಪೆತಾಳ ॥

ಎಲೆಲೆ ಘಡ ಬಡ ಗೋವಳಾ । ಕೇಳಿತ್ತ । ಹುಲು ಭೀಷ್ಮ ಧರ್ಮ ತರಳಾ । ಬಲು ಜಡತ್ವದಿ ಕರದರೇ । ಬೆರತೆಲಾ । ಕಲಿಯೊ ಮೇಣ್ ನೃಪನೊ ಭಲರೇ ॥ ೧ ॥ ಸ್ನಾತಕವೃತ ಮುನಿಪನೇ । ಋತ್ವಿಜನೆ । ನೀತಿ ಯುತನಾಚಾರ್ಯನೇ । ಈತಗಳಿಗೂಟಸವಿಯಾ । ತಿಳಿವಲ್ಲ । ದೋತು ಧುರಕೊದಗಿರಿಯಾ ॥ ೨ ॥ ಅರಿಯುದವರಿಂದರಿಸಲೂ । ತವಸ್ಥಿತಿಯ । ನರಿಯಬೇಡೆಲೊ ಧರೆಯೊಳೂ ॥ ಕುರುಬರಿಗೆ ಗಾಜು ರನ್ನಾ । ಅಂತೆ ಮು । ಗ್ಧರಿಗಾಯ್ತು ಪೂಜ್ಯ ಕೃಷ್ಣಾ ॥ ೩ ॥ ಏಳೆಲವೊ ಪೀಠದಿಂದ । ಭೀಷ್ಮ ಭೂ । ಪಾಲಕೊಡನ್ನಾಟದಿಂದಾ । ಕಾಲಯವನಾದ್ಯರಸುವಾ । ಛೇದಿ ಸಿರು । ವಾಳುತನ ತೋರು ಬಲವಾ ॥ ೪ ॥

॥ ರಾಗ: ಭೈರವಿ ಏಕತಾಳ ॥

ಕ್ಷಿತಿಪತಿ ಕೇಳಾಸ್ಥಾನಾ । ಕದ । ಡಿತು ಜೊಬ್ಬೆಯ ಸುವಿಧಾನ ॥ ಚತುರಂಗದ ಬಲವೆರಸೀ । ಕೆದ । ರಿತು ಹೆಣಗಲು ನೃಪರಾಶೀ ॥ ೧ ॥ ಎಂದನನಕ ಸಹದೇವಾ । ಗೋ । ವಿಂದನವನಿಗಧಿದೈವಾ । ನಿಂದಿಸಿ ಕಾದುವಿರರರೇ । ಶಿವ । ನಂದವೆ ಭೀಷ್ಮನರಿಯಿರೇ ॥ ೨ ॥ ಸುಡು ಭೀಷ್ಮನ ಪೊಗಳಾಟಾ । ಬಿಡು । ಘಡ ಕೃಷ್ಣನ ಕೊಂಡಾಟಾ । ಕೆಡಿಸಿದೆ ನೃಪರಭಿ ಮಾನ । ಎನುತಡಲಿದ ಚೇದಿಪನವನಾ ॥ ೩ ॥ ವಿಕಟಭಟರೆ ನಿಲ್ಲಿರೆನುತಾ । ನೃಪ । ನಿಕರವಿದಿರು ಕಾದುತ್ತಾ । ಮುಖವಳಿಸುವಡನುವಾಗೇ । ನುಡಿ । ದಕುಟಿಲ ಭೀಷ್ಮನವರಿಗೇ ॥ ೪ ॥

॥ ರಾಗ: ಕೇತಾರಗೌಳ ಅಷ್ಟತಾಳ ॥

ಕೇಸರಿ ಸರ್ವಜ್ಞ । ಪಾಲಾದ್ಯರೀ ಗೋಪಿ । ಬಾಲನ ಚರಿತವನೂ ॥ ಖೂಳರಿವನ ವ್ಯರ್ಥ । ಚಾಳಿಸಿ ಧುರಗೈದು । ಹಾಳಾಗಿ ಪೋಪರಲ್ಲೈ ॥ ೧ ॥ ಈತನು ಪರಮ ಪು । ನೀತ ಸಾತ್ವಿಕತತ್ವಾ । ತೀತ ವಿಶ್ವಂಭರನೂ ॥ ಭೂತೇಶ ನಿಖಿಳ ಭೂ । ನಾಥನು ಪರಬ್ರಹ್ಮ । ಪೀತವಸನ ಶೋಭನೂ ॥ ವರಮಧು ಕೈಟಭ । ಹರ ಹಿರಣ್ಯಾಕ್ಷನ । ಕರಿಯಾಗಿ ತರಿದನೀತಾ ॥ ನರಹರಿ ರೂಪದಿ । ಹಿರಣ್ಯಕಶ್ಯಪುವ ಸಂ । ಹರಿಸಿದ ಪರಮಾತ್ಮನೂ ॥ ೩ ॥

ವಟುವಾಗಿ ಬಲಿಯ ಉ| ತ್ಕಟವಿಳಿಸಿದ ನೃಪ| ಕಟಕವ ರಾಮನಾಗೀ ॥
ಹಟದಿ ಮುರಿದ ವೀರ | ಭಟ ರಾವಣಾದ್ಯರ| ಪಟಹೃದ ರಘುರಾಮನೂ ॥ ೪॥
ಈಗ ದೇವಕಿಯುದ | ರಾಗಸಧಲಿ ಚಂದ್ರ | ನಾಗವುದಂತೆ ಬಂದೂ ॥
ಕೂಗುವ ದುಷ್ಟರ | ಸಾಗಿಸಿ ಕಾಲಗೆ | ಸಾಗರದಲಿ ಮೆರವಾ ॥ ೫ ॥
ಧುರದೊಳಲ್ಪರೆ ಕಂಸ | ನರ ಮುರಕಾದ್ಯರು | ತರಿದನಲ್ಲವೆ ಕೃಷ್ಣನೂ ॥
ಅರಿಯದೀತನ ಚೈದ್ಯ | ಜರದೆಂಬನೆಂದೆನ| ಲೊರೆದನು ದಂತವಕ್ರಾ ॥ ೬ ॥

॥ ರಾಗ: ಭೈರವಿ ಅಷ್ಟತಾಳ ॥

ಎಲೆಮುದಿ ಜರಡ ಭೀಷ್ಮಾ| ಏನೊರದೆ ಮೂ | ರಿಳೆಯೊಳಗ್ಗಳನೆ ಕೃಷ್ಣ | ತಿಳುಹಲೀತೆರದಿ ಗೋ | ವಳನ ಭಟ್ಟನೊ ಮೇಣೀ| ಹುಲು ಜೋಳವಾಳಿಗನೋ ॥ ೧॥ ಎಂದನಾ ಸೋಮದತ್ತ | ಗೋವಳನ ನೇ| ನೆಂದು ಶ್ಲಾಘಿಸಿದೆ ಧೂರ್ತಾ | ಇಂದೀತ ಭೂಪರ | ವೃಂದದಿ ಪೂಜ್ಯನೆ | ಕೊಂದರುಚಿತ ನಿನ್ನನು ॥ ೨ ॥ ಭಗದತ್ತನೊರೆದನೆದ್ದೂ | ಕ್ಮೊಯಿವನ ನಾ| ಲಿಗೆಯ ಪಾಲ್ಬೆಣ್ಣೆ ಕದ್ದೂ | ಬಿಗು ಮುದುಕಿಯರ ಸಂ| ಭೋಗಿಸಿ ತುರುಗಾವ | ವಿಗಡನಗ್ಗಳನೊ ಭೀಷ್ಮ ॥ ೩ ॥ ಕೇಳಿದ ಶಿಶುಪಾಲನೂ | ಸುಮ್ಮನೆ ನೀವು | ನರಿಯಂತೆ ನೋಳ್ಪುದೇನೂ | ಧುರಕೊದಗುವ ಸುಭ| ಟರ ಗೆಲ್ದು ಕೃಷ್ಣನ| ಕರ ಪಿಡಿದಿರಿಯಿರಿನ್ನೂ ॥ ೪ ॥ ಪ್ರಲಯಭೈರವನಂದದೀ ವಾಯುಜನೆದ್ದು | ಮುಳಿದೆಂದ ರೋಷದಲೀ | ಎಲವೊ ಸ್ವಾಮಿದ್ರೋಹಿ| ಗಳೆ ಕೊಂದು ಶಾಕಿನಿ | ಬಳಗಕುಣಿಸುವೆ ನಿಮ್ಮ ॥ ೫ ॥ ಎನುತಾ ಧರಿಸಿ ಗಧೆಯಾ | ಭೋಂಕನೆ ಯುದ್ಧ| ಕನುವಾಗಿ ನಿಲಲು ಭಯಾ| ಜನಪರಬ್ಬರ ಪೆಚ್ಚ | ಲನುನಯದಿಂ ಗಂಗಾ| ತನಯನೆಂದನು ಭೀಮಗೇ ॥ ೬ ॥

॥ ರಾಗ: ಶಂಕರಾಭರಣ, ಅಷ್ಟತಾಳ ॥ (ಧಾಟಿ—ಕಂಡನೂ ವಿಶ್ವರೂಪವಪದ್ಮನು)

ಲಾಲಿಸೀ | ಕ್ಷಮಿಸಲು ಬೇಕೀ—ಕಥೆಯಾ ॥ ಪಲ್ಲ ॥ ಲಾಲಿಸಿ ಕೇಳೀದುರುಳರೂ | ಲೋಕ—ಪಾಲನ ದ್ವಾರಪಾಲಕರೂ | ವಿಧಿ—ಬಾಲರ ಶಾಪವ | ತಾಳಿ ಮೂರ್ಜನ್ಮದಿ | ಖೂಳರಾದರು| ಲಕ್ಷ್ಮೀ| ಲೋಲ ನಪ್ಪಣೆಯಿಂದ ॥ ಅನುಪಲ್ಲ ॥ ಹಿರಣ್ಯಾಕ್ಷ ಹಿರಣ್ಯಕರಾಗೀ | ಮಡಿ—ದರು ದೈವದ್ರೋಹಿಗಳಾಗಿ | ಮತ್ತೆ—ಎರಡನೆ ಜನ್ಮಕೆ ಸಾಗೀ | ಪತ್ತು—

ಗೊರಳ ಘಟಶ್ರವಣರಾಗಿ | ರಘು — ವರನಿಂದಳಿದರೀಗ | ಧರೆಯೊಳೀತೆರ ಪುಟ್ಟಿ | ಹರಿಯೊಳು ವೈರದಿ | ಜರೆವರೀಕುನ್ನಿಗ | ಳಾಲಿಸೀ ‖ ೧ ‖ ಜನಿಸಲು ಚಾತುರ್ಭುಜವನೂ । ಲೋ— ಚನಮೂರ ಧರಿಸಿದನಿವನೂ । ಸುರ— ಮುನಿಯುಕ್ತಿಯಂತೆ ಮಾಧವನೂ ¦ ಅದ — ಕ್ಷಣದಿ ಮಾಣಿಸುತಭಯ ವನೂ । ಕೊಟ್ಟ— ನಿನಿತಪರಾಧ ನೂ | ರನು ಕ್ಷಮಿಸುವೆನೆಂದು | ಜನನಿ ಗಿತ್ತನು ಭಾಷೆ | ಯೆನುವದೇನಥಮಗೆ | ಲಾಲಿಸೀ ‖ ೨ ‖

‖ ರಾಗ: ಮಾರವಿ ಏಕತಾಳ ‖

ಏನೆಲೊ ಹಳೆ ಮುದಿ | ಶ್ವಾನನೆ ಕೃಷ್ಣನೊ | ಳಾನಳಿಯುಪೆ ಭಟನೇ ‖ ಈ ನುಡಿ ಧಿಟಸಟೆ । ಯೇನೆಂದಿದ ನಾವ್ | ಕಾಣಬಹುದು ನಿಲ್ಲೊ ‖ ೧ ‖ ಇಲ್ಲಿ ಮುನಿಗಳು ಸ । ದಸ್ಯರು ಪೂಜ್ಯನೆ । ಕಳ್ಳನು ನೀಭಟ್ಟ ‖ ಒಳ್ಳಿತು ಪಿಕ ಘೂ । ಕಗಳು ನರಿಗಳೆಡೆ | ಯಲ್ಲಿ ಮೆರವ ತೆರದೀ ‖ ೨ ‖ ಏನೆಸಗಿದೆ ಯಂ । ಬಾಸಾರಿಯ ಗಂ । ಗಾನದಿಸುತ ನಿನ್ನಾ ‖ ಪ್ರಾಣವಳಿಸಿ ಭೂ । ತಾಹುತಿಗೊಡಲಹೆ । ಜಾಣನೆನಲು ಭೀಷ್ಮಾ ‖ ೩ ‖ ನುಡಿಯಿಂದೇನ್ ಫಲ | ಮಡುಹಿ ಭಟರ ಮುಖ | ಕೆಡಿಸಿರಿ ನೀವಂತೇ ‖ ನಡಸಧಿರಲು ನಿಮ | ಗಡಸುವದಳಿವೆನ | ಲೊಡನೆಂದನು ಚೈದ್ಯ ‖ ೪ ‖ ಭಂಡ ಮುದಿಯನಿದ | ಖಂಡಿತವೆನಿಸುವೆ | ಖಂಡಿಸಿ ತವ ತಲೆಯಾ ‖ ಪಾಂಡವರಧಟನು | ಹಿಂಡುವೆ ಕೃಷ್ಣನು | ದ್ದಂಡತನವ ಮುರಿವೇ ‖ ೫ ‖ ವರ ಭಗದತ್ತಾ | ದ್ಯರು ಕೆರಳುತ ವಿ । ಷ್ಟರವಿಳಿದಿದಿರಾಗೂ ‖ ಗರುವವ ತೋರೆಂ | ದರವಿಂದಾಕ್ಷನ ಕರವನು ಪಿಡಿದೆಳೆಯೇ ‖ ೬ ‖

‖ ಭಾಮಿನಿ ‖

ಮೂಢ ನೃಪರೀ ತೆರದೊಳಸುರವಿ | ಬಾಡನನು ಪಿಡಿದೆಳವುತಿರಲದ | ನೋಡಿ ಯಮಜಾದ್ಯಖಿಳ ಸಜ್ಜನರಂಜಿ ನಡನಡುಗೇ ‖ ಆಡಲೇನದನ ಭಯ ಹಸ್ತವ | ನೀಡಿ ಹರಿಯೆಲ್ಲರನು ಭಯಗೊಳ | ಬೇಡಿರೆನುತಲೆ ಸಂತವಿಸುತೆದ್ದನು ಮಹಾಹವಕೆ ‖ ೧ ‖

‖ ರಾಗ: ಘಂಟಾರವ ಅಷ್ಟತಾಳ ‖

ನಿಲ್ಲುನಿಲ್ಲೆಲೊ ಹುಲು ಗೋಪತರಳನೆ | ನ್ನಲ್ಲಿ ತೋರ್ ತವ ಬಲುಹ ನೆನುತಲೆ | ಪಲ್ಕಡಿದ ಭಗದತ್ತನು ‖ ೧ ‖ ಎಲೆಲೆ ಕುನ್ನಿ ನಿನ್ನಯ್ಯನೆನ್ನೊಳು

ಕಾದಿ | ತಲೆಯ ಮಾರಿದುದರಿದು ಸಾಯದಿ | ರೊಲಿದು ಮರೆಯನು ಸೇರಿ ಕೋ || ೨ || ರಾಜರಾಸ್ಥಾನದಲಿ ಕೃಷ್ಣ ನೀನಗ್ರ | ಪೂಜೆಗರ್ಹನೆ ಘಡ ಸರಾಧಮ | ರಾಜನೋ ಧರ್ಮಜ್ಞನೋ || ೩ || ಬರಿಯ ಮಾತಿನೊಳೇನ್ಫಲವೆಂದೈದು | ಶರಗಳೆಚ್ಚಡೆ ನಾಂಟಿ ತಾಳದೆ | ಪುರಕೆ ಮರಳಿದನಾಗಳೇ || ೪ ||

|| ರಾಗ: ಕಾಂಬೋದಿ ಝಂಪೆತಾಳ ||

ಸೋಮದತ್ತನು ಭರದಿ | ಕಾಮಾರಿಯೋಲ್ ಗಜರಿ | ಮಾಮನೋಹರನ ತಡದೆಂದಾ || ಭೂಮಿಾಶರಿದಿರೊಳು | ದ್ದಾಮನಾದೆಯ ನಿನ್ನ | ನಾಮವಳಿಸುವೆನು ಧುರಕೊದಗೂ || ೧ || ಅರಿತರಿಪು ಬರಿದೆ ಸಂ | ಗರ ಕೊದಗಿ ಕೆಡಬೇಡ ! ತೆರಳು ಬಂದಂತೆ ಬಹು ಲೇಸೂ || ಮರಣಕಿಚ್ಛಿಸಿದ ಜೈ | ದ್ಯರಸನೊಡಗೂಡಿ ಬಲು | ಗರುವವನು ತೋರಲಳಿಸುವೆನೂ || ೨ || ಇನಿಸು ಮನ್ನೆಯರಿದಿರು | ನಿನಗೆ ಮನ್ನಣೆಗೊಡಲು | ಜನಪತಿಯೊ ಕಲಿಯೊ ಧಾರ್ಮಿಕನೋ || ರಣಪಲಾಯನ ಪಂಡಿ | ತನೆ ನಿಲ್ಲು ಶಿಶುಪಾಲ | ನೆನುವ ನುಡಿಯುಹಿತವೇ ಮರುಳ || ೨ || ಎಲೆ ಕುನ್ನಿ ಭೂಪನೀ | ಹಿಳುಕ ಸವಿನೋಡೆಂದು | ತಳುವದೆಚ್ಚಡೆ ಪತ್ತು ಶರವಾ || ಬಳಲುತವನೈದೆ ಮಮ | ನಿಲಯಕಾಗಲೆ ಬಂದು | ಮಲೆತೆಂದ ದಂತವಕ್ರಕನೂ || ೪ ||

|| ರಾಗ: ಪಂತುವರಾಳಿ ಮಟ್ಟೆತಾಳ || (ಧಾಟಿ—ಎಲೆಲೆ ಧರ್ಮಜಾ ನಿಲ್ಲು ಸಮರಕೆ)

ಭಳಿರೆ ಗೋವಳ | ತರಳ ಕೊಳುಗುಳ | ಕಳದಿ ತೋರು ನಿಖಿಲ ಭಟರ | ಗೆಲಿದ ಶೌರ್ಯವ || ೧ || ದುಷ್ಟ ತನ್ನೊಳೂ | ವೈರತನದಲೀ | ಕೆಟ್ಟುಪೋದ ಭಟರನರಿದು | ತಟ್ಟನೈದೆಲಾ || ೨ || ಮಾಗಧೇಶಗೇ | ಬೆದರಿ ಮನೆಯನು | ಸಾಗರದಲಿ ಗೈದು ಬಾಷ್ಪ | ಬಗೆಯನರಿತಿಹೆ || ೩ || ಸಾರಿ ಕೊಂದರೇ | ಪಾಪವಿಲ್ಲವೂ | ತೋರ್ಪೆ ಕಾಲನೂರನೆನುತ | ಲಾ ರಮೇಶನೂ || ೪ ||

|| ಭಾಮಿನಿ ||

ಕಿಡಿಯುಗುಳಿ ಕಂಗಳಲಿ ಚಕ್ರವ | ಬಿಡಲು ದುರುಳನ ಗಳವ ಛೇದಿಸ| ಲೊಡನೆ ಹರಿಯಂಗಕ್ಕೆ ಸುಮ ಮಳೆಗರೆಯೆ ಸುರರಾಗಾ || ಘುಡಿ ಘುಡಿಸಿ ಪಲ್ಕಡಿದು ಪ್ರಳಯದ | ಸಿಡಿಲನಂತಾರ್ಭಟಿಸಿ ತಡದುರೆ | ನುಡಿದ ಶಸ್ತ್ರಾಸ್ತ್ರವನು ಝೇಂಕರಿಸುತ್ತ ಶಿಶುಪಾಲಾ || ೧ ||

|| ರಾಗ: ಭೈರವಿ ಝಂಪೆತಾಳ ||   (ದುಡುಕು)

ಧಿರು ಧಿರುರೆ ಮಝು ಗೋಪ | ತರಳ ರುಗ್ಮಿಣಿಯಾಪ | ಹರಿಸಿದ ಧಟನು ತೋರು | ಭರದಿ ಮಾರ್ಮಲೆತೂ ‖ ಅರುಹಲೇನೆನ್ನ ಧಟ | ಧುರ ಕೊದಗಿ ಬಲು ಭಾರಿ | ಪರಿಕಿಸಿದೆಯಲ್ಲೊ ನೀ | ಬರಿದೆ ಕಾದುವದೇ ‖ ೧ ‖ ಕೃತಕದೊಳು ಮಗಧ ಪುರ | ಪತಿ ಹಂಸಡಿಬಿಕಾದಿ | ಅತಿಬಲರ ಗೆಲಿದೆನೆಂ | ದತಿ ಗರ್ವಿಸದಿರೂ ‖ ಕ್ಷಿತಿಗಧಮರಹ ಖಳರ | ಹತಿಸಿದೆನು ತನ್ನಿರವ | ಮತಿವಂತರರಿವರೆಲೆ | ಮೃತಿಗಾಶಿಸದಿರೂ ‖ ೨ ‖

|| ರಾಗ ಶಂಕ್ರಾಭರಣ ಮಟ್ಟೆತಾಳ ||

ಎಲವೊ ಕೃಷ್ಣ ನಿನ್ನ ಬಗೆಯ | ತಿಳಿವೆನೆಲ್ಲವೈಸೆ ಪಿಂದೆ | ಚಲುವ ತಮನ ಕೊಂದೆ ಯಾಕೆ | ಕುಲ ಕುಠಾರನೇ ‖ ಛಳಿರೆ ವೇದಗಳನು ಕದ್ದು | ಜಲಧಿ ಮಧ್ಯವಿಟ್ಟ ಕತದಿ | ಖಳನ ತರಿದೆ ಮತ್ಸ್ಯನಾಗಿ | ಇಳೆಯ ರಕ್ಷೆಗೇ ‖ ೧ ‖ ಧರಿಸಿದೇಕೆ ಕೂರ್ಮ ರೂಪ | ಮರುಹು ದೈತ್ಯರಿಂಗಮೃತವ | ತೆಗದೆ ಸುರರಿಗಿತ್ತುದೇನು | ಶರಧಿ ಮಥನದೀ ‖ ಮರುಳೆ ಲೋಕರಕ್ಷೆಗಾಗಿ | ಪರಮ ಕೂರ್ಮನಾದೆ ಸುಧೆಗೆ | ಸುರರು ಭಾಧ್ಯರಲ್ಲದಸುರ | ವರರಯೋಗ್ಯವೂ ‖ ೨ ‖ ವೀರ ಕನಕನಯನನನು ನಿ | ಷ್ಕಾರಣದಲಿ ತರಿದುದೇಕೆ | ಚೋರ ನೀ ನ್ಯಾಯಾನ್ಯಾಯ ವಿ | ಚಾರ ಕರ್ತನೇ ‖ ಧಾರುಣಿಯ ಕದ್ದೊಯ್ದು ಪಾರಾ | ವಾರ ಮಧ್ಯವಿಟ್ಟು ಸುರರ | ಭೂರಿ ದಣಿಸಲಳಿಸಿದೆನು ಭೂ | ದಾರ ರೂಪದೀ ‖ ೩ ‖ ಅರಿತೆ ಸಾಕಂತಿರಲಿ ಕೇಳು | ವರ ಹಿರಣ್ಯಕಶಿಪುವನು | ಬರಿದೆ ತಾ ತ್ರಿಸಂಧ್ಯೆಯಲಿ ಸಂ | ಹರಿಸಿದೇತಕೇ ‖ ಮರಣವಡಸದಂತೆ ವಿಧಿಯೋಳ್ | ವರವ ಪಡದ್ಮ ಸುತಗೆ ಕಷ್ಟ | ಬರಿಸಲರಿದು ತರಿದೆ ನಾರ | ಹರಿಯ ರೂಪದೀ ‖ ೪ ‖ ಕೇಳಿ ಮೂರಡಿಯ ಸ್ಥಳವ ದ | ಯಾಳುವಾದ ಬಲಿಯನು ಪಾ | ತಾಳಕಿಳಿಸಿದೇತಕಯ್ಯ | ಮೂಳತನದಲೀ ‖ ಖೂಳ ಸ್ವರವ ಶೆಳದು ತ್ರಿದಶ | ಜಾಲವನ್ನು ದಣಿಸಲದಿತಿ | ಬಾಲನಾಗಿ ನಾಶಗೈದ | ನಾಳುತನವನೂ ‖ ೫ ‖ ಕಾರ್ತವೀರ್ಯನೆಂಬ ಚಕ್ರ | ವರ್ತಿಯನ್ನು ತರಿದು ರಾಜ | ಗೋತ್ರವನ್ನು ನಾಶ | ಗೈದ | ಕರ್ತವ್ಯವೇನೂ ‖ ಧೂರ್ತನಧ್ವರದ ಪಶುವನು | ಎತ್ತಿಕೊಂಡ್ಯೊದುದರಿಂದರಿದೆ | ಕ್ಷತ್ರಿಕುಲಜರಳಿಸಿದೆನು ನೀ | ಚಾತ್ಮರೆನ್ನುತ ‖ ೬ ‖ ತೊರೆದು ರಾಜ್ಯವನ್ನು ವನ

ವ | ಚರಿಸಿ ಕೋಡಗಗಳ ಕೂಡಿ | ತರಿದುದೇಕೆ ರಾವಣಾದಿ | ಧುರ ಧುರಿ
ಣರಾ || ತರುಣಿ ಸೀತೆಯನ್ನು ಕದ್ದ | ದುರುಳನಾಪ್ತೇಷ್ಟರನ್ನು ಕೊಂದೆ
ಧರೆಯೊಳ್ ರಾಮನಾಗಿ ಸುರರ | ಪೊರೆಯಲೋಸುಗ || ೭ ||

|| ರಾಗ: ಸೌರಾಷ್ಟ್ರ ತ್ರಿವುಡೆತಾಳ ||

ಪೂತುರೇ ಗೋಪಾಲಕನೆ ಬರಿ | ಮಾತಿಲೆನ್ ಫಲ ತೋರು
ಶೌರ್ಯವ | ನೀ ತತೂಕ್ಷಣ ತರಿವೆ ನೋಡೆಲೆ | ಸ್ವಾತಿಶಯವಾ || ೧ |
ಎನುತ ಶರಶತಿ ಬಿಡಲು ಖಂಡಿಸಿ | ವನಜನೇತ್ರನು ತಾ ಸುದರ್ಶನ | ಕನು
ಮತಿಯು ನೀಡಿದನು ರೋಷದಿ | ಕನಲುತಾಗಾ || ೨ || ಒರೆವುದೇನಾ
ನೃಪನ ಶಿರವನು | ತರಿದು ಚಕ್ರವು ಮರಳಿ ಕೃಷ್ಣನ | ಮರೆ ಪೊಗಲು ಜಯ
ವೆಂದು ಸ್ತುತಿಸಲು | ಸರುವ ಜನರೂ || ೩ || ತಿರುಗಿ ವೈದಿಕ ಪರಿವಿಡಿಯೊಳ |
ಧ್ವರಸಮಾಪ್ತಿಯ ಗೈದು ಹರುಷಿಸಿ | ನೆರದ ಜನರನು ಬೀಳುಗೊಟ್ಟಾ |
ಸರಸಿಜಾಕ್ಷ || ೪ || ತೆರಳಿದನು ದ್ವಾರಾವತಿಗೆ ಕೇ | ಳರಸ ಧರ್ಮಜನಿಂದ್ರ
ಪ್ರಸ್ಥದಿ | ಹರಿಯ ಧ್ಯಾನಿಸುತೀರ್ದನನುಜಾ | ದ್ಯರನುಗೂಡೀ || ೫ ||
ವಾಸುದೇವನು ಭಕ್ತರಿಷ್ಟವ | ಲೇಸಿನಿಂ ಪಾಲಿಸುತ ಯಾದವ | ರಾಶಿಯೊ
ನಿರುತೀರ್ದ ಬಲು ಸಂ | ತೋಷದಿಂದಾ || ೬ || ಇಂತೆಸೆವ ಸತ್ಕಥೆಯ ತಾ
ಬರ | ದಿಂತು ರಕ್ತೇಕ್ಷಣ ಸಂವತ್ಸರ | ದಂತ್ಯ ಝುಷಮಾಸಾದಿಯೊಳಗಿದ |
ಸಂತ್ಯಗೈದೇ || ೭ ||

|| ಭಾಮಿನಿ ||

ಮೂರ್ತಿ ತ್ರಯರಂ ಸ್ಮರಿಸಿ ಕೃಷ್ಣ—| ಮೂರ್ತಿ ಚರಿತೆಯ ಬರೆದ
ವಿಷ್ಣು — ಮೂರ್ತಿಯಹ ವರ ಸುಬ್ಬರಾಯ ಸುಗಣಕರಾತ್ಮಜನೂ || ವ್ಯಕ್ತ
ಪಡಿಸದೆ ತಪ್ಪ ತಿದ್ದುತ | ವ್ಯಕ್ತತೆಯ ಸಂತೋಳಿಸಲಾ ಸು | ವ್ಯಕ್ತಿಗಳ ಮರೆ
ಪೊಗುವ ವಿದ್ಯಾರ್ಜಿಸುವೆನನುದಿನವೂ || ೧ ||

|| ರಾಗ: ಸಾವೇರಿ ಝಂಪೆತಾಳ ||

(ಧಾಟಿ—ಹರಿಯೆ ವಾಸುದೇವಾಯನ್ನ ಮೋ ||)

ಜಯ ಮಂಗಲಂ ನಿತ್ಯ ಶುಭಮಂಗಲಂ || ಪಲ್ಲ || ಕ್ಷೀರ ಸಾಗರ
ಶಯನ | ಘೋರ ಭವ ಭಯ ಹರಣ | ಭೂರಿ ಭಕ್ತೋದ್ಧರಣ | ಕಾರುಣ್ಯ
ಸದನ ಗುಣ | ವಾರಿಧಿ ರಮಾರಮಣ | ನಾರಾಯಣನೆ ರಕ್ಷಿಸೆಮ್ಮ ನೀ

... ಜಯ ಮಂಗಲಂ ‖ ೧ ‖ ಶರಧಿಯೊಳು ಝುಷರೂಪ । ಧರಿಸಿ ತಮನರಿದವಗೆ । ಗಿರಿಯ ಬೆನ್ನಲಿ ... । ವರ ಕಮಠ ರೂಪನಿಗೆ । ಧರೆಯ ಕೊಂಡ್ಯೊದವನ । ಶರಿದ ಕಿಟಿ ... । ತರಳನಳಲಿಸಿದವನ ಕೊಂದ ನರಹರಿಗೆ ‖ ಜಯ ಮಂಗಲಂ ‖ ೨ ... ದಾನವ ಬೇಡಿ । ದೆಳೆ ವಟುವಿಗಾ ಕ್ಷತ್ರಿ । ಕುಲವ ಸವರಿದ ... । ಲಲನೆಯನು ಕದ್ದೊಯ್ದ । ಖಳನಿಷ್ಟಮಿತ್ರರ । ಶರಿ... ‖ ಜಯ ಮಂಗಲಂ ‖ ೩ ‖ ಜನಕ ಜನನಿಯರ ಬಂ । ಧನೆ ಬಿಡಿ... । ... ಗಿರಿಯ ನೆತ್ತಿದಗೆ । ರಣದಿ ಕಂಸಾದ್ಯರನು । ಹನನಗೊಳಿ... । ವರ । ...ಪುರದ ...ಲ । ಕೃಷ್ಣ ಮೂರುತಿಗೆ ‖ ಜಯ ಮಂಗಲಂ ‖ ...

ಅಂತು ಸಂಧಿ ೨ಕ್ಕೆ ಪದ್ಯಗಳು ೫೩೭ಕ್ಕಂ



# ಕನ್ನಡ ಪದ್ಯಾವಳಿ

## ಕನ್ನಡ ಭಾಷೆಯ ಪ್ರಶಂಸೆ.

ಸುಲಿದ ಬಾಳೆಯ ಹಣ್ಣಿನಂದದಿ।
ಕಳೆದ ಸಿಗುರಿನ ಕಬ್ಬಿನಂದದಿ।
ಯಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ॥
ಲಲಿತವಹ ಕನ್ನಡದ ನುಡಿಯಲಿ।
ತಿಳಿದು ತನ್ನೊಳು ತನ್ನ ಸೌಖ್ಯವ।
ಗಳಿಸಿಕೊಂಡರೆ ಸಾಲದೇ ಸಂಸ್ಕೃತವಲಿನ್ನೇನು॥ ೨

॥ ಕಂದ ॥

ತನ್ನಯ ಮುಖದಾಕೃತಿಯಂ।
ಕನ್ನಡಿಯಿಂ ತಿಳಿದುಕೊಳ್ವ ತೆರದಿಂ ಧರೆಯೊಳ್॥
ಕನ್ನಡ ನುಡಿಯಿಂ ಮನುಜಂ।
ತನ್ನಯ ಗುಣದೋಷದಿರುವ ತಿಳಿಯಲ್ಬರ್ಕುಂ॥ ೪

## ವಿವೇಕಿಗಳ ಪದ್ಧತಿ.

॥ ಭಾಮಿನೀ ಷಟ್ಪದಿ ॥

ಮಂದಮತಿ ನಿಂದಿಸಲು ಮನಕದ।
ತಂದುಕೊಳ್ಳದ ನರನು ಜಾಣನು।
ಬಂದ ಬಹು ಚಿಂತೆಯಲಿ ಧೈರ್ಯವ ತಳೆವ ಕಡುಜಾಣ॥
ಸಂಧಿಸಿದ ಕಲಹದಲಿ ಶಾಂತಿಯ।
ನೊಂದುವಾತನು ಜಾಣನಿಳೆಯೊಳ।
ಗೊಂದೆ ಮನದಲಿ ಧರ್ಮವಾಚರಿಪಾತ ಕಡುಜಾಣ॥ ೮

ಅರಿಯದಿರೆ ಚತುರೋಕ್ತಿಯನು ಬಾ।
ಯ್ದೆರೆಯದಾತನು ಜಾಣ ಪರರಿಗೆ।
ಧರಣಿಯೊಳು ಹೊಣೆಗಾರನಾಗದ ಮನುಜ ಕಡುಜಾಣ॥
ಹಿರಿದು ಸನ್ಮಾರ್ಗದಲಿ ನಡೆವಾ।
ನರನು ಜಾಣನು ದೇವದೇವನ।
ಚರಣಕಮಲವ ನಂಬಿ ಭಜಿಸುವ ಮನುಜ ಕಡುಜಾಣ॥ ೧೦

ಮನೆಯ ಕಲಹವ ಪರರಿಗರುಹದ।
ಮನುಜ ಜಾಣನು ಮಮತೆಯಿಂ।
ತನ್ನನುಜರಸು ಕಾಣ್ಬಮನುಜನು ಕಡುಜಾಣನೆನಿಸುವನು॥
ಧನವಿರಲು ತನ್ನಲ್ಲಿ ಬಡವರಿ।
ಗಸುನಯದಿ ಕೊಡುವಾತ ಜಾಣನು।
ಮನದೊಳಗೆ ನರಹರಿಯ ನೆನೆವಾಮನುಜ ಕಡುಜಾಣ॥ ೧೧

## ಮೂರ್ಖರ ಪದ್ಧತಿ.

ಪರರ ಸಿರಿಯನು ನೋಡಿ ಕರುಬುವ
ನರನು ಮೂರ್ಖನು ತನಗೆ ಮನ್ನಣೆ।
ದೊರೆಯದಲ್ಲಿಗೆ ಪೋಪವನು ಕಡುಮೂರ್ಖನೆನಿಸುವನು॥
ಅರಿವು ತನಗಿಲ್ಲದಲೆ ತಿಳಿದರ।
ಜರಿವ ಮಾನವನೋರ್ವ ಮೂರ್ಖನು।
ಹಿರಿಯರುಕ್ತಿಯ ಕೇಳಿ ನಡೆಯದ ಮನುಜನತಿಮೂರ್ಖ॥ ೧೨

ಚಿಂತೆಯುಳ್ಳವನೊಡನೆ ಹರುಷವ।
ನಾಂತು ನಲಿವನು ಮೂರ್ಖನೈ ತ।
ನ್ನಂತರಂಗವ ಕಪಟ ಮನುಜಗೆ ಪೇಳ್ವನತಿಮೂರ್ಖ॥
ಸಂತೆಯಲಿ ತತ್ತ್ವವನು ಜನರಿಗೆ।
ಸಂತಸದೆ ಪೇಳ್ವಾತ ಮೂರ್ಖನು।
ಪಂತವನು ಬಲ್ಲಿದರೊಳೆಸುಗುವ ನರನು ಕಡುಮೂರ್ಖ॥ ೧೩

ಇತ್ತ ಬಳಿಕಂ ಮನದೊಳಗೆ ಕುದಿ।
ಯುತ್ತಲಿರುವನು ಮೂರ್ಖನೆನಿಪನು।
ಹೆತ್ತವರ ನುಡಿಗಳನು ಮೀರುವ ನರನು ಕಡುಮೂರ್ಖ॥
ಇತ್ತು ಸುಜನರ ಮನಕೆ ದುಃಖವ।
ಮತ್ತನಾಗಿಹ ನರನು ಮೂರ್ಖನು।
ಚಿತ್ತದಲಿ ನರಹರಿಯ ಭಜಿಸದ ಮನುಜನತಿಮೂರ್ಖ॥ ೧೪

## ದುರಾಚಾರದಿಂದ ಪರಗತಿ ಕೆಡುವುದು.

ಕಾಲ ತೊಳೆಯದೆ ದೇವಭೂಸುರ ।
ರಾಲಯವ ಹೊಕ್ಕರಿಗೆ ಧರ್ಮವ ।
ಕೇಳದೊಗಡಿಸಿಕೊಂಡು ಮದದಿಂ ಹಿರಿಯರನು ಜರಿವ ॥
ಜಾಲರಿಗೆ ಜಡರಿಂಗೆ ಬಹುದು ।
ಶ್ರೀಲರಿಗೆ ಧರ್ಮಗಳ ತ್ಯಜಿಸಿದ ।
ಖೂಳರಿಗೆ ಕಲಿಪಾರ್ಥ ಕೇಳ್ ಪರಲೋಕವಿಲ್ಲೆಂದ ॥ ೧೫

## ಕೆಟ್ಟನಡತೆಯಿಂದ ಲಕ್ಷ್ಮಿ ತೊಲಗುವಳು.

॥ ಕಂದಪದ್ಯ ॥

ಎಂಜಲಿಗೆ ಹೊಲೆಗೆ ಮೈಲಿಗೆ ।
ಗಂಜದೆಯೊಂದಾಗಿ ಬೆರಸಿ ಮನೆಯೊಳಗೆಂದುಂ ॥
ಸಂಜೆಯಲಿ ಜಗಳವಾಡುತ ।
ಮುಂಜೂರನೆ ಪಿಡಿಯೆ ಲಕ್ಷ್ಮಿ ಬಿಟ್ಟೋಡುವಳೈ ॥ ೧೬

ಮಾಸಿದ ತಲೆ ಮೈಲಿಗೆಯೊಳು ।
ಹಾಸಿಗೆಯಲಿ ತಿನ್ನುತಿರುವ ತೊಳೆಯದೆ ಮುಖವಂ ॥
ಹೇಸಿಕೆ ನಡೆತೆಯ ಸತಿಯಿರೆ ।
ನಾಸಿಕವನೆ ಹಿಡಿದು ಲಕ್ಷ್ಮಿ ಬಿಟ್ಟೋಡುವಳೈ ॥ ೧೭

ಅತಿಥಿಗಳಿಗಿಕ್ಕು ಎಂದರೆ ।
ಪ್ರತಿ ಮಾತುಗಳಾಡುತಿರುತ ಹಲ್ಲಂ ಕಡಿವಾ ॥
ಸತಿಯಿರ್ಪ ಮನೆಗೆ ಮಾರಿಯೆ ।
ಅತಿಶಯದಿಂ ಬರ್ಕು ಲಕ್ಷ್ಮಿ ಬಿಟ್ಟೋಡುವಳೈ ॥ ೧೮

ಹಗಲಿರುಳೆನ್ನದೆ ಸುಮ್ಮನೆ ।
ಜಗಳವನಾಡುತ್ತ ಪತಿಯ ಚಿತ್ತಕ್ಕಳಲಂ ॥
ನೆಗಳುವ ವಧುವಿನ ಮನೆಯುಂ ।
ಹೊಗಲಂಜುತೆ ಲಕ್ಷ್ಮಿ ತಾನೆ ಬಿಟ್ಟೋಡುವಳೈ ॥ ೧೯

ಸಿರಿಯಲಿ ಮುಂದಂ ಕಾಣದೆ ।
ನೆರೆಹೊರೆಯಂ ನಂಟರನ್ನು ಧಿಕ್ಕರಿಸುತ್ತಂ ॥
ಹಿರಿಯರ ಕಂಡರೆ ಗಣಿಸದ ।
ನರನಂ ತಾನಾಗಿ ಲಕ್ಷ್ಮಿ ಬಿಟ್ಟೋಡುವಳೈ ॥ ೨೦

## ನಾನಾವಿಧ ನೀತಿಗಳು.

ಬಂಧುಗಳಿಲ್ಲದ ಬದುಕುಂ ।
ತಂದುದ ತಾನೊಬ್ಬಳುಂಡು ಮುಗಿಸುವ ಬದುಕುಂ ॥
ಹಿಂದನು ಮುಂದನು ತಿಳಿಯದೆ ।
ನಿಂದೆಗೆ ಗುರಿಯಾಗುತಿರ್ಪ ಬದುಕುಂ ವ್ಯರ್ಥಂ ॥ ೨೧

ಉಳ್ಳಾಗ ತನ್ನ ಬಂಧುಗ ।
ಳೆಲ್ಲರ ವಂಚಿಸುತ ತಾನೆ ಉಣುತಿರೆ ತನಗಂ ॥
ಇಲ್ಲದ ಕಾಲದೊಳವರುಂ ।
ಹುಲ್ಲಿಂದಂ ಹಗುರವಾಗಿ ಕಾಣುವರಿವನಂ ॥ ೨೨

ಇಲಿ ಹೆಗ್ಗಣ ಹೆಚ್ಚಿದ ಮನೆ ।
ಹಲವರು ನೆರೆದುಂಡು ತಿಂದು ತೇಗುವ ಮನೆಯುಂ ॥
ಕಲಹಂ ಹೆಚ್ಚಿದ ಮನೆಯುಂ ।
ಬಲುಬೇಗಂ ಕೆಟ್ಟು ಪೋಪುದೆಂಬುದು ಸಹಜಂ ॥ ೨೩

॥ ಭಾಮಿನೀ ಷಟ್ಪದಿ ॥

ಯತಿ ಕೆಡಗು ದುಸ್ಸಂಗದಲಿ ಭೂ ।
ಪತಿ ಕೆಡುಗು ದುರ್ಮಂತ್ರದಲಿ ವರ ।
ಸುತ ಕೆಡಗು ಲಾಲನೆಗಳಲಿ ಕೃಷಿ ಕೆಡುಗುಪೇಕ್ಷೆಯಲಿ ॥
ಮತಿ ಕೆಡುಗು ಮಧುಪಾನದಲಿ ಸ ।
ದ್ಗತಿ ಕೆಡಗು ದುಶ್ಚರಿತದಲಿ ನಿಜ ।
ಸತಿ ಕೆಡುಗು ದುರ್ವ್ಯಸನದಲಿ ಭೂಪಾಲ ಕೇಳೆಂದ ॥ ೨೪

ಧನಮದದಿ ಸತ್ಕುಲಮದದಿ ಯೌ ।
ವನಮದದಿ ಸಿರಿಮದದಿ ನಿಜಗುರು ।
ವನು ವಿಭಾಡಿಸಿ ನೀನು ತಾನೆಂದೆನುತ ಹೂಂಕರಿಸಿ ॥
ಮುನಿಸಿನಲಿ ಸಾತ್ವಿಕರೊಳೊಬ್ಬರ ।
ನನುಗೆಡಿಸಿ ಗರ್ಜಿಸಲು ನರಕದಿ ।
ಮುಣುಗಿದಲ್ಲದೆ ಬೇರೆ ಗತಿಯಿಲ್ಲೆಂದ ನಾವಿದುರ ॥ ೨೫

ನರಜನುಮವತ್ಯಧಿಕವದರೊಳು ।
ಗುರುಹಿರಿಯರಿವರೆಂದು ದಾನ ।
ಕ್ಕುರುಹರಿವರಲ್ಲೆಂದು ನೋಡದೆ ಮೂಢ ಮಾರ್ಗದಲಿ ॥
ಕರೆದಪಾತ್ರಂಗಿತ್ತು ಪಾತ್ರನ ।
ಪರಿಹರಿಸಲೀ ಯೆರಡರಿಂ ಸಂ ॥
ಹರಣವಹುದಾರ್ಜಿಸಿದ ಬಲುಧನಕರಸ ಕೇಳೆಂದ ॥ ೨೬

ಸಲಹಿದೊಡೆಯನ ದಿವ್ಯಮಂತ್ರವ ।
ಕಲಿಸಿದಾಚಾರ್ಯಕನ ನನುವರ ।
ದೊಳಗೆ ತಲೆಗಾಯಿದನ ದುರ್ಭಿಕ್ಷದಲಿ ಸಲಹಿದನ ॥
ಜಲದೊಳಾಳ್ದನ ನೆತ್ತಿದನನುರಿ ।
ಯೊಳಗೆ ಪರಿಹರಿಸಿದನ ಮರೆದವ ।
ನಿಳಿವನೈ ಕುಲಕೋಟಿಸಹಿತ ಮಹಾಂಧನರಕದಲಿ ॥ ೨೭

ದಾನವಿಲ್ಲದ ವಿತ್ತ ಬುಧಸ ।
ನ್ಮಾನವಿಲ್ಲದ ರಾಜ್ಯ ಬಲುಸುಯಿ ।
ಧಾನವಿಲ್ಲದ ಸುದತಿ ಧೀಮಾನಿಲ್ಲದಾಸ್ಥಾನ ॥
ಜ್ಞಾನವಿಲ್ಲದ ತಪವು ವೇದವಿ ।
ಧಾನವಿಲ್ಲದ ವಿಪ್ರ ಶರಸಂ ।
ಧಾನವಿಲ್ಲದ ಸಮರ ಮೆರೆಯದು ರಾಯ ಕೇಳೆಂದ ॥ ೨೮

ನಾಗವಲ್ಲಿಯ ಹಿಂದುಮುಂದನು ।
ನೀಗಿ ಕಳೆಯದೆ ಚೂರ್ಣ ಪರ್ಣ ।
ತ್ಯಾಗವಿಲ್ಲದೆ ದಂತಧಾವನ ವರ್ಣವನು ಸವಿದು ॥
ಭೋಗಿಸಿದೊಡಮರೇಂದ್ರನಾಗಲಿ ।
ನಾಗಭೂಷಣ ನಾಗಲವನನು ।
ನೀಗಿ ಕಳೆವಳು ಭಾಗ್ಯವಧು ಭೂಪಾಲಕೇಳೆಂದ ॥ ೨೯

॥ ಮತ್ತೇಭ ವಿಕ್ರೀಡಿತಂ ॥

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಗ್ರಂಥಂಗಳಂ ಕೇಳುತುಂ ।
ಕೆಲವಂ ಮಾಳ್ಪರಿಂದೆ ಕಂಡು ಕೆಲವಂ ಸುಜ್ಞಾನದಿಂ ನೋಡುತಂ ।
ಕೆಲವಂ ಸಜ್ಜನ ಸಂಗದಿಂದಲರಿಯಲ್ ಸರ್ವಜ್ಞ ನಪ್ಪಂತೆ ಕೇಳ್ ।
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥ ೩೦

ರವಿಯಾಕಾಶಕೆ ಭೂಷಣಂ ರಜನಿಗಂ ಚಂದ್ರಂ ಮಹಾ ಭೂಷಣಂ ।
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾತಗಳ್ ಭೂಷಣಂ ।
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ ।
ಕವಿಯಾಸ್ಥಾನಕೆ ಭೂಷಣಂ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥ ೩೧

ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ ಗಂಡ ಹೆಂ ।
ಡಿರ ನತ್ಯುಗ್ರದಿ ಶಿಕ್ಷಿಸಲ್ ಪ್ರಜೆಗಳಂ ಭೂಪಾಲಕಂ ಬಾಧಿಸಲ್ ।
ತರುವೇ ಪಣ್ಗಳ ಮೆಲ್ಲೆ ಮಾತೆ ವಿಷಮುಂ ಪೆತ್ತರ್ಭಕಂಗೂಡಿಸಲ್ ।
ಹರ ಕೊಲ್ಲಲ್ ಪರಕಾಯ್ವನೇ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥ ೩೨

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ ।
ಸಿಡಿಮುಂ ಪೇರ್ಮರನಾಗದೇ ಎಳಗರುಂ ಎತ್ತಾಗದೇ ಲೋಕದೊಳ್ ।
ಮಿಡಿಪಣ್ಣಾಗದೆ ದೈವದೊಲ್ಮೆಯಿರೆತಾಂ ಕಾಲಾನುಕಾಲಕ್ಕೆ ಪೇಳ್ ।
ಬಡವಂ ಬಲ್ಲಿದನಾಗನೇ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥ ೩೩

# ಧ್ರುವಚರಿತ್ರೆ.

॥ ಭಾಮಿನೀ ಷಟ್ಪದಿ ॥

ಸೂಚನೆ॥ ಧ್ರುವಗತಿಯನಾರ್ಜಿಸುವ ಭರದಲಿ ।
ಧ್ರುವನು ನಾರದಮುನಿಪನುಪದೇ ।
ಶವನು ಮನದಲಿ ಧರಿಸಿ ಹೊರವಂಟನು ತಪೋವನಕೆ ॥

ಪೃಥಿವಿಪತಿಯೊಂದು ದಿನ ತನ್ನಯ ।
ತೊಡೆಯ ಮೇಲುತ್ತಮನನಾಡಿಸು ।
ತೊಡನೆ ಸುರುಚಿಯ ಮೇಳದಲಿ ಕುಳ್ಳಿರಲು ಸಭೆಯೊಳಗೆ ॥
ಒಡನೆ ಕುಳ್ಳಿಹೆನಪ್ಪ ತನ್ನನು ।
ತೊಡೆಯನೇರಿಸಿ ಕೊಳ್ಳೆನುತ ಕಾ ।
ಲ್ಪಿಡಿದು ಕಂಬನಿದುಂಬಿ ಕಾಡಿದನಂದು ಧ್ರುವನಳುತ ॥ ೧

ಎತ್ತಿಕೋ ತನ್ನವನು ತೊಡೆಗೆನು ।
ತತ್ತು ಕಾಡುವ ಶಿಶುವ ನಾಭೂ ।
ಪೋತ್ತಮನು ಕಾಣುತ್ತ ಕಾಣದ ವೋಲುಪೇಕ್ಷೆಯಲಿ ॥
ಉತ್ತಮನ ತಾಯ್ ಸುರುಚಿ ಮುನಿದಪ ।
ಳೆತ್ತಿಕೊಂಡರೆನುತ್ತ ಸಂಶಯ ।
ಚಿತ್ತನಿರಲಾ ಲಲನೆ ನುಡಿದಳು ಜರಿದು ಬಾಲಕನ ॥ ೨

ಏರುವೊಡೆ ಸಿಂಹಾಸನಕೆ ನೀ ।
ನಾರು ಹೋಗೆಲೆ ಹೂಹೆ ತನ್ನ ಕು ।
ಮಾರ ಕಂಠೀರವನ ವೊಲು ಸೌಭಾಗ್ಯನೇ ನೀನು ॥
ಆರಿಗಳುವೆ ವೃಥಾ ಮನೋವ್ಯಥೆ ।
ಯಾರು ನೀನೆಂದರಿಯೆ ಹೆತ್ತವ ।
ಳಾರು ಹೇಳಾನಲ್ಲಲೇ ನಿನಗೆಂದಳಾ ಸುರುಚಿ ॥ ೩

ತರಳ ನೀನಿದನರಿಯೆ ನೃಪವಿ ।
ಷ್ಟರವನೇರುವೊಡೆನ್ನ ಬಸಿರಲಿ ।
ಮರಳಿ ಜನಿಸುವವೋಲು ಸಾಧಿಸು ಬಹಳ ಪುಣ್ಯವನು ॥
ಪರಮ ಪುರುಷನನೊಲಿಸಿ ತಪದಲಿ ।
ವರಿಸು ಮೇಣೀ ವರವನೇತಕೆ ।
ಕರುಣವನು ನೀ ತೋರಿ ಬಳಲುವೆಯೆಂದಳುರೆ ಜರಿದು ॥ ೩೭

ಹೇಳು ನಿಮ್ಮವ್ವೆಗೆ ನಿಧಾನವ ।
ಕೇಳು ನಡೆ ನೀನರಿಯದಿರ್ದೊಡೆ ।
ಬಾಲಕನಲಾ ಮೇಣದಲ್ಲದೊಡುತ್ತಮನ ಪದವ ॥
ಓಲಗಿಸಿ ಕೊಂಡಿಹುದು ಕೊಡುವನು ।
ಜೋಳವಾಳಿಯನೆನುತ ಧ್ರುವನನು ।
ಬಾಲೆ ಭಂಗಿಸಿ ನುಡಿದು ನೂಕಿದಳಧಿಕಗರ್ವದಲಿ ॥ ೩೮

ತಂದೆಯವಮಾನದ ಮನೋವ್ಯಥೆ ।
ಯೊಂದು ಮತ್ತಾಸವತಿ ತಾಯ್ ಜರಿ ।
ದೆಂದ ಮಾತಿನ ಬಾಣಹತಿಯಿಂತೆರಡು ಗಾಯದಲಿ ॥
ನೊಂದು ಬಾಲಕನಕಟ ತನ್ನಯ ।
ತಂದೆ ನೋಡುತ್ತಿರಲು ನೊಂದಹಿ ।
ಯಂದದಲಿ ಬಿಸುಸುಯ್ವುಳುತ್ತಲ್ಲಿಂದ ಹೊರವಂಟ ॥ ೩೯

ನಡುಗುವಧರದ ಶೋಕಜಲ ಕಡ ।
ಲಿಡುವ ಕಣ್ಗಳ ಮನದ ಮೂರ್ಛೆಯ ।
ಕಡುಗುದಿವ ಕೋಪಾನಲನ ಲಟಕಟಿಸುವವಯವದ ॥
ಎಡಹಿ ಬೀಳುತ್ತೇಳುತುರೆ ಬಾ ।
ಯ್ಬಿಡುತ ಬಿಕ್ಕುತ ಬಿರಿಯುತೀಕ್ಷಿಸು ।
ತೆಡಬಲವನೈತಂದನಾ ನಿಜಜನನಿಯಿದ್ದೆಡೆಗೆ ॥ ೪೦

ಏನಿದೇನಾಯ್ತೆನ್ನ ತಂದೆಗಿ ।
ದೇನು ಹೇಳೆನ್ನರಸ ಹೇಳಾ ।
ರೇನ ಮಾಡಿದರೆನ್ನ ಮರಿಯಾನೆಯನು ಹೇಳೆನುತ ॥
ಮಾನಿನಿಯರಧಿದೇವಿಯಾನಿಜ ।
ಸೂನುವನು ತಕ್ಕೈಸಿ ಹೇಳೆನು ।
ತಾನನದ ಕಂಬನಿಯನೊರಸಿದಳೆರಡು ಕೈಗಳಲಿ ॥ ೪೧

ಅಂಕದಲಿ ಕುಳ್ಳಿರಿಸಿ ಕೊಂಡಾ ।
ಪಂಕಜಾನನೆ ಹೇಳು ಮನದಾ ।
ತಂಕವಾರಿಂದಾಯ್ತು ನಿನಗೆನಲುಸಿರದಳುತಿರಲು ॥
ಶಂಕಿಸುವ ಸತಿಗೆಂದರೆಡಬಲ ।
ವಂಕದವರಾ ಸುರುಚಿ ಮಾಡಿದ ।
ಬಿಂಕದುಕ್ತಿಯ ಬಿರುಬನಾಬಹುವಿಧಪರಾಭವವ ॥ ೪೨

ಕೇಳಿದಾಗಲೆ ಸವತಿಯೆಂದ ಕ ।
ರಾಳವಚನದ ಖಡ್ಗಹತಿಯಲಿ ।
ಬಾಲೆ ಬಿದ್ದಳು ಬಾಳೆ ಕಾಳುರಿಗೊಂಡು ಕೆಡೆವಂತೆ ॥
ಲೋಲಲೋಚನೆ ಬಾಷ್ಪಸಲಿಲೋ ।
ನ್ಮೀಲಿತೇಕ್ಷಣೆ ಲೋಕವಹ್ನಿ ।
ಜ್ವಾಲೆಯಲಿ ತನುಬೆಂದು ಹೊರಳಿದಳಬಲೆ ಬಿಸುಸುಯ್ದು ॥ ೪೩

ನಾಚುವನು ನಿಮ್ಮಯ್ಯನೆನ್ನನು ।
ನೀಚೆಯನು ತನ್ನರಸಿಯೆಂಬೊಡೆ ।
ವಾಚಕಕೆ ಸಹಿತಧಿಕಪಾಪಿಯ ಜಠರದಲಿ ಜನಿಸಿ ॥
ಗೋಚರಕೆ ನೀ ಪೋದೊಡುಚಿತವ ।
ನಾಚರಿಸುವನದೆಂತು ಮಮತೆಗೆ ।
ಯಾಚಕನು ನೀನಾದೆಯೆಂದಳಳಲಿದಳು ಲಲಿತಾಂಗಿ ॥ ೪೪

ಏಕೆ ತಾನೆಲೆ ಮಗನೆ ಧರಣಿಪ ।
ನೇಕೆ ನೀನೆನ್ನುದರದಲಿ ಬರ ।
ಲೇಕೆ ಭಂಗಿಸಲೇಕೆ ಸವತಿಸರೋಷಗರ್ವದಲಿ ॥
ಏಕೆ ವಿಧಿ ತನ್ನನು ನಿರಂತರ ।
ಶೋಕಮಯಸಾಗರದಲದ್ದಲ ।
ದೇಕೆನುತ ತಕ್ಕೈಸಿ ಮಗನನು ಹಲುಬಿದಳು ತರಳೆ ॥ ೪೫

ತಂದೆ ಲೋಗರು ಮಾಡಿದರು ನಿನ ।
ಗೆಂದು ಬಗೆಯದಿರಹಿತವನು ಬಳಿ ।
ಸಂದು ಬಿಡದೂಡುವುದೆಲೈ ಕೃತಕರ್ಮ ಜೀವರಿಗೆ ॥
ಇಂದು ಸುರುಚಿ ಸಗರ್ವದಲಿ ನಿನ ।
ಗೆಂದಡೇನದು ತವಗೆ ಹಿತವಲೆ ।
ಕಂದ ಮಚ್ಚರಿಸದಿರಗುಣಕೆಂದಳು ಸರೋಜಮುಖಿ ॥ ೪೬

ಖೋಡಿಯಿಲ್ಲದೆ ಸುರುಚಿಯೆಂದುದ ।
ಮಾಡುಹೋಗೆಲೆ ಮಗನೆ ಪರರಿಗೆ ॥
ಕೇಡ ಚಿಂತಿಸಬೇಡ ಭಜಿಸು ಮುರಾಂತಕನ ಪದವ ॥
ಕಾಡೊಳಗೆ ನಾನತ್ತೊಡೆನ್ನನು ।
ಬೇಡ ಮಾಣೆಂಬವರ ಕಾಣೆನು ।
ಬೇಡಿದಿಷ್ಟವನೀವನಚ್ಯುತನೆಂದಳಬುಜಾಕ್ಷಿ ॥ ೪೭

ಮನೆಯ ಹೊರವಂಟರ್ಭಕನು ನಿಜ ।
ಜನನಿಯನು ಬೀಳ್ಕೊಂಡುನಡೆದನು ।
ಮನದ ಧೃತಿಯಲಿ ಶೋಕಮೋಹಕ್ರೋಧವನು ಜರಿದು ॥
ದನುಜಹರನನು ಘೋರತಪದಿಂ ।
ದನುಸರಿಸಿ ಲೋಕೋತ್ತರದ ಪದ ।
ವನು ಪಡೆವೊಡಾವುದು ತದಿಷ್ಟಸ್ಥಾನವೆಂದೆನುತ ॥ ೪೮

ಕಲುನೆಲಕೆ ಕಾಲೂರುತಳುಕುತ ।
ಬಳುಕುತಡವಿಗೆ ಹೋಹ ಮಗನನು ।
ಲಲನೆ ನೋಡುತ ನಿಂದಳುರಿಯುಲಿ ಬೆಂದ ಲತೆಯಂತೆ ॥
ಎಲೆ ಜಗನ್ಮಯ ಕೃಷ್ಣ ಜನವ ।
ತ್ಸಲ ದಯಾನಿಧಿ ನೀನಲಾ ದು ।
ರ್ಬಲರಿಗಧನರಿಗಶರಣರಿಗಬಲರಿಗೆ ಗತಿಯೆನುತ ॥ ೪೯

ಎಂತು ಭಜಿಸುವೆ ಮಗನೆ ಲಕ್ಷ್ಮೀ ।
ಕಾಂತನನು ನೆರೆ ಹಸಿವು ತೃಷೆಗಳ ।
ನೆಂತು ಸೈರಿಸಿ ಮಾಳ್ಪೆ ತಪವನು ತನುವಿನಾಯುಸವ ॥
ಎಂತು ನೀನೀಹರಯುದಲಿ ವಿಪಿ ।
ನಾಂತವಾಸದಲಿಹೆ ಶಿಶುವ ನಾ ।
ನೆಂತು ಕಾಣದೆ ಜೀವಿಸುವೆನೆಂದಳಲಿದಳು ತರಳೆ ॥ ೫೦

ಬಿಸಿಲ ಬೇಗೆಯನಾನಲರಿಯದೆ ।
ಹಸುಳೆ ಸಾಯಲಿ ತಪದ ನೆವದಲಿ ।
ವಸುಧೆ ತನ್ನ ಮಗಂಗೆ ನಿಷ್ಕಂಟಕದಲಹುದೆಂದು ॥
ಶಶಿವದನೆ ಹೇಳಿದೊಡೆ ನಿಜಮತಿ ।
ವಿಷಮವೆಂತಾಯ್ತೆನುತ ಬಸಿರನು ।
ಹೊಸೆಹೊಸೆದು ಹೊರಳಿದಳು ಬಾಯ್ದೆರೆದಳುತ ಲಲಿತಾಂಗಿ ॥ ೫೧

ಏಕೆ ಪಡೆದೆನು ಮಗನನಡವಿಗೆ ।
ನೂಕಲೆಂದೀ ಹರಯುದಲಿ ತಪ ।
ವೇಕೆ ತಾನೇಕೀಸು ದುಸ್ಥಿತಿಯಿರವು ತನಗೇಕೆ ॥
ಏಕೆ ವಿಧಿಯೆ ವೃಥಾವಮಾನದ ।
ಶೋಕವಹ್ನಿಗೆ ತನ್ನನೊಡ್ಡಿದೆ ।
ಯೇಕೆ ಬಾರದು ಸಾವೆನುತ ತೆಗೆದಪ್ಪಿದಳು ಮಗನಾ ॥ ೫೨

ಅಳಲಿ ಫಲವೇನಪ್ಪ ಕೊಲುವೊಡೆ ।
ಸಲಹುವೊಡೆ ಮುರವೈರಿಯಲ್ಲದೆ ।
ಕೊಲುವ ಕಾವ ಸಮರ್ಥರಾರೆಲೆ ತಾಯೆ ಜಠರದಲಿ ॥
ಸಲಹಿದವರಾರಾತನೇ ನೆರೆ ।
ಸಲಹುವನು ನೀನಂಜದಿರು ತಾ ।
ಕೆಲವುದಿನದೊಳಗೈತಹೆನು ನೋಡೆನುತ ಹೊರವಂಟ ॥ ೫೩

ಆ ಸಕಲಪರಿವಾರಪುರಜನ ।
ದೇಶಜನ ತಮತಮಗೆ ಮರುಗಿದು ।
ದಾಶಿಶುವಿನಂಘವಣೆಗಾಯಾಸದ ಪರಂಪರೆಗೆ ॥
ನೇಸರನು ಕಂಡರಿಯನರಿಯನು ।
ದೇಶಕಾಲವಿಭಾಗವನು ಲ ।
ಕ್ಷ್ಮೀಶನೊಲವೀತಂಗೆ ಸುಲಭವೆ ಶಿವಶಿವಾಯೆನುತ ॥ ೫೪

ಏನನೆಂಬೆನು ಘನನದೀಗಿರಿ ।
ಕಾನನಂಗಳ ಕಳೆದು ನಡೆದನು ।
ಮಾನನಿಧಿ ಮುಂಕೊಂಡು ಬರೆಬರೆ ಮುಂದೆ ದೂರದಲಿ ॥
ಭಾನುಶಶಿಪಾವಕಸಹಸ್ರ ಸ ।
ಮಾನತೇಜದ ತತ್ತ್ವವಿದ್ಯಾ ।
ದಾನಿ ನಾರದ ಮುನಿಪನಂದಿದಿರಾಗಿ ನಡೆತಂದ ॥ ೫೫

ಕಂಡನಿದಿರಲಿ ಶಿಶುವನಾತನ ।
ಮಂಡೆಯಲಿ ಕೈಯಿಟ್ಟು ತೆಗೆದಾ ।
ಖಂಡಲಾರ್ಚಿತಚರಣನಪ್ಪಿದನೆರಡು ಕೈದಣಿಯೆ ॥
ದಂಡಿಸುವರೇ ತನುವನವನೀ ।
ಮಂಡಲಾತ್ಮಜ ಎನುತ ಮುನಿ ಬೆಸ ।
ಗೊಂಡನೇತಕೆ ಬಳಲುತಿಲ್ಲಿಗೆ ಬಂದೆ ನೀನೆಂದು ॥ ೫೬

ಬದುಕಿದೆನು ತನ್ನಯ ಮನೋರಥ ।
ದುದಯವಿದೆಲಾ ಭಾಪು ಮಝು ಮುನಿ ।
ಪದಯುಗಳದರ್ಶನಪಯತ್ನದಲಾಯ್ತು ತನಗೆನುತ ॥
ಪದದ ಲೊಡಲನು ನೀಡಿದನು ದಂ ।
ಡದ ಪೊಲೊಯ್ಯಗೆ ಕೈಮುಗಿದು ಮುನಿ ।
ವದನವನು ನೋಡುತ್ತ ಬಿನ್ನಹ ಮಾಡಿದನು ಹದನ ॥ ೫೭

ತೊಡೆಯ ಮೇಲುತ್ತಮನು ಕುಳ್ಳಿರ ।
ಲೊಡನೆ ಕುಳ್ಳಿಹೆನೆಂದು ತಂದೆಗೆ ।
ಕಡುಕರುಣವನು ತೋರಿ ಕಾಡಿಯಳುತ್ತಿರಲು ಕಂಡು ॥
ಜಡಿದು ನೂಕಿದಳುತ್ತಮನ ತಾಯ್ ।
ನುಡಿಯುತೆನ್ನುತ ನೃಪನ ಪೀಠವ ।
ನಡರುವರೆ ನೀನಾರು ಸಾರೆಲೆ ಬಣಗು ಹೋಗೆಂದು ॥ ೫೮

ರಾಜಸಿಂಹಾಸನವ ನೇರುವ ।
ತೇಜವನು ಬಯಸುವರೆ ಭಜಿಸಂ ।
ಭೋಜನೇತ್ರನ ನೆನ್ನ ಬಸಿರಲಿ ಮತ್ತೆ ಮಗನಾಗಿ ॥
ನೀ ಜನಿಸು ಹೋಗೆನಲವಜ್ಞೆಗೆ ।
ಭಾಜನನು ತಾನಾಗಿ ಪೂಜಿಸು ।
ಪೂಜೆಯನು ನಾನರಿಯೆ ನಿತ್ತಲು ಬಂದೆನಾನೆಂದ ॥ ೫೯

ಎಂತು ತನಗೆಲೆ ಮುನಿಪ ಲಕ್ಷ್ಮೀ ।
ಕಾಂತನೊಲವಹುದಲ್ಪಕಾಲದ ।
ಲಂತು ಕರುಣಿಸ ಬೇಹುದೆನ್ನಯ ಭಾಗ್ಯವೇ ತನುವ ॥
ಮುಂತೆ ಕೈಕೊಂಡ ಪೊಲು ಬಂದೆ ಮ ।
ಹಾಂತ ಮಝುಭಾಪಾವುದೋ ಜ ।
ನ್ಮಾಂತರಾರ್ಜಿತ ಸುಕೃತವೆಂದೆರಗಿದನು ಚರಣದಲಿ ॥ ೬೦

ಎತ್ತಿದನು ನಸುನಗುತ ಶಿಶುವಿನ ।
ಮಸ್ತಕವನಾಪದ್ಗತರನೊಲಿ ।
ದೆತ್ತು ವಂತಿರೆ ನೆಗಹಿ ತೊಡೆಯಲಿ ತೆಗೆದು ಕುಳ್ಳಿರಿಸಿ ॥
ನೆತ್ತಿಯನು ವಾಸನಿಸಿ ನಯನ ಜ ।
ಲೋತ್ತರದ ಸಸ್ನೇಹವಚನದ ।
ಲುತ್ತಮಾಂಗವ ತೂಗುತೆಂದನು ನೃಪತನೂಜಂಗೆ ॥ ೬೧

ಹಾಲ ಹಸುಳೆಯು ನಿಂತುಭಂಗಿಸಿ ।
ಬೀಳಜಡಿದಡವಿಯನು ಹೊಗಿಸುವ ।
ಕಾಳುಮುಂಡೆಯನೇನನೆಂಬೆನು ಸುರುಚಿಯೆಂಬವಳ ॥
ಹೇಳಲೇಕಿನ್ನವನಿಪನ ದು ।
ಶ್ಶೀಲವನು ನಿಮ್ಮವ್ವೆ ನಿನ್ನನು ।
ಬೀಳುಕೊಟ್ಟಳೆ ಬಹಳ ಕಾನನಕೆಂದು ಬಿಸುಸುಯ್ದು ॥ ೬೨

ಎಂತು ನೀನೆಲೆ ಮಗನೆ ಲಕ್ಷ್ಮೀ ।
ಕಾಂತನನು ಮೆಚ್ಚಿಸುವೆ ಘನವಿಪಿ ।
ನಾಂತರದಲೆಂತೊಬ್ಬನಿಹೆ ಖಗಮೃಗಭಯಂಕರವ ॥
ಎಂತು ನೀ ಸೈರಿಸುವೆ ತಪದೊಳ ।
ಗೆಂತು ಯೋಗಿಮನೋ ವಿದೂರನ ।
ನೆಂತು ಕಂಡಪೆ ಬರಿದೆಬಳಲಿದೆ ಮಗನೆ ನಡೆಯೆಂದ ॥ ೬೩

ಹಲವು ಜನ್ಮದ ತಪದಲಾವನ ।
ನೊಲಿಸಲರಿಯರು ತಾಪಸರು ನೀ ।
ನೊಲಿಸುವುದು ತಾನೆಂತು ದುರ್ಬಲನಲೆ ಮನೋರಥವ ॥
ಬಳಸುವರೆ ನಿಜದೇಹ ಶಕ್ತಿಯು ।
ನೆಲೆಯು ನರಿಯದೆ ಹಸುಳೆ ಮಾವಿನ ।
ಫಲವ ನರ್ಥಿಸುವಂತೆ ವಿಫಲವಿದೆಂದನಾ ಮುನಿಪಾ ॥ ೬೪

ಎಂತುಟೀಶ್ವರನೊಲವಿನಲಿ ಬಹೊ ।
ದೆಂತುಟಲ್ಲದೆ ಬಯಸಿ ಮನದಲಿ ।
ಚಿಂತಿಸಿದೊಡತಿಶಯ ಪದಾರ್ಥದ ಸಿದ್ಧಿ ತನಗಹುದೇ ॥
ಸಂತವಿರು ಮರುಗದಿರು ಸಾಕಿದ ।
ರಂತವನು ನೀನರಿಯೆ ನೆರೆ ಬಲ ।
ವಂತನಾದಂದಿಗೆಯು ಪೂಜಿಸಬಹುದು ನಡೆಯೆಂದ ॥ ೬೫

ಆದೊಡೇನಾ ಸವತಿ ತಾಯ ವ ।
ಚೋದುರಂತಾಗ್ನಿಯಲಿ ತನ್ನೆದೆ ।
ಕಾದುದರೊಳು ನಿನ್ನ ವಚನಾಮೃತದ ಬಿಂದುಗಳು ॥
ನಾದಲರಿಯವು ತನ್ನ ಮನದ ವಿ ।
ಷಾದವಡಗದು ಖತಿಗೆ ಕೈನೆಲ ।
ನಾದುದೀ ರಾಜಸದ ಮನವಿದು ಮುನಿಪ ಕೇಳೆಂದ ॥ ೬೬

ಮುನಿಪ ಬಿನ್ನಹ ಬಹಳ ಕರುಣಾ ।
ವನಧಿಗಳು ನಿಮ್ಮಂದದವರಾ ।
ರಿನಿತು ಜಗದಲಿ ಸಕಲ ವಿಬುಧ ಮುನೀಂದ್ರ ನಿಕರದಲಿ ॥
ದನುಜ ಹರನನು ಕಂಡೆ ನಿನ್ನೇ ।
ನನುಪಮನೆ ನಿಮ್ಮಡಿಗಳೀಲೋ ।
ಚನಕೆ ಗೋಚರವಾಗಲಾಯ್ತು ಸ್ವಾರ್ಥ ತನಗೆಂದ ॥ ೬೭

ಇಂದು ಹಸುಳೆ ಸಮರ್ಥನಲ್ಲಿದ ।
ಮುಂದೆ ಸಾಧಿಸಿಕೊಂಬೆ ಯೆಂದೊಡೆ ।
ತಂದೆ ಬಿನ್ನಹ ಮಾಡಲಂಜುವೆ ನೊಡಲು ಶಾಶ್ವತವೆ ॥
ಸಂದಹೆಮ್ಮರನಂತೆ ಬದುಕಿದೆ ।
ನೆಂದೊಡದು ಫಲವಿಲ್ಲಲೈ ಗೋ ।
ವಿಂದನೊಲವಳವಡದೊಡೀ ಜೀವನವಿದೇಕೆಂದ ॥ ೬೮

ಮುನ್ನ ಸುರನರ ಲೋಕಪಾಲರು ।
ಪನ್ನಗಾಧೀಶ್ವರರು ಸಾಧಿಸಿ ।
ಮುನ್ನ ತೋನ್ನತ ಪದವ ನಾರೋಹಿಸುವ ಮನವೆನಗೆ ॥
ಅನ್ಯರೈಶ್ವರ್ಯವನು ಪದವನು ।
ಇನ್ನು ಬಯಸುವನಲ್ಲ ಬಹಳ ಕೃ ।
ಪಾರ್ಣವನೆ ಕರುಣಿಸುವುದಾವುದು ಪಾಯವೆನಗೆಂದು ॥ ೬೯

ಹಲವು ಮಾತೇಕಾನು ನಿಮ್ಮಡಿ ।
ಗಳಿಗೆ ಶಿಶು ನೀವಾವ ಪರಿಯಲಿ ।
ಕಲಿಸಿದುದ ನಾಚರಿಸಿ ಶುದ್ಧನು ಹಾನಿವೃದ್ಧಿಗಳು ॥
ಸಲಿ ಸಮಸ್ತವದೆಲ್ಲ ನಿಮ್ಮದು ।
ನಳಿನದೃಶ ನಿತ್ಯಾತುಮನಪದ ।
ನಳಿನವನು ತೋರಿಸುವುದೆಂದೆರಗಿದನು ಮುನಿಪದಕೆ ॥ ೭೦

ಸೂಚನೆ ॥ ದೇವಮುನಿಯುಪದೇಶದಲಿ ನರ
ದೇವನಂದನನರ್ಚಿಸಿದನಾ
ದೇವದೇವನ ಚರಣಕಮಲವನಧಿಕಭಕುತಿಯಲಿ ॥

ತಾಯಿ ಹೇಳಿದ ಮಾರ್ಗವೇ ನಿ ।
ಶ್ರೇಯಸಕೆ ನಿನ್ನಿಷ್ಟಸಿದ್ಧಿಗು ।
ಪಾಯ ಕೇಳಲೆ ಮಗನೆ ಭಜಿಸು ಮುರಾಂತಕನ ಪದವ ॥
ಆಯಿತೆಂದರಿ ನಿಜಮನೋಭಿ ।
ಪ್ರಾಯಸಿದ್ಧಿ ದಯಾಪನಧಿ ನಾ ।
ರಾಯಣನಲಾ ಬಳಿಕ ದುರ್ಲಭವಿಲ್ಲ ಕೇಳೆಂದ ॥ ೭೧

ಕೊರಳ ಮಣಿಕೌಸ್ತುಭಮಹದ್ಯುತಿ ।
ಭರಿತವಕ್ಷಸ್ಥಲದ ಲಕ್ಷ್ಮಿಯ ।
ಪರಿವಸಿತ ವನಮಾಲೆಗಳ ಸಿರಿವತ್ಸಲಾಂಛನದ ॥
ಕರಚತುಷ್ಟಯ ದೀಪ್ತಿ ಚಕ್ರಾಂ ।
ಬುರುಹ ಶಂಖ ಗದಾಪ್ರಭಾ ಭಾ ।
ಸುರದಿಗಂತದ ದಿವ್ಯಮೂರ್ತಿಯ ಬಿಡದೆ ನೆನೆಯೆಂದ ॥ ೭೨

ಮಧುಮಥನನಂಘ್ರಿಯನು ಪೂಜಿಸು ।
ವಿಧಿವಿಹಿತಮಾರ್ಗದಲಿ ತಪ್ಪದೆ ।
ಮಧುವನಕೆ ನೀ ಹೋಗು ಹರಿಪದಪಾವನಸ್ಥಳಕೆ ॥
ವಿಧೃತಪಾತಕವೆನಿಪ ಯಮುನೆಯ ।
ಸುಧೆಗೆ ಸಮವಹ ಪುಣ್ಯಜಲದಲಿ ।
ವಿಧಿಗಳನು ವಿರಚಿಸು ಮನೋರಥವಹುದು ನಡೆಯೆಂದ ॥ ೭೩

ಸಿದ್ಧಿಸಲಿ ನಿನ್ನಿಷ್ಟಫಲ ಸ ।
ಶ್ರದ್ಧೆಯಲಿ ನೆರೆ ಭಜಿಸು ಹೋಗೆಲೆ ।
ಬುದ್ಧಿವಂತನೆ ಕಾಣಬಹುದಂಜದಿರು ಮುರಹರನ ॥
ಶ್ರದ್ಧೆಯುಳ್ಳಂಗಖಿಳಸೌಖ್ಯಸ ।
ವೃದ್ಧಿಗಳು ಸೇರುವುವು ವಿಗತ ।
ಶ್ರದ್ಧನಾದಂಗಿಹಪರದ ಸುಖವಿಲ್ಲ ಕೇಳೆಂದ ॥ ೭೪

ನಡೆ ಮಗನೆ ನೈದೋರುವನು ಜಗ ।
ದೊಡೆಯನೆನುತ ಕೃಪಾವನಧಿ ತಲೆ ।
ದಡವಿ ಮುನಿ ಕಾರುಣ್ಯದಲಿ ತನಯನನು ಬೀಳ್ಕೊಳಿಸೆ ॥
ಅಡಿಗೆರಗೆ ಬಲವಂದು ಮುನಿಪನ ।
ಬಿಡಲರಿಯದುಮ್ಮಳಿಸುತೊಯ್ಯನೆ ।
ಪೊಡವಿಪಾಲಕುಮಾರನೈತಂದನು ತಪೋವನಕೆ ॥ ೭೫

ಜಿರಳ ಮೂಗಿನತೀಕ್ಷಿಸುತ ನೃಪ ।
ವರಕುಮಾರನ ಗಮನವನು ಕಡು ।
ಕರುಣೆ ಹೆತ್ತವರಾವ ಕಲುಹೃದಯರೋ ಮಹಾದೇವಾ ॥
ಪರಿಕಿಸುವೆನಿದನೆನುತ ಭೂಪನ ।
ಪುರಕೆ ಬಿಜಯಂಗೈದನಮರಾ ।
ಸುರನಮಸ್ಕೃತಚರಣಹರಿನಾರಾಯಣಾ ಯೆನುತ ॥ ೭೬

ಧರಣಿಪತಿ ದೂರದಲಿ ಕಾಣುತ ।
ಪರಮುನಿಪನಾಗಮನವನು ಹರ ।
ಹರಮಹಾದೇವ: ಆಯ್ತಲಾ ತನ್ನಯ ಮನೋರಥವ ॥
ಪರಮಸಿದ್ಧಿಯೆನುತ್ತ ಮುಕುಳಿತ ।
ಕರಸರೋರುಹನಾಗಿ ನೃಪವಿ ।
ಷ್ಟರವನಿಳಿದಂದಿದಿರುಗೊಂಡನು ಸಕಲಜನಸಹಿತ ॥ ೭೭

ಆ ಸುರರ್ಷಿಪ್ರವರನಾದರ ।
ದೋಳುಪಚಾರವನು ಕೈಕೊಳು ।
ತಾಸನದಲುಪವಿಷ್ಟನಾಗಿ ಸುಖೋಪವಿಷ್ಟನನು ॥
ಲೇಸೆ ನಿನಗೆ ಸಮಸ್ತಪುರಜನ ।
ದೇಶಜನ ಪರಿವಾರನಿಕರಕೆ ।
ಮಾಸಿತೇತಕೆ ವದನಲಕ್ಷ್ಮಿಯೆನುತ್ತ ಬೆಸಗೊಂಡ ॥ ೭೮

ಬೆಸಗೊಳಲು ಶೋಕಾನಲನನೆ ।
ಬ್ಬಿಸಿದವೋಲಾಯ್ತವನಿಪಾಲನ ।
ಬಸಿರನಾವರಿಸಿತ್ತು ಶೋಕಾಶ್ರುಗಳು ಕಂಗಳಲಿ ॥
ಒಸರಿದುವು ಪುತ್ರಾನುರಾಗ ।
ವ್ಯಸನಿ ಬಿಸುಸುಯ್ಯುತ್ತ ಮುನಿಪದ ।
ಬಿಸರುಹಕೆ ತಲೆವಾಗಿ ಬಿನ್ನಹಮಾಡಿದನು ಪದನ ॥ ೭೯

ಏನನೆಂಬೆನು ಮುನಿಪ ಮನದ ।
ಜ್ಞಾನವನು ಚಿತ್ತವಿಸು ಪುಣ್ಯಾವಿ ।
ಹೀನನಾದೆನಲಾ ನಿಜಾನ್ವಯತಿಲಕನೆಂವೆನಿಪ ॥
ಸೂನುವನು ಹೊರವಡಿಸಿ ಕಳೆದೆನು ।
ಕಾನನಕೆ ಕಾರುಣ್ಯವಿಲ್ಲದ ।
ಮಾನವನೀಕ್ಷಿಸುವಿರೇತಕೆ ಪಾಪಿ ತಾನೆಂದ ॥ ೮೦

ಅಕಟ ತನ್ನಂದದ ದುರಾತ್ಮರು ।
ವಿಕಳಮತಿಗಳದಾರು ನಿಜಬಾ ।
ಲಕನನೈದೇ ವರುಷದಲಿ ಸುಕುಮಾರಕಾಯನನು ॥
ಸುಕೃತಹೀನನು ನೂಕಿದೆನಲಾ ।
ಚಕಿತನನು ಕಾನನಕೆ ಪುಣ್ಯಾ ।
ತ್ಮಕನೆ ಇನ್ನದನೇನನೆಂಬೆನು ತನ್ನ ದುಷ್ಕೃತವ ॥ ೮೧

ಬಿಸಿಲ ಬೇಗೆಯ ಬೇಸರನು ಸೈ ।
ರಿಸುವನೆಂತರ್ಭಕನು ವನದಲಿ ।
ಹಸಿವುತೃಷೆಯಲಿ ಬಳಲಿ ನಿದ್ರೆಯ ಭರದಲಿರೆ ವನದಾ ॥
ಹಸಿದ ಹುಲಿಕರಡಿಗಳು ತಿನ್ನವೆ ।
ಶಿಶುವನಾನಿಂನೆಂದು ಕಂಡಪೆ ।
ನುಸಿರಪೆಣನನು ಮಾತನಾಡಿಸಬೇಡಿ ನೀವೆಂದ॥ ೮೨

ತೊಡೆಯನೇರಲು ಬಂದ ಮಗನನು ।
ಮಡದಿ ಪಾತಕಿ ಜೈದು ಭಂಗಿಸಿ ।
ಜಡಿದು ನೂಕಲು ನೋಡುತಿದ್ದೆನು ಕಾಣದವನಂತೆ ॥
ನಡೆವೆಣನನಿನ್ನೇನ ಕೇಳುವೆ ।
ಕೆಡಿಸುದುದು ವಿಧಿ ತನ್ನನಾರಿಗೆ ।
ನುಡಿವೆನೆನ್ನ ಮನೋವ್ಯಥೆಯನಿದನೆಂದು ಬಿಸುಸುಯ್ದು ॥ ೮೩

ಈ ಮಾತನ್ನು ಕೇಳಿ ನಾರದರು—

ವಾಯುವಶದಲಿ ನಡೆವ ಮೇಘನಿ ।
ಕಾಯದಂತಿರಲಖಿಳಜೀವನಿ ।
ಕಾಯವನು ಭಯಶೋಕಸುಖದುಃಖಾನುಭವಗಳಲಿ ॥
ಶ್ರೀಯ ವಲ್ಲಭನೆಂದೆನಿಪ ನಾ ।
ರಾಯಣನೆ ನಡಿಸುವನು ಕೊಲ್ಲಲು ।
ಕಾಯಲಿಕೆ ಕಮಲಾಕ್ಷನಲ್ಲದೆ ಬೇರದಾರೆಂದ ॥ ೮೪

ಮರುಗದಿರು ಸಂತವಿರು ಸಾನೀ ।
ಬರುತ ಕಂಡೆನು ನಿನ್ನ ಮಗನನು ।
ಮುರವಿರೋಧಿಯನೊಲಿಸಿ ತಪದಲಿ ಭಾವಭಕ್ತಿಯಲಿ ॥
ನಿರುತವಿಷ್ಟಾರ್ಥವನು ಲೋಕೋ ।
ತ್ತರದ ಪದವನು ಪಡೆದು ತಳುವದೆ ।
ಕಿರಿದು ದಿನಕ್ಕೈತಹನು ಶಿಶು ಕೇಳೆಂದನಾಮುನಿಪ ॥ ೮೫

ಸಂತವಿಹುದೀ ಲೋಕವೀಶ್ವರ ।
ತಂತ್ರವೆಂದರಿದಳಲಬೇಡೆನು ।
ತಂತರಿಕ್ಷವನಡರಿದನು ಸುರಮುನಿ ನಿಜೇಚ್ಛೆಯಲಿ ॥
ಕೊಂತ ಮರುವೊನೆಗೊಂಡವೊಲು ಭೂ ।
ಕಾಂತನನುದಿನ ನಿಜಕುಮಾರನ ।
ಚಿಂತೆಯಲಿ ನಿರ್ವಿಣ್ಣನಾದನು ನಿಖಿಲಭೋಗದಲಿ ॥ ೮೬

ಅತ್ತಲಾ ಧ್ರುವನು ಕಾಳಿಂದಿಯ ಪವಿತ್ರವಾದ ಜಲದಲ್ಲಿ ಸ್ನಾನವನ್ನುಮಾಡಿ ಕ್ರಮವಾಗಿ ಫಲಾಹಾರ ಪರ್ಣಾಹಾರ ಉಪವಾಸಗಳನ್ನು ಮಾಡಿಕೊಂಡು ಏಕ ಪಾದದಲ್ಲಿ ನಿಂತು ನಿಯಮದಿಂದ ಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಇವನ ತಪೋಜ್ವಾಲೆಯನ್ನು ಸಹಿಸಲಾರದೆ ಇಂದ್ರಾದಿದೇವತೆಗಳು ಇವನ ತಪಸ್ಸನ್ನು ಕೆಡಿಸುವುದಕ್ಕೆ ಎಷ್ಟುಪ್ರಯತ್ನಮಾಡಿದರೂ ತಮ್ಮಿಂದ ಸಾಗದೆ ನಾರಾಯಣನ ಸನ್ನಿಧಿಗೆಬಂದು ಹೇಳಿಕೊಳ್ಳಲು, ನಾರಾಯಣನು ಅವರನ್ನೆಲ್ಲಾ ಸಮಾಧಾನಮಾಡಿ ಕಳುಹಿಸಿ ಧ್ರುವನ ಸಮೀಪಕ್ಕೆ ಬಂದನು.

ಅರಿಯನದನಾ ಬಾಲಕನು ಮೈ ।
ಮರೆದು ಮನದಲಿ ಹರಿಪದಾಬ್ಜವ ।
ಸೆರೆವಿಡಿದು ಬೇರೊಂದನರಿಯದೆ ಯೋಗನಿಷ್ಠೆಯಲಿ ॥
ಇರಲು ಮಿಂಚಿನವೋಲು ಹೊಳೆಹೊಳೆ ।
ದರತುದಂತರ್ಧಾನರಸ ಕಣ್ ।
ದೆರೆದು ಕಂಡನು ಮುಂದೆನಿಂದ ಮುಕುಂದನಾಕೃತಿಯಾ ॥ ೮೭

ಎದ್ದನೀಕ್ಷಿಸುತವೆ ಭಯಾಬ್ಧಿಯ ।
ಲದ್ದ ಕಂಗಳ ಹರುಷರಸದ ಸ ।
ಮುದ್ರದೊಳಗೋಲಾಡುತುನ್ನತ ಪುಳಕ ಭಾರದಲಿ ॥
ಭದ್ರಕಾಯನ ನೆನೆದು ಮುದಿತೋ ।
ನ್ನಿದ್ರವದನನು ದಂಡದಂತಿರೆ ।
ಬಿದ್ದನಚ್ಯುತನಂಘ್ರಿಯಲಿ ಜಯಜಯತು ಜಯುಯೆನುತ ॥ ೮೮

ಹೆತ್ತವರು ಹಸುಳೆಯನು ತನ್ನನು ।
ಮೃತ್ಯುವಿನ ಕೈವಶಕೆ ಕೊಡಲಾ ।
ರೆತ್ತಿಕೊಂಡವರೀಭಯಂಕರಕಾನನಾಂತರದಿ ॥
ಸತ್ತವನಲಾ ವಿಘ್ನಕೋಟಿಯ ।
ನುತ್ತರಿಸಿ ಭವದೀಯಕೃಪೆಯಲಿ ।
ಮತ್ತೆ ದೇವರ ಚರಣಕಮಲವ ಕಂಡೆನಾನೆಂದ ॥ ೮೯

ಪೊಡವಡುವಡಾಂ ಬಲ್ಲೆನೆಂಬೀ ।
ನುಡಿಗೆ ನೀನೇ ಪ್ರೇರಕನು ತ ।
ನ್ನೊಡಲಿನಸುವಿಗೆ ಚೇತನಕೆ ಚೈತನ್ಯಕಾಧಾರ ॥
ಕಡಗಿ ಹಸುಳೆಗೆ ಹಿತವನಾ ಹೊ ।
ತ್ತೊಡಲು ಪಾಳ್ಪವೊಲೆನಗಭೀಷ್ಟವ ।
ಕೊಡಲು ನೀನೇ ಬಲ್ಲೆ ಯೆನುತೆರಗಿದನು ಚರಣದಲಿ ॥ ೯೦

ಅರಿದೆನೇಳೇಳೆಲೆ ಮಗನೆ ಮನ ।
ದರಿಕೆಯನು ಸಲಿಸಿದೆನು ಬಾಯೆನು ।
ತೆರಗಿ ನೆಗಹಿದನಪ್ಪಿದನು ಕೈದಣಿಯೆ ಬಾಲಕನ ॥
ನೆರೆ ಮಹಾತಪದಿಂದ ತನುವನು ।
ಬರಿದೆ ಬಳಲಿಸಿದ್ದೆಯೆನುತ ಮುಂ ।
ಜೆರಗಹೊದಿಸಿದನೆತ್ತಿತೊಡೆಯಲಿ ತೆಗೆದು ಕುಳ್ಳಿರಿಸಿ ॥ ೯೧

ಅಡಿಗಡಿಗೆ ವೈದಡವಿ ಹುಡಿಯನು ।
ತೊಡೆದು ಬಳಿಕೊಲವಿಂದ ಮೆಲ್ಲನೆ ।
ನುಡಿದನನುರಾಗಾಶ್ರುಪೂರಿತನಯನದಲಿ ನೋಡಿ ॥
ತಡೆಯದಿತ್ತೆನು ತಂದೆ ಕಾಲನ ।
ಖಡುಗಹತಿಗೊಳಗಾಗದಾರಿಗೆ ।
ಕೊಡದ ಪದವನು ಪರಮಭಾಗ್ಯಾಧಿಕನೆ ನಿನಗೆಂದ ॥ ೯೨

ತೊಳಲುವುದು ಭಯಗೊಂಡು ಸುರಮುನಿ ।
ಕುಲವದನವರತಾವುದೊಂದನು ।
ತೊಳಲುವೆತ್ತುಗಳಂತೆ ಮೇಟಿಯ ಕಂಬವನು ಬಳಸಿ ॥
ಸಲಿಸಿದೆನು ನಿನಗಿದನು ರಾಜ್ಯವ ।
ನೊಲಿದು ಭೋಗಿಸಿ ಸಲಹಿ ಧರೆಯನು ।
ಬಳಿಕ ಬಹೆ ತಾ ಕರಸಿಕೊಂಬೆನು ಮಗನೆ ಕೇಳೆಂದ ॥ ೯೩

ಆರೆನೆನಬೇಡವನಿಗಿಪ್ಪ ।
ತ್ತಾರು ಸಾವಿರ ವರುಷ ಪ್ರಭುವಾ ।
ಗೇರಿ ಸಿಂಹಾಸನವನಾಳು ಸಮಸ್ತರಾಜ್ಯವನು ॥
ಜಾರಿಸೈ ಕರ್ಮವನು ಮನವನು ।
ಬೇರಿರಿಸಿ ತನ್ನೊಳಗೆ ಮತಿಯೆಡೆ ।
ಯಾರದೆಂತೆನ್ನ ಮಳಚರಿತವ ಕೇಳುತಿಹುದೆಂದ ॥ ೯೪

ಪರಮ ಪುಣ್ಯಶ್ಲೋಕವೆಸರನು ।
ಧರಿಸಿ ಪಾವನ ಕೀರ್ತಿಯನು ವಿ ।
ಸ್ತರಿಸಿ ಪೂಜಿಸಿ ಬಹಳವರಮುಖದಿಂದ ತನ್ನುವನು ॥
ಮರಳುತಲಿ ಮಗುಳಿಲ್ಲದೆನ್ನಯ ।
ಪರಮಪುಣ್ಯಸ್ಥಾನವನು ನೀ ।
ನಿರದೆ ಪಡೆವೆಯೆನುತ್ತ ಪರಮಕೃಪಾಳು ನೇಮಿಸಿದ ॥ ೯೫

ನಡೆ ಮಗನೆ ಪುರಕೆಂದು ಪೇಳಿದ ।
ನುಡಿಯ ಕೇಳುತ ಕಾಲ ಮೇಲಡ ।
ಗೆಡೆದು ಹೊರಳಿದನರ್ಭಕನು ನಯನಾಶ್ರು ಜಲವುಗಲು ॥

ಬಿಡದಲಾ ರಾಜ್ಯೋಪಭೋಗದ ।
ತೊಡಕು ತನ್ನನು ದೇವ ಸೇವುವ ।
ಕೊಡದಿರಂಜುವೆನಗಲಿಕೆಂಬ ಮಾತಾಡಬೇಡೆಂದ ॥ ೯೬

ಎನಲು ತೆಗೆದಪ್ಪಿದನು ತನ್ನನು ।
ಮನದೊಳಗೆ ಭಾವಿಸಿ ನಿರಂತರ ।
ನೆನೆದು ಸುಖಿಸುತ್ತಿಹುದು ನಿರ್ಮಮತೆಯಲಿ ರಾಜ್ಯದಲಿ ॥

ತನುವಿರಲಿ ಮನವೆನ್ನ ಪದಯುಗ ।
ವನಜದಲಿ ವರ್ತಿಸಲಿ ಹೋಗಾ ।
ದಿನ ಹಲವು ಕಾಡದಿರು ತನ್ನನು ಮಗನೆ ನೀನೆಂದ ॥ ೯೭

ಹಾನಿವೃದ್ಧಿಗಳೈದೆ ತನ್ನದು ।
ನೀನಿದಕೆ ಚಿಂತಿಸದಿರೆನುತ ಕೃ ।
ಪಾನುರಂಜಿತಹೃದಯನಾಬಾಲಕನ ಮೈದಡವಿ ॥

ಮಾನನಿಧಿ ಕುಳ್ಳಿರಿಸಿ ಧರೆಯಲಿ ।
ಮಾನವೇಂದ್ರನ ಶಿಶುವನಂತ ।
ರ್ಧಾನಗತಿಯನು ನೆನೆದನಮರಾನೀಕ ಕೈಮುಗಿಯೆ ॥ ೯೮



# ನ ಳ ಚ ರಿ ತ್ರೆ .

॥ ಭಾಮಿನೀ ಷಟ್ಪದಿ ॥

---

ಸೂಚನೆ ॥ ಮರುಗೆ ಪುರಜನ ಜೂಜಿನಲಿ ಪು ।
ಷ್ಕರಗೆ ರಾಜ್ಯವ ಸೋತು ನಳಭೂ ।
ವರನು ನಿಜಸತಿ ಸಹಿತ ನಡೆತಂದನು ವನಾಂತರಕೆ ॥

ಕೇಳು ಕುಂತೀತನಯ ನಳನೃಪ ।
ಬೀಳುಕೊಂಡನು ಪುರವನಲ್ಲಿಂ ।
ಮೇಲೆ ನಡೆದರು ಪಯಣಗತಿಯಲಿ ಹಲವುಯೋಜನವ ॥
ಹೇಳಲೇನಿನ್ನವರ ವಿಧಿಯನು ।
ನಾಲಗೆಗಳೊಣಗಿದುವು ಸತಿಯಳ ।
ಕಾಲೊಡೆದು ಬಸಿವರುಣಜಲದಲಿ ಬಟ್ಟೆ ಕೆಸರಾಯ್ತು ॥ ೯೯

ಎಳೆಯಬಾಳೆಯ ಸುಳಿಯನನಲ ।
ಜ್ವಲನ ಹೊಯ್ಲಲಿ ಕಾಯಿಸಿದವೋಲ್ ।
ಬಳಲಿದಬಲೆಯ ಕಂಡು ನೃಪ ಮರುಗಿದನು ಮನದೊಳಗೆ ॥
ಲಲಿತಹೇಮದ ತೂಗುಮಂಚದ ।
ಹೊಳೆವ ಹಂಸೆಯ ಹಾಸಿನಲಿ ತಾ ।
ಮಲಗುತಿಹ ಸತಿಗೀವಿಧಿಯೆ ಹಾಯೆನುತ ಬಿಸುಸುಯ್ದ ॥ ೧೦೦

ಮರುಗಲಿನ್ನೇಕರಸ ಬಿಡು ವಿಧಿ ।
ಬರೆದ ಬರೆಹವ ತಪ್ಪಿಸಲು ಹರಿ ।
ಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು ॥
ಹರಿವುದಾಕ್ಷಣ ತುಂಬುವುದು ಗೋ ।
ಚರಿಸುವುದು ಸಿರಿ ನಿತ್ಯವೇ ಇದ ।
ನರಿಯದವನೇ ನೋಯಲೇಕೆಂದಳು ಸರೋಜಮುಖಿ ॥ ೧೦೧

ಡಿಯು ಕೇಳುತ ಮನದಿ ಮಿಡುಕುತ ।
ಡವಿಪನು ಸತಿಸಹಿತ ಘನವಾ ।
ಡವಿಯಲಿ ಬರುತಿರೆ ಜಗನ್ಮೋಹನದ ಪಕ್ಷಿಗಳು ॥
ಡವಿಗಿಳಿಯಲು ಕಂಡಪೇಕ್ಷಿಸಿ ।
ಡಿವೆನೆಂದುರವಣಿಸಿ ನೃಪ ಹ ।
ಡವ ಬೀಸಿದೊಡದನು ಕೊಂಡೊಯ್ದುವು ನಬಸ್ಥಳಕೆ ॥ ೧೦೨

ಧರೆಯು ಸಂಪದದಿಷ್ಟಭೋಗವ ।
ಪರಿಹರಿಸಿ ನಿಜಪುತ್ರಮಿತ್ರರ ।
ತೊರೆದು ನಂಬಿದ ಸತಿಯು ಘೋರಾರಣ್ಯ ಮಧ್ಯದಲಿ ॥
ಹಿರಿದು ಬಳಲಿಸಿ ನೋಯಿಸಿದ ಕೇಳ್ ।
ತರುಣಿಎನ್ನವೊಲುಂಟೆ ಪಾಪಿಗ ।
ಳರಿಯೆ ನೀ ಪೋಗಿನ್ನು ತಂದೆಯ ಮನೆಗೆ ನಡೆಯೆಂದ ॥ ೧೦೩

ಇನಿಯನಾಡಿದ ಮಾತಿಗಂಗನೆ ।
ಕನಲಿ ನುಡಿದಳು ಶೋಕದಲಿ ನೀ ।
ನಿನಿತು ಮುನಿದಾಡುವರೆ ಸಾಕಿನ್ನಾರು ಗತಿಯೆನಗೆ ॥
ಅನುದಿನವು ನಾ ನಿಮ್ಮ ಪದಯುಗ ।
ವನಜವನು ಭಜಿಸುವುದನುಳಿದೀ ।
ತನುವ ಸೈರಿಸಲಾರೆ ನೀ ಕೇಳಂದಳಿಂದುಮುಖಿ ॥ ೧೦೪

ನೆಳಲು ತನುವಿನ ಬಳಿಯೊಳಲ್ಲದೆ ।
ಚಲಿಸುವುದೆ ತಾ ಬೇರೆ ಗತಿಯೇ ।
ಹಲಿವು ಮಾತಿನ್ನೇಕೆ ನೀವೇ ಗತಿಯಲೇ ಎನಗೆ ॥
ಹಳುವವೇ ಸಾಮ್ರಾಜ್ಯ ನಿಮ್ಮಡಿ ।
ನೆಳಲಿನಲ್ಲಿರೆ ನಿಮ್ಮನಗಲಿದ ।
ನಿಳಯವೇ ಎನಗಡವಿಯಹುದೆಂದಳು ಸರೋಜಮುಖಿ ॥ ೧೦೫

ಎನುತ ಸುರಿದಳು ಕಣ್ಣಿನಲಿ ಕಂ ।
ಬನಿಯ ಮಿಡಿದಳು ಬೆರಳಿನಲಿ ನಾ ।
ನಿನಿತು ಮಾಡಿದ ಕರ್ಮಫಲವಿದಕೇನು ಮಾಡುವುದು ॥
ಎನಗೆ ಚಿಂತಿಸಲೇಕೆ ನೀ ಏಂ ।
ದಿನಲಿ ಚಿತ್ತದ ನಿರ್ಮಳದಿ ಕಾ ।
ನನದಿ ಚರಿಸುವೆ ನಿನ್ನೊಡನೆ ತಾನೆಂದಳಿಂದುಮುಖಿ ॥ ೧೦೬

ಎಂದ ಸತಿಯನು ಸಂತವಿಟ್ಟರ ।
ವಿಂದನಯನಧ್ಯಾನದಲಿ ಬರೆ ।
ಮುಂದೆ ಘೋರಾರಣ್ಯವೆಸೆದುದು ಘನಭಯಂಕರದಿ ॥
ಸಂದ ಘನಮೃಗವಲ್ಲಿ ನೆರೆದಿರೆ ।
ಬಂದು ಹೊಕ್ಕರು ಕಾನನವನರ ।
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ॥ ೧೦೭

ಲೋಕಕಧಿಪತಿ ನಳನ ರಾಣಿಗೆ ।
ಶೋಕ ಪರ್ಬಿದ ತೆರದಿ ಕತ್ತಲೆ ।
ಲೋಕವನು ಮುಸುಕಿದುದು ಧರಣಿಯ ಮುಚ್ಚಿದಂದದಲಿ ॥
ಭೀಕರಧ್ವನಿಗಳಿಗೆ ಹೆದರಿದ ।
ಳಾಕಮಲಲೋಚನೆಯ ಕಂಡು ವಿ ।
ವೇಕನಿಧಿ ಸಂತೈಸಿದನು ನಳನೃಪತಿ ತಾ ಪಿರಿದು ॥ ೧೦೮

ತರುಣಿಯಂಜದಿರಂಜದಿರು ವಿಧಿ ।
ಬರೆದ ಬರೆಹವಿದೆನುತ ವೃಕ್ಷದ ।
ತರಗೆಲೆಯ ಹಾಸಿನಲಿ ಮಲಗಿಸಿ ಸತಿಯ ನೀಕ್ಷಿಸುತ ॥
ವರರತುನಮಂಚದಲಿ ಪವಡಿಸಿ ।
ಪರಮಸುಖದಲ್ಲಿರುವ ಸತಿಗಿದು ।
ಸರಿಯೆ ಹರಹರಯೆನುತ ಕಂಬನಿದುಂಬಿದನು ಮರುಗಿ ॥ ೧೦೯

ಎಲ್ಲರೋಪಾದಿಯಲಿ ಪತಿವ್ರತೆ ।
ಯಲ್ಲವೀ ದಮಯಂತಿ ಬಿಡುವವ ।
ಳಲ್ಲ ತನ್ನನು ತರುಣಿ ಕಾಣದ ಕಡೆಗೆ ತೆರಳಿದರೆ ॥
ಅಲ್ಲಿ ತಂದೆಯ ಮನೆಗೆ ಹೋಗುವ ।
ಳಿಲ್ಲಿ ತಾನಿರೆ ಬಿಡಳೆನುತ ಮನ ।
ದಲ್ಲಿ ಯೋಚಿಸಿ ನಿದ್ರೆಗೆಯಿಸಿದನಾಗ ನಿಜಸತಿಯ ॥ ೧೧೦

ಮರೆದು ಮಲಗಿದಳವಳು ಮಗ್ಗುಲ ।
ಸೆರಗ ಮೆಲ್ಲನೆ ಜಾರಿಸುತಲಾ ।
ಗರಸ ಚಿಂತೆಯ ತಾಳ್ದು ಮಲಗಿದ ಸತಿಯನೀಕ್ಷಿಸುತ ॥
ಮರುಗಿದನು ಮನದೊಳಗೆ ನೆರೆ ಶ್ರೀ ।
ಹರಿ ಜಗನ್ನುತ ಅಡವಿಯಲಿಯೆ ।
ಚ್ಚರಿಸದೇ ತಾನೆಂತು ಪೋಗುವೆನೆನುತ ಬಿಸುಸುಯ್ದು ॥ ೧೧೧

ಮಡದಿಯಗಲಿದ ಬಳಿಕಲಲ್ಲಿಹ ।
ತಡಿಯ ದಾಂಟುವ ಮರಳಿ ನಿಜಸತಿ ।
ಯೆಡೆಗೆ ತಿರುಗುವ ಚಂದ್ರ ಬಿಂಬಾನನವ ನೀಕ್ಷಿಸುವ ॥
ಅಡಿಸಿದತಿದುಃಖದಲಿ ಮೆಲ್ಲಡಿ ।
ಯಿಡುವ ಸತಿಯನು ನೋಡಿ ಮರುಗುವ ।
ನೊಡನೆ ಶೋಕದಿ ನಡೆದ ನಳನೃಪನೊಂದು ಯೋಜನವ ॥ ೧೧೨

ಕರುಣದೋರದೆ ನೃಪತಿ ಸತಿಯಳ ।
ತೊರೆದು ಬಿಟ್ಟನು ಮನದೊಳಗೆ ಹುಲಿ ।
ಕರಡಿ ಮೃಗದುಪಟಳವ ತಾನಿನ್ನೆಂತು ಸೈರಿಪಳೊ ॥
ಪೊರೆಯ ಲಾಲಿಸಿ ಕೇಳ್ವೆನೆಂದುರು ।
ತರದ ಪ್ರೇಮದಿ ಬಂದು ಸತಿಗೆ ।
ಚ್ಚರಿಸುವಂದದಿ ತರಣಿ ತಲೆದೋರಿದನು ಪೂರ್ವದಲಿ ॥ ೧೧೩

ನಳಿನಮುಖಿ ಮೈಮುರಿದು ನಿದ್ರೆಯ ।
ತಿಳಿದು ಮೆಲ್ಲನೆಯೆದ್ದು ತನ್ನೆಡ ।
ಬಲವನೀಕ್ಷಿಸಿ ಪತಿಯ ಕಾಣದೆ ಬಲಿದ ಮೂರ್ಛೆಯಲಿ ॥
ಮಲಗಿದಳು ಮೈಮರೆದು ನಿಮಿಷಕೆ ।
ತಿಳಿದು ಕಾಣದೆ ಕಾತುರದಿ ಹಂ ।
ಬಲಿಸಿ ಹಲುಬಿದಳಲ್ಲಿ ಗಿರಿತರು ನಿಕರಮಧ್ಯದಲಿ ॥ ೧೧೪

ಹಾ ರಮಣ ನಳನೃಪತಿ ಹಾ ರಣ ।
ಧೀರ ಸದ್ಗುಣಹಾರ ರಿಪುಸಂ ।
ಹಾರ ನಿತ್ಯೋದ್ಧಾರ ನಿರ್ಮಳ ಸತ್ಯಸಂಚಾರ ॥
ಘೋರಕಾನನದೊಳಗೆ ನಂಬಿದ ।
ನಾರಿಯನು ಬಿಸುಡುವರೆ ತನಗಿಂ ।
ನಾರು ಗತಿ ಮೊಗದೋರೆನುತ ಹಲುಬಿದಳು ದಮಯಂತಿ ॥ ೧೧೫

ಅರಸ ಕೇಳಾಶ್ಚರ್ಯವನು ಸತಿ ।
ಬರುತಲಿರೆ ಕಾನನದಿ ನೆರೆದಿಹ ।
ಮರುಳು ಬಳಗವು ಭೂತವೇತಾಳಗಳು ತೊಲಗಿದುವು ॥
ಶರಭ ಪುಲಿ ಕಾಡಾನೆ ಸಿಂಹೆಗ ।
ಳಿರದೆ ಜಾರಿದುವಲ್ಲಿ ಸತಿಯಳ ।
ಪರಮ ಪಾತಿವ್ರತ್ಯ ಮಹಿಮೆಯನರಸ ಕೇಳೆಂದ ॥ ೧೧೬

ಮುಂದೆ ಕಂಡಳು ಹೊಳೆವ ತಾಪಸ ।
ವೃಂದವನು ಕಣ್ಣೀರ ಸುರಿಸುತ ।
ಬಂದ ವನಿತೆಯ ಕೇಳಿದರು ಮುನಿವರರು ವಿನಯದಲಿ ॥
ಇಂದುಮುಖಿ ನೀನಾರು ಇಲ್ಲಿಗೆ ।
ಬಂದ ಹದನೇನೆನಲು ಶೋಕದಿ ।
ನೊಂದು ನುಡಿದಳು ಮುನಿಗಳಿಗೆ ಕೈಮುಗಿದು ವಿನಯದಲಿ ॥ ೧೧೭

ಏನನೆಂಬೆನು ತನ್ನ ಪುಣ್ಯದ ।
ಹಾನಿಯನು ಚಿತ್ತವಿಸಿ ಕರುಣದಿ ।
ಮಾನನಿಧಿಗಳು ಬಲ್ಲಿರೇ ನಳಚಕ್ರವರ್ತಿಯನು ॥
ಆ ನರೇಂದ್ರನ ಮಡದಿ ತಾನಿಂ ।
ನೇನ ನೋಂತೆನೊ ಪತಿಯಗಲಿ ಘನ ।
ಕಾನನಕೆ ಗುರಿಯಾದೆನೆಂದಳು ತರುಣಿ ಬಿಸುಸುಯ್ದು ॥ ೧೧೮

ಭೂತಳವ ನಳನೃಪನು ಜೂಜಲಿ ।
ಸೋತು ಪುಷ್ಕರಗಿತ್ತು ಸತ್ಯದ ।
ನೀತಿ ತಪ್ಪದೆ ಬಂದು ಬನವಲಿ ತನ್ನ ನಗಲಿದನು ॥
ಧಾತುಗುಂದಿದೆ ಪತಿಯ ಕಾಣದೆ ।
ಭೀತಿಯಲಿ ನಿಮ್ಮಡಿಯ ಕಂಡೆನು ।
ಭೂತದಯೆ ನಿಮಗುಂಟು ಸಲಹೆಂದಳು ಸರೋಜಮುಖಿ ॥ ೧೧೯

ನನೆದುದಂತಃಕರಣ ಕೇಳುತ ।
ಮುನಿಗಳೆಂದರು ತಾಯೆ ಶೋಕದಿ ।
ಕನಲಿ ಕಂಗೆಡಬೇಡ ನಿಜಪತಿ ರಾಜ್ಯ ಸಿರಿ ಸುತರು ॥
ನಿನಗೆ ಬಂದೀಪರಿಯ ಯೋಗದೆ ।
ಮನದೊಳರಿದೆವು ತನುಜೆಯುಂಜದಿ ।
ರೆನುತ ಪೇಳಿಯದೃಶ್ಯರಾದರು ಮುನಿಗಳೊಗ್ಗಿನಲಿ ॥ ೧೨೦

ಅನಂತರ ದಮಯಂತಿಯು ಮಾರ್ಗಸ್ಥರಾದ ವರ್ತಕರೊಡನೆ ಬರುವಲ್ಲಿ ಕಾಡಾನೆಗಳ ಬಾಧೆಯನ್ನು ತಪ್ಪಿಸಿಕೊಂಡು ಚೈದ್ಯನಗರಕ್ಕೆ ಬಂದಳು.

ಹೇಮದುಪ್ಪರಿಗೆಯಲಿ ನೃಪಸತಿ ।
ಭಾಮಿನಿಯರೋಲಗದೊಳೊಪ್ಪುತ ।
ತಾಮರಸದಳನಯನೆ ದಮಯಂತಿಯನು ತಾ ಕಂಡು ॥
ಈ ಮಹಾಸತಿಯಾರಿವಳು ಸು ।
ತ್ರಾಮನರಸಿಯೊ ಎನುತ ಕರಸಿದೊ ।
ಡಾಮಹಿಳೆ ಬಂದಳು ನೃಪಾಲನ ಸತಿಯ ಸಮ್ಮುಖಕೆ ॥ ೧೨೧

ತಾಯೆ ನೀನಾರಾವ ದೇಶದ ।
ರಾಯನರಸಿಯಿದೇನು ನಿನಗೀ ।
ಪ್ರಾಯುದಲಿ ಕಳೆಗುಂದಿ ಮಾಸಿಹುದೇನು ಹೇಳೆನಲು ॥
ಆ ಯುವತಿ ಕಣ್ಣೀರಿನಲಿ ಪೂ ।
ರಾಯಶೋಕದೊಳೆಂದಳಾತರ ।
ಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು ॥ ೧೨೨

ಕ್ಷಿತಿಯನೆಲ್ಲವ ಸೋತು ಜೂಜಲಿ ।
ಪತಿ ವನಕೆ ಬಂದೆನ್ನ ನಗಲಿದ ।
ಮತಿವಿಕಳತನದಿಂದ ತಿರುಗುತ ಬಂದೆ ನಿಮ್ಮಡಿಗೆ ॥
ಹಿತವರಾರನು ಕಾಣೆ ನೀವೇ ।
ಗತಿಯೆನಗೆ ಪರದೇಶಿಯನು ಪರ ।
ಹಿತವೆ ಪುಣ್ಯವು ರಕ್ಷಿಸೆಂದಳು ನಳನೃಪನ ರಾಣಿ ॥ ೧೨೩

ನುಡಿಯ ಕೇಳುತ ಚೈದ್ಯಭೂಪನ ।
ಮಡದಿ ನೂಪುರ ಘಲ್ಲುಘಲ್ಲೆನ ।
ಲಡಿಯಿಡುತಲಪ್ಪಿದಳು ಸೆರಗಿನೊಳೊರಸಿ ಕಂಬನಿಯ ॥
ಬಿಡು ವ್ಯಥೆಯ ವರಭೂಷಣಂಗಳ ।
ತೊಡು ದುಕೂಲವನುಡು ಸುಮಾಲ್ಯವ ।
ಮುಡಿಗೆ ಸೇರಿಸು ತರುಣಿಯೆಂದಳು ಚೈದ್ಯನೃಪನರಸಿ ॥ ೧೨೪

ದೇವಿ ನಿಮ್ಮುಪಚಾರವೇ ಸಂ ।
ಭಾವನೆಯಲಾ ನಮಗೆ ಬೇರೆ ।
ಸ್ನಾವ ಭೂಷಣವೇಕೆ ದೇಸಿಗರಾವು ನಿಮ್ಮಡಿಯ ॥
ಸೇವೆಯಲಿ ತಾನಿಹೆನು ಹೀನವ ।
ನಾವು ಬಳಸುವರಲ್ಲ ನಮ್ಮನು ।
ಕಾವ ಹದನನು ನೀವೆ ಬಲ್ಲಿರಿಯೆಂದಳಾಸತಿಗೆ ॥ ೧೨೫

ಮನದ ಧಗೆಯಡಗಿತು ಸುನೀತೆಯು ।
ಮನೆಯೊಳಿದ್ದಳು ಭೇದವಿಲ್ಲದೆ ।
ಯನುದಿನದೊಳಾಹಾರನಿದ್ರಾದಿಗಳ ತಾನುಳಿದು ॥
ವನಜನಾಭನ ಕರುಣದಲಿ ಬಂ ।
ದಿನಿಯನೆಂದಿಗೆ ಮುಖವ ತೋರುವ ।
ನೆನುತ ಚಿಂತಿಸುತಿದ್ದಳಾ ವರಪುರದ ಚೆನ್ನಿಗನಾ ॥ ೧೬೬

ಇತ್ತ ನಳಮಹಾರಾಯನು :—

ವನಿತೆ ಮಲಗಿಹಳೋ ಅಧೈರ್ಯದಿ ।
ನೆನೆವಳೋ ದೈವವನು ಮನದಲಿ ।
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ ॥
ಕನಲಿ ವಿಧಿಯನು ಬೈವಳೋ ಕಂ ।
ಬನಿಯ ಸುರಿವಳೊ ಶೋಕದಲಿ ತಾ ।
ತನುವಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದು ॥ ೧೬೭

ಸುತರ ಪರರಡೆಗಿತ್ತು ನಂಬಿದ ।
ಸತಿಯ ತಂದಡವಿಯಲಿ ಮಲಗಿಸಿ ।
ಮತಿವಿಕಳನಾದೆನು ಪುರಾಕೃತಕರ್ಮಫಲವ್ಯೆಸೆ ॥
ಕ್ಷಿತಿಯೊಳಾರುಂಟೆನ್ನ ಪೋಲ್ ನಿಜ ।
ಸತಿಗೆ ತಪ್ಪಿದ ಬಾಹಿರನು ಎಂ ।
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ॥ ೧೬೮

ನಳನು ಹೀಗೆ ವ್ಯಸನಪಡುತ್ತಾ ಬಂದು ಮುಂದೆ ಅಯೋಧ್ಯಾಪುರವನ್ನು ಕಂಡನು.

ಹೊಳೆವ ಮಿಸುನಿಯ ರತ್ನನಿಚಯದ ।
ನೆಲೆಯ ಸೌಧಾಗ್ರದಲಿ ಮಿಗೆ ಪ್ರ ।
ಜ್ವಲಿಪ ಹೇಮದ ಕಲಶಗಳ ರವಿಚಂದ್ರ ಶಾಲೆಗಳ ॥
ಲಲನೆಯರ ನಾನಾವಿನೋದದ ।
ಹಲವು ಗೋಪುರಶಿಖರದಗಣಿತ ।
ನೆಲೆಯ ಕಾಣಿಸಲರಿದಯೋಧ್ಯಾಪುರವು ರಂಜಿಸಿತು ॥ ೧೬೯

ಬಂದು ಹೊಕ್ಕನು ಪುರವ ಮೆರೆವತಿ ।
ಚಂದವನು ನೆರೆನೋಡಿ ಮನದೊಳ ।
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ ॥
ತಂದುದೇ ವಿಧಿ ತನ್ನನಿಲ್ಲಿಗೆ ।
ಮಂದಭಾಗ್ಯನು ತಾನೆನುತ ಮನ ।
ನೊಂದು ನೆನೆದನು ವರಪುರಾಧಿಪ ಚೆನ್ನಕೇಶವನ ॥ ೧೩೦

ಕೇಳು ಕುಂತೀತನಯ ನಿರ್ಮಿತ ।
ದಾಲಯದ ಸೊಂಪಿನಲಿಯೋಲಗ ।
ಶಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ ॥
ಸಾಲ ಮಕುಟದ ನೃಪರು ಭೂಸುರ ।
ಜಾಲ ಮಂತ್ರಿ ಪುರೋಹಿತರು ಗುಣ ।
ಶೀಲರುನ್ನತಸತಿಯರಿಂದೆಸೆದಿರ್ದುದಾಸ್ಥಾನ ॥ ೧೩೧

ನಳನು ಬಳಿಕ ಋತುಪರ್ಣರಾಯುನನ್ನು ಕಂಡು, ನಾನು ಅಶ್ವಹೃದಯವನ್ನೂ ಪಾಕಶಾಸ್ತ್ರವನ್ನೂ ತಿಳಿದಿದ್ದೇನೆ. ನನ್ನ ಹೆಸರು ಬಾಹುಕನು, ನಿಮ್ಮಲ್ಲಿ ಸೇವೆಯುನ್ನು ಮಾಡಿಕೊಂಡಿರುವೆನೆಂದು ಹೇಳಿಕೊಳ್ಳಲು, ಆತನು ಪರೀಕ್ಷಿಸಿ ಇವನನ್ನು ತನ್ನಲ್ಲಿ ಇಟ್ಟುಕೊಂಡನು.

ಅರಸ ಕೇಳಾಪುರದೊಳೊಬ್ಬರಿ ।
ಗರಿಪದಂದದಿ ನಳನಿರಲು ಭೂ ।
ಸುರರ ಮತದಲಿ ಕೇಳ್ದು ಭೀಮನೃಪಾಲನೀಹದನ ॥
ಧರೆಯನೆಲ್ಲವ ಜೂಜಿನಲಿ ಪು ।
ಷ್ಕರಗೆ ಸೋತು ನೃಪಾಲನಡವಿಗೆ ।
ತೆರಳಿದನು ಸತಿ ಸಹಿತಲೆನೆ ಹೊರಳಿದನು ಶೋಕದಲಿ ॥ ೧೩೨

ಬಳಿಕ ಭೀಮನೃಪಾಲನು ಆಪ್ತರಾದ ಬ್ರಾಹ್ಮಣರನ್ನು ಕರೆಯಿಸಿ ದಮಯಂತಿಯುನ್ನೂ ನಳನನ್ನೂ ಹುಡುಕಿ ಕರೆದು ತಂದವರಿಗೆ ಅರ್ಧರಾಜ್ಯವನ್ನು ಕೊಡುವೆನೆಂದು ವಾಗ್ದಾನಮಾಡಿದನು. ಬಳಿಕ ಅವರು ನಾನಾದಿಕ್ಕುಗಳಿಗೆ ಹೋದರು. ಅವರಲ್ಲಿ ಸುದೇವನೆಂಬುವನು ಹುಡುಕುತ್ತಾ ಚೈದ್ಯಪಟ್ಟಣಕ್ಕೆ

ಬಂದು ದಮಯಂತಿಯನ್ನು ಕಂಡು, ಬಂದು ಭೀಮರಾಜನಿಗೆ ತಿಳಿಸಲು, ಆತನು ಮಗಳನ್ನು ಕರೆಯಿಸಿಕೊಂಡನು. ಬಂದುಗಿನ ಆಕೆಯು ತನ್ನ ತಾಯಿಯ ಕೂಡೆ ಹೇಳುತ್ತಾಳೆ.

ಪತಿವಿಹೀನೆಗೆ ಸಲುವುದೇ ಸು ।
ವ್ರತ ಸುಭೋಜನ ಸೌಖ್ಯಸುಖ ಸ ।
ದ್ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ ॥
ಸತಿಯರಿಗೆ ಪತಿ ದೈವವೆಂದಾ ।
ಶ್ರುತಿವಚನವಾಡುವುದು ತನಗಾ ।
ಪತಿಯನಗಲಿದ ಬಳಿಕ ಗತಿಯಿಲ್ಲೆಂದಳಿಂದುಮುಖಿ ॥ ೧೩೩

ಧರೆಯೊಳೆಲ್ಲಿಹನೋ ವಿಚಾರಿಸಿ ।
ಕರಸು ನೀನೆಲೆ ತಾಯೆಯೆನ್ನಯ ।
ಪುರುಷನಿಲ್ಲದ ಬಳಿಕ ಬಿಡುವೆನು ತನುವನೆಂದೆನಲು ॥
ಮರುಗಿದಳು ಮಗಳೆಂದ ಮಾತಿಗೆ ।
ಪಿರಿದು ಕಂಬನಿದುಂಬಿ ತನ್ನಯ ।
ಪುರುಷನೊಡನಿಂತೆನಲು ಭೀಮನೃಪಾಲ ಚಿಂತಿಸಿದ ॥ ೧೩೪

ಅರಸ ಕೇಳು ವಿದರ್ಭಪುರಪತಿ ।
ಕರಿಸಿದನು ಭೂಸುರರನವರಿಗೆ ।
ಪರಮವಸ್ತುವನಿತ್ತು ಕಳುಹಿದ ನಿಷಧಪತಿಯಿರವ ॥
ಶರಧಿಮೇರೆಯೊಳೆಲ್ಲ ಭೇದಿಸಿ ।
ಕರೆಸುತಹುದೆನಲವರು ಬರುತಿರೆ ।
ಕರೆದವರ ದಮಯಂತಿ ವಿನಯದೊಳೆಂದಳೀಮಾತ ॥ ೧೩೫

ನಳನೃಪತಿ ನಿಜರಾಜತೇಜವ ।
ನುಳಿದು ತಾ ಪ್ರತಿರೂಪ ತಾಳಿಹ ।
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀನುಡಿಯ ॥
ಹಳುವದಲಿ ಸತಿಯುಟ್ಟ ವಸನದಿ ।
ಸೆಳೆಯುತರ್ಧವ ಕೊಂಡು ನಾರಿಯ ।
ಕಳೆದುಹೋದವರುಂಟೆಯೆನಲುತ್ತರವಪೇಳುವನು ॥ ೧೩೬

ಆ ನುಡಿಯು ಬಂದೆನಗೆ ನೀವನು ।
ಮಾನವಿಲ್ಲದೆ ಪೇಳೆನುತ ಸ ।
ನ್ಮಾನದಲಿ ಬೀಳ್ಕೊಟ್ಟಳಂಗನೆ ತೆರಳಿ ಬಳಿಕವರು ॥
ಮಾನವೇಂದ್ರರ ಸಭೆಯು ನೋಡಿ ನಿ ।
ಧಾನಿಸುತ ನಾನಾದಿಗಂತಾ ।
ಸ್ಥಾನಗಳ ನಗರಗಳ ಭೇಧಿಸುತೈದಿದರು ಪುರವ ॥ ೧೩೭

ಅವರು ಋತುಪರ್ಣನ ಪಟ್ಟಣಕ್ಕೆ ಹೋಗಿ ಬಂದು ದಮಯಂತಿಗೆ ಹೇಳುತ್ತಾರೆ.

ದೇವಿಯರು ಚಿತ್ತೈಸಿದಿರೆ ಭುವ ।
ನಾವಳಿಗಳೆಲ್ಲವನು ನೋಡುತ ।
ಲಾವು ಮುಂದೈತರಲು ಕಂಡೆವಯೋಧ್ಯೆಯನು ಬಳಿಕ ॥
ಭೂವರನ ಋತುಪರ್ಣ ರಾಯನ ।
ಸೇವೆಯೊಳಗೆ ಕುರೂಪಿಯೊರ್ವನು ।
ಜೀವಸಖನಾಗಿಹನು ಬಾಹುಕನೆಂಬ ನಾಮದಲಿ ॥ ೧೩೮

ತುರಗನಿಕರದ ಶಿಕ್ಷೆಯಲಿ ಮಂ ।
ದಿರದ ಬಾಣಸಿತನದ ಕೆಲಸದಿ ।
ನೆರೆ ನಿಪುಣನೆಂದೆನಿಸಿಕೊಂಡಿಹನಾತನನು ನೋಡಿ ॥
ಪರುಠವಿಸಿ ನೀವೆಂದ ಮಾತನು ।
ವರಸಭಾಮಧ್ಯದಲಿ ನುಡಿಯಲಿ ।
ಕಿರದೆ ತಾನೀಮಾತನೆಂದನು ನಗುತ ಬಾಹುಕನು ॥ ೧೩೯

ಸತಿಗೆ ವಂಚನೆಗೈದ ಪತಿ ತಾ ।
ಮತಿವಿಕಳನಂತಿರಲಿ ಭೂಸುರ ।
ಪತಿಯೆ ಕೇಳಾಸತಿಗೆ ಭಂಗವೆ ಪತಿಗೆ ಕೊರತೆ ಕಣಾ ॥
ಪತಿವ್ರತವನಾಚರಿಸುವಂಗನೆ ।
ಪತಿಯ ದೋಷವನೆಣಿಪಳೇ ಪರ ।
ಗತಿಗೆ ಕಾರಣವಲ್ಲವಿದು ಸತಿಗೆಂದನವ ನಗುತ ॥ ೧೪೦

ಪತಿಯ ತಪ್ಪೆಣಿಸುವಳು ತಾ ಪತಿ।
ವ್ರತೆಯೆ ಧರಣಿಯ ಪಾಲಿಸುವ ಜನ।
ಪತಿಯ ನಿಂದಿಸುವಾತ ಸೇವಕನೇ ವಿಚಾರಿಸಲು ॥
ಪಿತನ ವಾಕ್ಯವನತಿಗಳೆವನವ।
ಸುತನೆ ಗುರುವಿಂಗೆರಡನೆಣಿಸುವ।
ಮತಿವಿಕಳನವ ಶಿಷ್ಯನೇ ಕೇಳೆಂದ ಬಾಹುಕನು ॥ ೧೪೧

ಎನಲು ತಲೆದೂಗುತ್ತಲೀ ಮಾ।
ತಿನಲಿ ಸಂಶಯವಿಲ್ಲ ತಾನೆಂ।
ದೆನುತ ಕಂಬನಿದುಂಬಿದಳು ದಮಯಂತಿ ಮನದೊಳಗೆ ॥
ಇನಿಯನಹುದಾತನ ಪರೀಕ್ಷೆಗೆ।
ನೆನೆಯ ಬೇಕೊಂದನುವನೆಂದಾ।
ವನಿತೆ ತಂದೆಯನುಜ್ಞೆಯಲಿ ಕರೆದಳು ಸುದೇವನನು ॥ ೧೪೨

ಇಳೆಯಮರನನು ಕರೆದು ಕಾರ್ಯವ।
ತಿಳುಹಿ ಪಯಣವ ಮಾಡಿ ಕಳುಹಲು।
ಪೊಳಲ ಹೊರವಂಟನು ಸುದೇವನು ಹಲವು ಯೋಜನವ ॥
ಕಳೆದು ಬರುತಿರೆ ಮುಂದೆ ಕಂಡನು।
ಲಲಿತ ರತ್ನಪ್ರಭೆಯ ಗೇಹದ।
ಹೊಳೆವಯೋಧ್ಯಾಪುರವನೀಕ್ಷಿಸಿ ಹೊಕ್ಕನರಮನೆಯ ॥ ೧೪೩

ಬಳಿಕ ಸುದೇವನು ಋತುಪರ್ಣನೊಡನೆ ಅರಣ್ಯ ಮಧ್ಯದಲ್ಲಿ ಮಲಗಿದ್ದ ಸತಿಯನ್ನು ಬಿಟ್ಟು ನಳನು ಹೊರಟುಹೋದನು. ಅದಕ್ಕಾಗಿ ದಮಯಂತಿಗೆ ತಂದೆಯಾದ ಭೀಮ ನೃಪನು ಪುನಸ್ಸ್ವಯಂವರವನ್ನು ವಿರಚಿಸುವನು ಸಮಸ್ತ ಜನರೂ ಅಲ್ಲಿಗೆ ಹೋಗುತ್ತಾರೆ. ಎನಲು, ಋತುಪರ್ಣನು ಸಾರಥಿಯಾದ ಬಾಹುಕನೊಡನೆ ಭೀಮನೃಪಾಲನ ಪಟ್ಟಣವನ್ನು ಸೇರಿ ಆಸ್ಥಾನದಲ್ಲಿ ಬಂದು ಕುಳಿತಿರಲು ಆಗ ದಮಯಂತಿಯು—

ನಾರಿಯುರ ಮರೆಗೊಂಡು ಸಭೆಯಲಿ ।
ಸಾರಥಿಯು ಕುಬ್ಜಾವತಾರವ ।
ನೋರೆ ಗಣ್ಣಿನೊಳೀಕ್ಷಿಸುತ ದಮಯಂತಿ ಮನದೊಳಗೆ ॥
ಆರಿವನು ನಳನೃಪನ ಪೋಲುವ ।
ಚಾರು ಚಿಹ್ನೆಗಳಿಲ್ಲ ತೋರ್ಪವು ।
ಕಾರವಾಗಿದೆ ರೂಪೆನುತ ಚಿಂತಿಸಿದಳಿಂದುಮುಖಿ ॥ ೧೪೪

ಹರಿದುದೋಲಗವಲ್ಲಿ ನಿಜಮಂ ।
ದಿರಕೆ ಬಂದಾಲೋಚಿಸುತ ಮಿಗೆ ।
ತರುಣಿಯುರ ಕಳುಹಿಸಲು ಬಂದರು ಬಾಣಸದ ಮನೆಗೆ ॥
ಇರುವ ಕಂಡರು ಪಾಕದಲಿ ಕೈ ।
ಕರಣವನು ನೆರೆ ಸೂದಕಾರ್ಯದ ।
ಪರಿಯು ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ ॥ ೧೪೫

ತರಳರಿಗೆ ನೀರೆರೆದು ಕಾಂಚನ ।
ವರದುಕೂಲವ ನಿತ್ತು ದಿವ್ಯಾ ।
ಭರಣ ಭೂಷಿತರಾದ ತನಯುರ ದಾದಿಯುರ ಕೈಯ್ಯ ॥
ಭರದಿ ಕಳುಹಲು ಬಾಣಸದ ಮಂ ।
ದಿರದ ಬಾಗಿಲ ಮುಂದೆ ಬಿಡೆ ಸಂ ।
ಚರಿಸುಳಿದಾಡುವರ ಕಂಡನು ನೃಪತಿ ಹರುಷಿಸುತ ॥ ೧೪೬

ತರಳರನು ಪಿಡಿದೆತ್ತಿ ತೊಡೆಯೊಳ ।
ಗಿರಿಸಿ ಮುದ್ದಾಡಿದನು ಮಕ್ಕಳ ।
ಸುರಿವ ಕಂಬನಿಗಳಲಿ ಬಾಹುಕ ಮರುಗುತಿರಲಂದು ॥
ನುರೆಯ ಜಾಲಂಧ್ರದಲಿ ಕಂಡಳು ।
ತರುಣಿ ನಳನೃಪನೀತನಹುದೆಂ ।
ದುರುತರ ಪ್ರೇಮದಲಿ ಬಂದಳು ಜನನಿಯುರ ಮನೆಗೆ ॥ ೧೪೭

ತಾಯೆ ಸಂಶಯವಿಲ್ಲ ನೈಷಧ ।
ರಾಯನೀತನು ಸೂತನಲ್ಲ ವಿ ।
ಪಾಯದಲಿ ಬಂದಿಹನು ನೋಡು ಕುರೂಪಿವೇಷದಲಿ ॥
ರಾಯರೊಳಗಗ್ಗಳಿಯ ನಳನೃಪ ।
ಮಾಯವನು ತೋರಿಹನು ಇವನ ನಿ ।
ಜಾಯತವ ನಾ ಬಲ್ಲೆ ಕರಸೆಂದಳು ಸರೋಜಮುಖಿ ॥ ೧೪೮

ಧರಣಿಪತಿಯನುಮತದೊಳಾತನ ।
ಕರಿಸಿದಳು ನೃಪನರಸಿ ಬಾಹುಕ ।
ನಿರದೆ ಬಂದಾ ರಾಜಮಂಧಿರದಲ್ಲಿ ಕುಳ್ಳಿರಲು ॥
ತರಳೆ ಮಾಸಿದ ಸೀರೆಯಲಿ ಗರ ।
ಗರಿಕೆ ತಪ್ಪಿದ ಚೆಲುವಿನಲಿ ನಿಂ ।
ದಿರಲು ಕಂಡನು ಸತಿಯ ತಲೆಬಾಗಿದನು ಲಜ್ಜೆಯಲಿ ॥ ೧೪೯

ಹಿಮಕರಾನ್ವಯತಿಲಕ ವಸುಧಾ ।
ರಮಣ ಪುಣ್ಯೋದಯ ಸುಭಾಷಿತ ।
ವಿಮಲಗುಣಚರಿತ್ರ ಸನ್ನುತ ಸತ್ಯ ಸಂಚಾರ ॥
ಕುಮತಿ ಪುಷ್ಕರ ಮುನಿದನೇ ವಿ ।
ಕ್ರಮದರಿದ್ರವು ಬಂದುದೇ ಸಾ ।
ಕಮಿತಭುಜಬಲ ಪಾಲಿಸೆಂದಳು ಪತಿಗೆ ದಮಯಂತಿ ॥ ೧೫೦

ವಿನಯಹೀನನು ತಾನು ಮನದಲಿ ।
ನೆನೆದು ತಪ್ಪಿದ ನಿರ್ದಯನ ಕಾ ।
ನನದಿ ನಿನ್ನನು ಬಿಸುಟು ಕಳೆದ ದುರಾತ್ಮಬಾಹಿರನ ॥
ನೆನೆವರೇ ಬಿಡು ಮರುಳೆ ನೀನಿಂ ।
ದಿನಲಿ ಲೇಸು ಪುನಸ್ಸ್ವಯಂವರ ।
ಮನಕೆ ಬಂದವನನ್ನು ನೀ ನೊಲಿಸೆಂದನಾ ನೃಪತಿ ॥ ೧೫೧

ಎನಲು ಕರಣಂಗಳಿಗೆ ಸಬಳದ ।
ಮೊನೆಗಳಿರಿದಂತಾಗೆ ಸತಿ ಕ
ಣ್ಣಿನಲಿ ತುಂಬಿದಳುದಕವನು ಹರಹರ ಶಿವಾಯೆನುತ ॥
ಎನಗೆಯಿನ್ನು ಪುನಸ್ಸ್ವಯಂವರ ।
ಮನದೊಳುಂಟೇ ನೀವು ಬರಬೇ ।
ಕೆನುತ ಸಾತ್ರೆಯ ಕಲ್ಪಿಸಿದೆ ಕೇಳೆಂದಳಿಂದುಮುಖಿ ॥ ೧೫೨

ಸುರರು ಕೊಂಡಾಡಿದರು ಯಮಭಾ ।
ಸ್ಕರವಿರಿಂಚಾದಿಗಳುಲಿಯೆ ವರ ।
ತರುಣಿ ಬಂದೆರಗಿದಳು ಪತಿಯಂಘ್ರಿಯಲಿ ದಮಯಂತಿ ॥
ಹರುಷದಲಿ ಬಿಗಿಯಪ್ಪಿದನು ಭೂ ।
ಸುರರು ಸಂಭ್ರಮಿಸಿದರು ವರ ಪುರ ।
ದರಸ ಚೆನ್ನಿಗರಾಯ ಸಲಹಿದನವರ ಕರುಣದಲಿ ॥ ೧೫೩

## ಮೂರನೆಯ ಮುದ್ರಣದ ಪೀಠಿಕೆ.

---

ಕರ್ಣಾಟಕ ಚಂಡಕೌಶಿಕನಾಟಕದ ಎರಡನೆಯ ಮುದ್ರಣದ ಪ್ರತಿಗಳೆಲ್ಲಾ ಮುಗಿದುಹೋಗಿರುವದರಿಂದ, ಈಗ ಮೂರನೆಯ ಮುದ್ರಣ ಮಾಡಿಸುವದಕ್ಕೆ ಅವಕಾಶವಾಯಿತು. ಈ ರೀತಿ ಮೂರನೆಯ ಮುದ್ರಣಕ್ಕೆ ಅವಕಾಶಕೊಟ್ಟಿರುವದಕ್ಕಾಗಿ ವಾಚಕರಿಗೆ ಬಹಳ ಕೃತಜ್ಞನಾಗಿರುತ್ತೇನೆ. ಹಿಂದಣ ಮುದ್ರಣಗಳಲ್ಲಿ ಅನೇಕ ತಪ್ಪುಗಳಿದ್ದುದರಿಂದ, ಈಗ ಅವುಗಳನ್ನೆಲ್ಲಾ ಸರಿಪಡಿಸಿರುತ್ತೆ.

ಪೂರ್ವದ ಅಭಿಮಾನದಂತೆಯೇ ಈ ಮುದ್ರಣದ ವಿಷಯದಲ್ಲಿಯೂ ಪ್ರೋತ್ಸಾಹಪಡಿಸುವರೆಂದು ನಂಬಿರುತ್ತೇನೆ.

ಮೈಸೂರು,
೧೯-೧೧-೧೯೨೮.

ಸಿ. ರಾಮಚಂದ್ರರಾವ್.

# ಪೀಠಿಕೆ

ಶ್ರೀಮನ್ಮಹಾರಾಜರವರ ಆಸ್ಥಾನಕವಿಯಾಗಿದ್ದ ಬಸವಪ್ಪಶಾಸ್ತ್ರಿಗಳು ಆರ್ಯಕ್ಷೇಮೀಶ್ವರನಿಂದ ವಿರಚಿತವಾದ ಚಂಡಕೌಶಿಕವೆಂಬ ಸಂಸ್ಕೃತನಾಟಕವನ್ನು ಕನ್ನಡಿಸಿ ಅದರ ಹಕ್ಕನ್ನು ಮತ್ತು ಅದರ ಸರ್ವಸ್ವಾತಂತ್ರ್ಯವನ್ನು ಕೊಡುವುದಾಗಿ ಒಪ್ಪಿ ಗತಿಸಿದ ಸಿ. ಸುಬ್ಬರಾವ್, ಬಿ.ಎ., ಯವರಿಂದ ಪ್ರಯೋಜನವನ್ನು ಮೊದಲೇ ಹೊಂದಿ ಗ್ರಂಥವನ್ನು ರಚಿಸುವುದಕ್ಕೆ ಉಪಕ್ರಮಿಸಿ ನಾಲ್ಕು ಅಂಕಗಳನ್ನು ಬರೆದು ಅಷ್ಟರಲ್ಲಿ ದೈವಾಧೀನರಾದರು. ಈ ಕಾಲದಲ್ಲಿ ಹುಟ್ಟಿರುವ ಉತ್ತಮಗಳಾದ ಕರ್ಣಾಟಕ ನಾಟಕಗಳೊಳಗೆ ಒಂದಾದ ಇದನ್ನು ಪೂರ್ತಿಮಾಡಿಸಿ ಪ್ರಸಿದ್ಧಪಡಿಸಬೇಕೆಂಬ ನಮ್ಮ ಮಿತ್ರರ ಕೋರಿಕೆಯಂತೆ ಕರ್ಣಾಟಕ ಪಂಡಿತರಾದ ಮ॥ ಮೇಲುಕೋಟೆಯ ದೇವಶಿಖಾಮಣಿ ಅಳಸಿಂಗರಾಚಾರ್ಯರಿಂದ ಐದನೆಯ ಅಂಕವನ್ನು ಬರೆಯಿಸಿ ಗ್ರಂಥವನ್ನು ಪೂರ್ತಿಮಾಡಿ ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಮುದ್ರಾಕ್ಷರಶಾಲೆಯಲ್ಲಿ ಅಚ್ಚು ಹಾಕಿಸಿದೆನು.

ಈ ಗ್ರಂಥವು ಊರ್ಜಿತವಾಗಬೇಕೆಂಬ ಆಸಕ್ತಿಯಿಂದ ಮ॥ ಬಿ. ಮಲ್ಲಪ್ಪನವರು ಮಾಡಿರುವ ಅಮೂಲ್ಯವಾದ ಸಾಹಾಯಕ್ಕಾಗಿ ನಾನು ಅವರಿಗೆ ಬಹಳವಾಗಿ ಕೃತಜ್ಞನಾಗಿರುತ್ತೇನೆ.

ಇದನ್ನು ಪ್ರಚುರಪಡಿಸುವುದರಲ್ಲಿ ಮಹಾರಾಜಶ್ರೀಯವರುಗಳಾದ ಗರಳಪುರೀ ಅಯ್ಯಶಾಸ್ತ್ರಿಗಳು, ನಂಜನಗೂಡು ಸುಬ್ಬಶಾಸ್ತ್ರಿಗಳು ಮತ್ತು ಇವರ ಮಕ್ಕಳು ಸ್ವರ್ಗಸ್ಥರಾದ ಅನಂತನಾರಾಯಣಶಾಸ್ತ್ರಿಗಳು ಸಹ ಬಹಳವಾಗಿ ಸಹಾಯಮಾಡಿರುತ್ತಾರೆ. ಇವರುಗಳಿಗೂ ನಾನು ಬಹಳ ಕೃತಜ್ಞನಾಗಿರುತ್ತೇನೆ.

ಮೈಸೂರು,
ಅಕ್ಟೋಬರ್ ೧೯೨೮.

ಸಿ. ರಾಮಚಂದ್ರರಾವ್.

॥ ಕಂದ ॥

ಸ್ವೀಕರಿಪುದು ಬಸವಪ್ಪನು ।
ಹಾಕವಿ ರಚಿಸಿರ್ದ ಚಂಡಕೌಶಿಕಕೃತಿಯಂ ॥
ಶ್ರೀಕೃಷ್ಣೇಂದ್ರ ಭವತ್ಕರು ।
ಣೈಕಾಶ್ರಯರಾಮಚಂದ್ರರಾಯಾರ್ಪಿತಮಂ ॥

ಶ್ರೀರಸ್ತು

ಕರ್ಣಾಟಕ

# ಚಂಡಕೌಶಿಕ ನಾಟಕಂ.

---

## ಮೊದಲನೆಯ ಅಂಕ.

---

ವೃತ್ತ॥ ಇಳೆಯಂ ತ್ರೈಗುಣ್ಯಭೇದಂದಳೆದು ಜನಿಯಿಪಂ ರಕ್ಷಿಪಂ ಶಿಕ್ಷಿಪಂ ಸಂ । ಗಳಿಪಂ ಮೆಯ್ಯೆಂಟರಿಂದೀ ವಿಭು ಜಗಮನಿವಂ ಗಿರ್ಪ್ಪರಾರ್ವಂದ್ಯರೆಂದೇ ॥ ತಿಳಿದತ್ತೆಂಬಂತೆವೊಲ್ ನಾಟ್ಯದೆ ಮೃಡನ ಪದಾಂಭೋಜಮಂ ತಳ್ತ ಪುಷ್ಪಾಂ । ಜಳಿ ನಿಮ್ಮಂ ರಕ್ಷಿಕೆಂದುಂ ಕಟಕಫಣಧರಾಧೀಶನಿಶ್ವಾಸಕೀರ್ಣಂ ॥

ವೃ॥ ಕಿಸುರಿಡಿದಕ್ಷಿಯಿಂ ಮುರಿದ ಪುರ್ವುಗಳಿಂ ನಸುಕಂಪಿವೋಷ್ಠದಿಂ । ದೆಸೆವ ನಿಜಾನನಂ ಶಶಿಯ ಕಾಂತಿಯನೇಳಿಕೆ ಶೋಭನಾಂಗಿ ಯಾ ॥ ನೆಸಪನುನೀತಿ ಸಾಕೆಲೆ ಮನಸ್ವಿನಿ ವರ್ಧಿಕೆ ನಿನ್ನ ಕೋಪಮೆಂ । ದುಸಿರ್ದೊಡನಪ್ಪೆ ದೇವಿ ಮುದವೆತ್ತಭವಂ ನಿಮಗೀಗೆ ಭದ್ರಮಂ ॥

ವೃ॥ ಜಗುಳ್ದು ಸಮಾಧಿಮೋದದಿನಪರ್ಣೆಯ ಸೌಖ್ಯದೆ ಗಾಡಿವೆತ್ತುತ । ನ್ನೊಗೆದ ವಿಕಾರದೊಳ್ ತಳೆದು ಸಂಭ್ರಮವಿಸ್ಮಯಹಾಸಮಂ ಸರ ॥ ಲ್ದೆಗೆದಲರ್ವಿಲ್ಲನೊಳ್ ಕೆರಳ್ದು ಬೆಂದವನೊಳ್ ಕೃಪೆವೆತ್ತು ಮಶ್ರು ಕೈ । ಮಿಗೆ ರತಿಶೋಕದಲ್ಲದಿರ್ಪ ದೃಷ್ಟಿಗಳೋವುಗೆ ನಿಮ್ಮನೀಶನಾ ॥

## ನಾಂದ್ಯಂತದಲ್ಲಿ

ಸೂತ್ರಧಾರ—ಸಾಕು ! ಅತಿವಿಸ್ತರವಂತಿರಲಿ.

ವೃ॥ ನೆಗಳ್ದಷ್ಟಾವಷ್ಟಾತ್ಯಧೀಜಾಲದೆ ಕೆಡೆಯುದ ಸಿಂಹೋರುವೇಗಂ ನಿಜಭ್ರೂ। ಯುಗಭಂಗಪ್ರೋದ್ಧೃತಾಶೇಷರಿಪುವಿಪುಲಯುದ್ಧಾರ್ಣವಾಂತರ್ಭ್ರವಮಚ್ಛ ॥ ಸ್ರುಗಬಾಹಾವುಂದರಾಕೃಷ್ಟವಿತತವಿಜಯಶ್ರೀವಿವಾಹಪ್ರಿಯಂ ಸಾ। ಧುಗುಣಂ ತಾನೀಗಳೊಲ್ದಾಣತಿಸಿದನೆನಗಾ ಶ್ರೀಮಹೀಪಾಲದೇವಂ ॥

ಪ್ರಾಚೀನರು ಮಹೀಪಾಲದೇವನ ಪ್ರಾಶಸ್ತ್ಯವನ್ನು ಕುರಿತು ಹೀಗೆ ಹೇಳುವರು.

*ವೃ॥ ಪಿರಿದುಂ ಚಾಣಕ್ಯನೀತ್ಯಾಶ್ರಯಣದಿನವಲೇಪಾಂಧರಂ ನಂದರಂ ಕೊಂ। ದುರುಪುತ್ತಂ ಗೆಲ್ದನಾವಂ ಕುಸುಮನಗರಿಯಂ ಚಂದ್ರಗುಪ್ತಕ್ಷಿತೀಂದ್ರಂ ॥ ಧರೆಯೊಳ್ ಕರ್ಣಾಟಕತ್ವಂಬಡೆದುದಯಿಸಿದಾದುಷ್ಟರಂ ಯುದ್ಧದೊಳ್ ಸಂ। ಹರಿಸಲ್ ದೋರ್ದರ್ಪದೃಪ್ತಂ ಮಗುಳ್ದುಮವನೆ ತಾಂ ಶ್ರೀಮಹೀಪಾಲನಾದಂ ॥

ಪಾರಿಪಾರ್ಶ್ವಕ—ಆರ್ಯನೆ ಆ ಮಹೀಪಾಲದೇವನೇನಾಜ್ಞಾಪಿಸಿದನು ?

ಸೂತ್ರ—ವಿಜಯಪ್ರಕೋಷ್ಠನ ಹಿರಿಯ ಮೊಮ್ಮಗನಾದ ಆರ್ಯಕ್ಷೇಮೀಶ್ವರ ಮಹಾಕವಿಯಿಂದ ರಚಿಸಲ್ಪಟ್ಟ ಅಭಿನವಚಂಡಕೌಶಿಕ ನಾಟಕವನ್ನಾಡಿಸಬೇಕೆಂದು ಆಜ್ಞಾಪಿಸಿರುವನು. ಇದಲ್ಲದೆ ಆ ಆರ್ಯಕ್ಷೇಮೀಶ್ವರಕವಿಯೇ ನಾಟ್ಯವೇದವಿಚಕ್ಷಣರಾಗಿಯೂ, ವಿದ್ಯಾಕಲಾವಿದರಾಗಿಯೂ, ಲೋಕಜ್ಞರಾಗಿಯೂ ಇರುವ ಸಭಾಸದರನ್ನು ಕುರಿತು ಹೀಗೆ ಹೇಳಿರುವನಲ್ಲವೆ ?

ಕಂ ॥ ಇಲ್ಲಂ ದೋಷವಿಹೀನಮು ।
ಮಿಲ್ಲಂ ಗುಣಹೀನಮೆನಿಪುದೊಂದುಂ ನೋಡಲ್ ॥
ಬಲ್ಲರದರಿಂದೆ ದೋಷಮು ।
ದುಳ್ಳೊಡೆ ಮರೆಯಿಸುಗೆ ಮೆರೆಯಿಸುಗೆ ಗುಣಗಣಮಂ ॥

ಆದರಿಂದ ಪಾರಿಪಾರ್ಶ್ವಕನೆ, ಕುಶೀಲವರೊಡನೆ ಸಂಗೀತವನ್ನು ಏಕೆ ಆರಂಭಿಸದಿರುವೆ ?

ಪಾರಿ—(ಭಯದಿಂದ ತಲೆ ತಗ್ಗಿಸಿಕೊಂಡು ನಿಂತು) ಆರ್ಯನೆ ! ನೀನು ಆ ಗ್ರಹಣಕಾಲದಲ್ಲಿ ಯಾವಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡುವೆನೆಂದು ಪ್ರತಿಜ್ಞೆಮಾಡಿ ತಪ್ಪಿದೆಯೊ, ಆ ಬ್ರಾಹ್ಮಣನು ಕುಪಿತನಾಗಿರುವನೆಂದು ಕುಶೀಲವರೆಲ್ಲರೂ ಚಿಂತಾಕ್ರಾಂತರಾಗಿರುವರು.

ಸೂ—(ಭಯವನ್ನಭಿನಯಿಸಿ ಚಿಂತೆಯನ್ನು ನಟಿಸಿ ಸಂತೋಷದಿಂದ) ಇದಕ್ಕೇಕೆ ಚಿಂತೆ ? ಇದೋ ! ಈಗ ನಾನು—

*ಕಂ॥ ಪೊರೆಯಲ್ ಸತ್ಯಮನೀಗಳೆ ।
ತರುಣೀತನಯಾತ್ಮವಿಕ್ರಯಂಗೆಯ್ದಾಂ ಪೂ ॥
ಣ್ದೊರೆದಾ ದಕ್ಷಿಣೆಯಂ ಭೂ ।
ಸುರೋತ್ತಮಂಗೀವೆನಾ ಹರಿಶ್ಚಂದ್ರನವೊಲ್ ॥

(ತೆರೆಯಲ್ಲಿ) ಪ್ರಿಯಮಿತ್ರನೆ ! ಇತ್ತಬರಬೇಕಿತ್ತಬರಬೇಕು.

ಸೂ—(ತೆರೆಗಿದಿರಾಗಿ ನೋಡಿ) ಒಹೊ ! ಪೂಜ್ಯನಾದ ಹರಿಶ್ಚಂದ್ರನು ಮಹೋತ್ಪಾತಸೂಚಿತಗಳಾದ ವಿಪತ್ತುಗಳನ್ನು ಕ್ಷೇಮದಿಂದ ಕೊನೆಗಾಣಿಸುವುದಕ್ಕೆ ವಿವಿಧಶಾಂತಿಕ್ರಿಯೆಗಳನ್ನು ಆರಂಭಿಸುವ ಪುರೋಹಿತನಿಂದ ಉಪದಿಷ್ಟವಾದ ನೇಮದಿಂದ ಜಾಗರಣವನ್ನು ಮಾಡಿ, ಅದರಿಂದುಂಟಾದ ದುಂಮಾನದಿಂದ ಕೂಡಿ ತನ್ನ ಪ್ರಿಯಮಿತ್ರನಾದ ಬೋಧಾಯನನು ತೋರಿಸುವ ಮಾರ್ಗನಾಗಿ ಅಂತಃಪುರಕ್ಕೆ ಹೊರಟೇ ಇರುವನು. ಇವನಾದರೊ

ಕಂ॥ ಅರುಣತೆಯನಾಂತು ಬೆಂಡೆ ।
ದ್ದಿರೆ ಜಾಗರದಿಂದೆ ಕಣ್ಗಳಾಸ್ಯಾಬ್ಜಂ ಬಾ ॥
ಡಿರೆ ವಿರಹವ್ಯಥಿತಂ ಪೊ ।
ತ್ತರೆಯೊಳ್ ಯೂಥಮನಗಲ್ದ ಕರಿಯವೊಲಿಪ್ಪಣಂ ॥

ಅದರಿಂದ ಬಾ, ಅಲ್ಲಿಗೆ ಹೋಗೋಣ (ಎಂದು ಹೋಗುವರು).

## ಪ್ರಸ್ತಾವನೆ.

(ಅನಂತರ ಜಾಗರಣದ ಕ್ಲೇಶವನ್ನು ಅಭಿನಯಿಸುತ ರಾಜನೂ ವಿದೂಷಕನೂ ಬರುವರು.)

ವಿದೂಷಕ—ಎಲೈ ಮಿತ್ರನೆ ! ಇದೇನು ?

ಕಂ ॥ ಅರೆಮೊಗವನಿಕ್ಕಿದಾಮೆಯು ।
ಪರಿಯಿಂ ತೂಂಕಡಿಪ ಕಣ್ಗಳಿವೆಯಂ ಪೊಯ್ದುಂ ॥
ತೆರೆದುಂ ಮಾರ್ಗವನರಿಯದ।
ಕುರುಡಿಲಿಯವೊಲತ್ತಮಿತ್ತಸುತ್ತುತ್ತಿಪ್ಪೈ॥

ರಾಜ—ಮಿತ್ರನೆ ! ನಿದ್ರೆಯೇ ಪ್ರಾಣಿಗಳ ಶರೀರಧಾರಣೆಗೆ ಮುಖ್ಯಸಾಧನವಲ್ಲವೆ ? ಕೇಳು.

ಕಂ॥ ಬಗೆಯಂ ತಿಳಿಯಿಕುಮೊಡಲಂ ।
ಲಗುಗೆಯ್ಗುಂ ಮತಿಯು ಬೆಳಗುಗುಂ ದೋಷಗಳಂ ॥
ತೆಗೆದಪುದು ಧಾತುಸಾಮ್ಯವ ।
ನೊಗೆಯಿಪುದಿತ್ತಪುದು ಯೋಗದಿಂದಹ ಸೊಗಮಂ ॥

ಅದರಿಂದೀಗ ನನಗೂ ನಿದ್ರಾಭಾವದಿಂದುಂಟಾಗಿರುವ ಅವಸ್ಥೆಯನ್ನು ನೋಡು.

ಕಂ॥ ತಳೆವುದು ಮೆಯ್ಮುರಿತಮನಾ ।
ಗುಳಿಕೆಗಳಡಿಗಡಿಗೆ ಬರ್ಕುಮಾಯಸದಿಂ ಸಂ ॥
ಗಳಿಪುದು ಜಾಡ್ಯಂ ಮಾನಸ ।
ಕೆಳವಿಸಿಲಂ ನೋಡೆ ನಾಡೆ ಕಣ್ನೀರಯಿಕುಂ ॥

(ಯೋಚಿಸಿ ಆಶ್ಚರ್ಯದಿಂದ) ನನಗೆ ಜಾಗರವನ್ನು ಆಜ್ಞಾಪಿಸಿದ ಪೂಜ್ಯರಾದ ಕುಲಪತಿಗಳಿಗೆ ಈಗ ಏನು ಅಭಿಪ್ರಾಯವೊ? ಹ್ಯಾಗಾದರೂ ಆಗಲಿ ಗುರುಗಳ ಆಜ್ಞೆಯು ವಿಚಾರಕ್ಕೆ ತಕ್ಕದ್ದಲ್ಲ.

ವಿದೂಷಕ—ಮಿತ್ರನೆ! ಯೋಚಿಸಿದರೆ ನನಗೊಂದು ತೋರುವುದು. ನಿನ್ನಾಗಮನಕ್ಕಾಗಿ ಸಡಗರಿಸುತ್ತಿದ್ದ ದೇವಿಯ ಮನೋಭಂಗವೊಂದಲ್ಲದೆ ಇದರಿಂದ ಮತ್ತೇನೂ ಕಾಣುವುದಿಲ್ಲ.

ರಾಜ—ಸಾಕು! ನಿನ್ನ ಪರಿಹಾಸವು ಹಾಗಿರಲಿ.

ವಿದೂ—ನಿನಗಾದರೆ ಇದು ಪರಿಹಾಸ: ಅನಾಥವಟುವಾದ ನನಗೆ ಅನರ್ಥವೆ.

ರಾಜ—(ವ್ಯಸನದಿಂದ ಶೋಕಾಭಿನಯವನ್ನು ಮಾಡಿ) ಮಿತ್ರನೆ! ದೇವಿಯೇನೆಣಿಸುವಳೆಂದು ನೀನಾಲೋಚಿಸುವೆ?

ವಿದೂ—ಇನ್ನೇನು? ಕುಪಿತಳಾಗಿರುವಳೆಂದು ಊಹಿಸುವೆನು.

ರಾಜ—ಮಿತ್ರನೆ! ಅದಕ್ಕೆ ಸಂದೇಹವೇನು? ದೇವಿಯ ಕೋಪಕ್ಕಿದು ಅಲ್ಪಕಾರಣವಲ್ಲ. ಹಾಗೆಯೇ ಸರಿ.

ವೃ॥ ತಡೆದರೊ ಮಂತ್ರಿಗಳ್ ಸೆಳೆದರೋ ಕೆಳೆಯರ್ ಪ್ರಿಯಗೋ
ಷ್ಠಿಯತ್ತ್ರಮೇಣ್। ನಡೆದನೊ ಕೂರ್ತದೊರ್ವಳೆಡೆಗೀ ಶಠನೇತಕೆ
ಬಾರನೆಂದು ಕ॥ ಣ್ಗಡೆ ಕಡುಗೆಂಪನಾನೆ ಮುಳಿಸಿಂ ಮೊಗದೊಳ್
ಗಳದಶ್ರುವಾರಿ ಧೀಂ। ಕಿಡೆ ನಿಡುಸುಯ್ದು ಧೂರ್ತನೆನಿಪೆಂನೊಳ
ದಾವುದನಾಕೆ ಭಾವಿಸಳ್ ॥

ಮತ್ತಂ ॥

ವೃ ॥ ಕಳೆದಳ್ ಭೂಷಾವಿಶೇಷೋದ್ವಹನಪರತೆಯಿಂ ಸಂಜೆಯಂ
ರಾಗದಿಂ ಮೇಣ್। ಕಳೆದಳ್ ಮನ್ಮಾರ್ಗದತ್ತೇಕ್ಷಣೆ ಯೆರಡನೆ

ಯಾಮಯಾಮಮುಮಂ ಬಾರದಾದಂ ॥ ಬಳಿಗಿನ್ನುಂ ಧೂರ್ತನೆಂದಶ್ರುಗ
ಳುಗೆ ತೆಗೆದೀಡಾಡಿ ತೊಟ್ಟೆದ್ದುರ್ವಂ ತಾಂ। ಕಳೆದಳ್ ಮೇಣೆಂತೊ
ಪಾಸೊಳ್ ಪೊರಳುತೆ ರಜನೀಶೇಷಮುಂ ಬೇಸರಿಂದಂ ॥

(ಚಿಂತೆಯನ್ನಭಿನಯಿಸಿ)

ವೃ॥ ಜನಮಾರಾದೊಡಮೈದಲಾನೆ ನಡೆತಂದಂ ನನ್ನಿಯೆಂದಾಕ್ಷಣಂ।
ಮನದೊಳ್ ಸಂಭ್ರಮಮುಣ್ಮೆ ತಾನಿದಿರೆವಂದಾನಲ್ಲದಿರ್ಪಂದು
ಬಿ। ನ್ನನೆ ನಿಂದಂಗವ ನೋಡಿ ತತ್ಸಖಿಯರೋರೊರ್ವರ್ ನಿಗೂ
ಢಸ್ಮಿತಾ । ನನಪಾಥೋಜೆಯರಾಗೆ ಬಾಗಿಸಿದಳಕ್ಕುಂ ಕಾಂತೆ
ವಕ್ತ್ರಾಬ್ಜಮುಂ ॥

ವಿದೂಷಕ—(ನಕ್ಕು) ಮಿತ್ರನೆ ಕಳೆದುಹೋದುದನ್ನು ಕುರಿತು ಹಲು
ಬುತ್ತ ಆತ್ಮವನ್ನೇಕೆ ಆಯಾಸಪಡಿಸುವೆ? ಅಲ್ಲಿಗೆಯೇ ಹೋಗಿ.
ದೇವಿಯ ಮುಳಿಸನ್ನು ತಿಳಿಸೋಣ ನಡೆ.

ರಾಜ—ಭಾಪು ಮಿತ್ರನೆ! ಚೆನ್ನಾಗಿ ಹೇಳಿದೆ. ನಡೆ, ಅಲ್ಲಿಗೆ ಹೋಗೋಣ.
(ಸ್ವಲ್ಪ ನಡೆದು ವ್ಯಸನದಿಂದ ನಿಟ್ಟುಸುರನ್ನು ಬಿಟ್ಟು) ಅಕಾಲದಲ್ಲಿ
ಈಗ ನಾನಲ್ಲಿ ಹೋಗುವುದು ಖೇದವನ್ನುಂಟುಮಾಡುವುದಕ್ಕಲ್ಲದೆ
ಮತ್ತೆ ಬೇರೆಯಲ್ಲ. ಹಾಗೆಯೇ ಸರಿ.

ವೃ॥ ನುಡಿವೆಡೆ ನಿಂದ ಮತ್ಕಥೆಯ ಗಂಟಿಡುವಳ್ ಮಗುಳ್ದಿನ್ನ
ಮಾರ್ಗಮುಂ। ಬಿಡದೆ ವಿಲೋಕಿಪಳ್ ತೃಣಮುಲುಂಗಿದೊಡಂ
ನಡೆತಂದನೆಂದು ತಾ॥ ನೊಡನೆ ಗಣಿಪ್ಪಳಂದವಳ್ಗೆ ಕಾಣಿಸದಂ
ತಿರೆ ಪಿಂದೆ ಪೋಗಿ ಸಂ। ಗಡಿಯಿಸಿ ಕೈಗಳಿಂದವಳ ನೈದಿಲೆ
ಗಣ್ಗಳನಪ್ಪದಾದೆನಾಂ॥

ವಿದೂಷಕ—ಮಿತ್ರನೆ! ನೋಡು! ನೋಡು! ಆಭರಣಗಳನ್ನು ತಂದಿ

ರುವ ಚಾರುಮತಿಯೊಡನೆ ದೇವಿಯು ಏನೋ ಮಾತಾಡುತ್ತಾ ಕುಳಿತಿರುವಳು.

ರಾಜ—(ನೋಡಿ ಸಂತೋಷದಿಂದ) ಆಹ ! ಇದೇನು ?

ವೃ॥ ಅಸಿಯಳಿನಾಂತುದಿಲ್ಲ ಶರಗೌರಕಪೋಲದೆ ಪತ್ರಪಾಳಿ ರಂ।
ಜಿಸೆ ಸಿಡುಗಣ್ಗೆ ಕಾಡಿಗೆಯು ಮೆಚ್ಚಿದುದಿಲ್ಲ ಮೃಗಾಕ್ಷಿಯಿಂದೆ
ಬಂ॥ ಧಿಸಿದುದುಮಿಲ್ಲ ಕೊಂಕುಗುರುಳಾಂತುದು ಚೆಂದುಟಿ
ಬೆಳ್ಪನಾದೊಡಂ। ಪೊಸತಿದು ಸಿಂಗರಕ್ಕೆ ಪುರುಡಿಪ್ಪ ತನು
ಪ್ರಭೆಯಾದಮೊಪ್ಪುಗುಂ ॥

(ಅನಂತರ ಚಿಂತೆಯನ್ನು ಅಭಿನಯಿಸುತ್ತ ದೇವಿಯೂ ಚಾರುಮತಿಯೂ ಬರುವರು).

ಚಾರುಮತಿ—ಎಲೌ ರಾಣಿಯೆ ! ಇದೊ ಆಭರಣಗಳು.

ದೇವಿ—ಎಲೆ ಚಾರುಮತಿ ! ಅಲಂಕಾರಸಾಮಾಗ್ರಿಯಲ್ಲಿ ವ್ಯರ್ಥವಾಗಿ ಆಶೆಪಟ್ಟ ನನ್ನನ್ನು ಎಷ್ಟೆಂದುತಾನೇ ನಿಂದಿಸಿಕೊಳ್ಳಲಿ.

ವಿದೂಷಕ—ಆಹ ! ಈಕೆಯ ಮುನಿಸು ಅಧಿಕವಾಗಿರುವುದು.

ರಾಜ—ಭಾಪು ದೇವಿ ಭಾಪು ! ಸ್ವಭಾವಸುಂದರಗಳಾದ ನಿನ್ನ ಅಂಗಗಳಿಗೆ ಅಲಂಕಾರಾಸಕ್ತಿಯು ತಿರಸ್ಕಾರಾಸ್ಪದವಲ್ಲವೆ ? ಹಾಗೆಯೇ ಸರಿ,

ಕಂ॥ ತಾಂಬೂಲಮಧರಕುತುಕಂ।
ಕಂಬುಗಳಾಲಿಂಗನೋತ್ಸುಕಂ ಹಾರಂ ದೃ ॥
ಕ್ಚುಂಬನಲಾಲಸಮಂಜನ।
ಮೆಂಬುದವರ್ಕ್ರಿಷ್ಟಸಿದ್ಧಿ ನಿನಗವು ತೊಡವೇ ॥

ವಿದೂಷಕ—ಮಿತ್ರನೆ ! ನಡೆ ಸಮಿಾಪಕ್ಕೆ ಹೋಗೋಣ.

ರಾಜ—ತಾಳು ! ಇಲ್ಲಿಯೇ ನಾವು ಮರೆಯಾಗಿದ್ದು ದೇವಿಯು ವಿಸ್ರಂಭ ದಿಂದಾಡುವ ಮಾತುಗಳನ್ನು ಸ್ವಲ್ಪ ಕೇಳೋಣ.

(ಮರೆಯಾಗಿರುವರು).

ಶೈಬ್ಯೆ—ಎಲೆ ಚಾರುಮತೀ ! ಆರ್ಯಪುತ್ರನು ನನ್ನನ್ನು ಹಾಗೆ ನಂಬಿಸಿ ವಿಪ್ರಲಂಭಕ್ಕೆ ಗುರಿಮಾಡಿದ ಬಳಿಕ ಅವಿಶ್ವಸನೀಯಳಾದ ನನ್ನ ಅದೃಷ್ಟಕ್ಕೆ ನಮಸ್ಕಾರ ನಮಸ್ಕಾರ.

ರಾಜ—ಕಂ॥ ಜಲಧರಸಂಕುಲದೊಳ್ ಮರೆ।
ಗೊಳೆ ಪಂಕರುಹಾಪ್ತನಂತರಿಂದಬ್ಜಿನಿ ಯು ॥
ಮ್ಮಳವಾಂಪಳಾಕೆಗದು ವಿ।
ಪ್ರಲಂಭಮಲ್ತಲ್ತು ರವಿಗುಪಾಲಂಭನಮುಂ ॥

ಚಾರು—ಎಲೆ ಒಡತಿ ! ಸಾಕು, ಏಕೆ ದುಃಖಿಸುವೆ ?—ಬಹುವಲ್ಲಭರಲ್ಲವೆ ರಾಜರು ?

ವಿದೂಷಕ—(ಸಮೀಪಕ್ಕೆ ಬಂದು) ಎಲೆ ತೊತ್ತಿನ ಮಗಳೆ, ಬಹುಕಾರ್ಯ ವುಳ್ಳವರೆಂದು ಹೇಳು. ಏತಕ್ಕೆ ಪ್ರಿಯಮಿತ್ರನನ್ನು ಮಿಥ್ಯಾಪವಾದಕ್ಕೆ ಗುರಿಮಾಡುವೆ ?

ರಾಜ—ಮಿತ್ರನೆ ಸಾಕು ! ಕೋಪಿಸಬೇಡ.

ಕಂ ॥ ಮುಳಿಸು ಕರಂ ಜಾಣ್ವೆರಸಿದ।
ಕೆಳದಿಯರಿಂದೇಳ್ಗೆವಡೆಯೆ ನಳಿನೇಕ್ಷಣೆಯ ॥
ರ್ಕಳ ಮಿಥ್ಯೋಪಾಲಂಭ।
ಕ್ಕೊಳಗಪ್ಪಿನಿಯರ್ಕಳಲ್ತೆ ಧನ್ಯರ್ ಜಗದೊಳ್ ॥

ಶೈಬ್ಯೆ—(ರೋದನಮಾಡುವಳು)

ಚಾರು—ಒಡತಿಯೆ ! ಸಂತೈಸಿಕೊ ! ಸಂತೈಸಿಕೊ ! ಘನವಾದ ನಿನ್ನ ಸ್ವಭಾವದಿಂದಲೇ ಅಲ್ಲವೆ ಮಹಾರಾಜನು ಇಷ್ಟುಮಟ್ಟಿಗೆ ಹದ್ದು ಮೀರಿದ್ದು ? ನನ್ನನ್ನು ನೀನು ಕೇಳಿದರೆ ಮಹಾರಾಜನು ನಿನ್ನನ್ನು

ನೋಡಿದರೂ ನೀನು ಅವನನ್ನು ನೋಡಬೇಡ. ಆತನು ಎಷ್ಟು ಪ್ರಿಯೋಕ್ತಿಗಳನ್ನಾಡಿದರೂ ಅದಕ್ಕೆ ಬೆರೆಯದೆ ಬಿರುನುಡಿಗಳಿಂದ ಆತನನ್ನು ಮರುಗಿಸು.

ಶೈಬ್ಯೆ—ಎಲೆ ಚೇಟಿ! ನಿನ್ನ ಯಾವಮಾತನ್ನು ತಾನೆ ನಾನು ನಡೆಯಿಸುವದಿಲ್ಲ? ಆದರೆ ಆರ್ಯಪುತ್ರನನ್ನು ಕಂಡಾಗ ಈ ನನ್ನ ದುಷ್ಟ ಹೃದಯವು ಮಾತ್ರ ನನಗೆ ಅಧೀನವಾಗಿರಬೇಕು.

ರಾಜ—(ಬೇಗನೆ ಸಮೀಪಕ್ಕೆ ಬಂದು) ಪ್ರಿಯೆ!

ಕಂ ॥ ನಡೆಗುಂ ನಿಜಪ್ರಭಾವಂ ।
ಗಡಮೆನ್ನೊಳಮಿಂತು ಮತ್ಪರಾಯಣಭಾವಂ ॥
ಬಡೆದಿರ್ಪ ನಿನ್ನ ಹೃದಯದೆ ।
ನಡೆಯದದೆಂತಿರ್ಕ್ಕುಮುಸಿರ ನಳಿನದಳಾಕ್ಷೀ ॥

ವಿದೂ—ಪೂಜ್ಯಳೆ! ನಿನಗೆ ಮಂಗಳವಾಗಲಿ.

(ಶೈಬ್ಯೆಯೂ ಚಾರುಮತಿಯೂ ಸಂಭ್ರಮದಿಂದ ಎದ್ದು ನಿಂತುಕೊಳ್ಳುವರು)

ಶೈಬ್ಯೆ—(ಸ್ವ) ಓಹೊ! ಆರ್ಯಪುತ್ರನು! ಒಳ್ಳೇದು; ಆಗಲಿ. (ಪ್ರ) ಆರ್ಯಪುತ್ರನಿಗೆ ವಿಜಯವಾಗಲಿ.

ಚಾರು—(ಭಯಪಟ್ಟು ತನ್ನಲ್ಲಿ ತಾನು) ಓಹೊ! ಮಹಾರಾಜನು! ತೆಗೆ ತೆಗೆ! ನಾನು ಆಡಿದ್ದನ್ನು ಕೇಳಿದನೋ ಏನೊ, ಹ್ಯಾಗಾದರೂ ಆಗಲಿ, ಹೀಗೆ ಹೇಳುವೆನು—(ಪ್ರ) ಮಹಾರಾಜನಿಗೆ ವಿಜಯವಾಗಲಿ. ಇದೊ ಪೀಠವು, ಮಹಾರಾಜನು ಇದನ್ನು ಅಲಂಕರಿಸಬೇಕು.

(ಎಲ್ಲರೂ ಕುಳಿತುಕೊಳ್ಳುವರು).

ರಾಜ—(ಚೆನ್ನಾಗಿ ನೋಡಿ)

ಕಂ ॥ ಬೆಳಗಿನ ಸರಸೀರುಹದೊಳ ।
ಗಳಿ ಬಾಯುರೆತೆರಗಿ ತಾಂ ಮರಲ್ವಂತೇಕೆ ॥
ನ್ನೊಳಗೀ ಯಪಾಂಗವಲಿತೋ ।
ಜ್ವಳತಾರಂ ನಿನ್ನ ದೃಷ್ಟಿಯೆರಗಿ ಮರಲ್ಗುಂ ॥

ಮತ್ತಂ

ಕಂ ॥ ತೊಡವುಗಳೊಳಾದನಾದರ ।
ಮುಡುಪತಿಮುಖಿ ನಿನಗದೊಂದು ಸಿರಿಯಿತ್ತಪುದಾ ॥
ದೊಡಮೀ ನಿನ್ನಯ ಹೃದಯದೊ ।
ಳಿಡೆಗೊಂಡಳಿಮುಳಿಸನೆನಗೆ ನುಡಿವವೊಲಿರ್ಕ್ಕುಂ ॥

ಶೈಬ್ಯೆ—(ಅಸೂಯೆಯಿಂದ ಕೂಡಿ) ಆಹ ! ಆರ್ಯಪುತ್ರನು ಅಧಿಕವಾದ ಜಾಗರಣದಿಂದ ಜಡಗಳಾಗಿಯೂ ನಿದ್ರಾಲಸಗಳಾಗಿಯೂ ಇರುವ ಕೆಂಪಾದ ಕಣ್ಣುಗಳಿಂದ ಚೆನ್ನಾಗಿ ಶೋಭಿಸುವನು.

(ಕೋಪವನ್ನು ಅಭಿನಯಿಸುವಳು)

ರಾಜ—(ಚೆನ್ನಾಗಿ ನೋಡಿ ವಿನಯದಿಂದ) ಪ್ರಿಯಳೆ ! ಪ್ರಸನ್ನಳಾಗು ಪ್ರಸನ್ನಳಾಗು.

ವೃ ॥ ಚಂಡಿಯಕಾಂಡದೊಳ್ ಪೊರಳ್ದುವೇಕೆ ಲಲಾಟದೊಳಿರ್ಕ್ಕೆ ಕಾಂಡಕೋ । ದಂಡಜಯಧ್ವಜಾಂಶುಕವಿಲಾಸಮನೊಂದಿದ ಕೊಂಕುವುರ್ವ್ವ ತಾಂ ॥ ತೊಂಡೆಯ ಪಣ್ಣ ಚೆಲ್ವವಡೆದಿಂದುಟಿ ಮಂದಸಮೀರಚಾಲಿತಾ । ಖಂಡಜಪಾಸುಮಕ್ಕೆ ಪಡಿಯಪ್ಪುದದೇತಕೆ ತಳ್ತ ಕಂಪದಿಂ ॥

ಮತ್ತಂ

ವೃ ॥ ಮುನಿವೆಯದೇಕೆ ನೀಂ ಬರಿದೆ ಮಾನಿನಿ ಬಲ್ಲವಮೆನ್ನೊಳಾವುದಂ । ಮನದೆ ವಿಶಂಕಿಪೌ ನಿಜದಿನಾನದನಾಗಿಸಿದಾತನಲ್ತು ಮೋಣ್ ॥ ಇನಿಯಳೆ ದಂಡಿಪಾಸೆಯಿರೆ ದಂಡಿಸು ನೀನೆಳಪಂದದಿಂದ ಮೆ । ನ್ನ ನಿಜಕೆ ಕೇಳ್ ಪ್ರಮಾಣಮೆನಿಪರ್ ಕುಲದಾಣ್ಮರೆನಿಪ್ಪ ದೇಶಿಕರ್॥

ಪ್ರತೀಹಾರಿ---(ಬಂದು) ಮಹಾರಾಜನಿಗೆ ಜಯವಾಗಲಿ. ಇದೊ! ಕುಲಪತಿಗಳ ಸನ್ನಿಧಿಯಿಂದ ತಾಪಸನು ಬಂದಿರುವನು.

ರಾಜ—ಎಲೆ ಹೇಮಪ್ರಭೆ! ಆದರದಿಂದ ಬೇಗನೆ ಕರೆದುಕೊಂಡುಬಾ.

ಪ್ರತೀಹಾರಿ—ಅಪ್ಪಣೆ. (ಎಂದು ಕರತರುವಳು).

(ಅನಂತರ ಶಾಂತ್ಯುದಕಹಸ್ತನಾಗಿ ತಾಪಸನು ಬರುವನು).

ತಾಪಸ—ಓಹೊ! ಇದೇನಾಶ್ಚರ್ಯ?

ವೃ॥ ಏತಕಪರ್ವದೊಳ್ ಗ್ರಹಣಮಿಂದುಗೆ ಸಂಗಡಿಕುಂ ಬಳಿಕ್ಕ ಮಿಂ। ತೇತಕೆ ದಿಕ್ಪ್ರದಾಹಮಿದದೇತಕೆ ಕಂಪಿಕುಮುರ್ವಿಯುಲ್ಕೆ ತಾ॥ ನೇತಕೆ ಭೇದಿಕುಂ ತರಣಿಮಂಡಲಮುಂ ಬಗೆಯಲ್ ವಿಚಿ ತ್ರಮು। ತ್ಪಾತಮಿದಕ್ಕೆ ಮುಂದೆ ಪರಿಣಾಮಮದೆನ್ನದೊ ದೈವ ಯೋಗದಿಂ॥

ಅಥವಾ ಇದು ಕುಶಲಪರಿಣಾಮನಾಗುವುದೆಂದು ಗುರುಗಳಿಂದ ಚಿಂತಿಸಲ್ಪಟ್ಟೇ ಇರುವುದು. ಅಥವಾ ಗುರುಗಳಿಂದ ಚಿಂತಿಸಲ್ಪಡುವ ಈ ಯುತ್ಪಾತವು ಕುಶಲಪರಿಣಾಮವುಳ್ಳದ್ದಾಗಬಹುದು.

ಕಂ॥ ಶಾಂತಿಸ್ವಸ್ತ್ಯಯನದ್ವಿಜ।
ಸಂತಾನಸ್ವಸ್ತಿವಾಚನದೆ ದಾನದೊಳಂ॥
ಸಂತರ ಸಂಕೀರ್ತನೆಯೊಳ।
ಮಾಂತುತ್ಪಾತಂಗಳೆಲ್ಲಮಳಿವಂ ಪಡೆಗುಂ॥

ಆದುದರಿಂದಲೆ ಪೂಜ್ಯರಾದ ಕುಲಪತಿಗಳು ಸ್ವಸ್ತ್ಯಯನಕರ್ಮದಲ್ಲಿ ಅವಶಿಷ್ಟವಾಗಿಯೂ ಸರ್ವೋತ್ಪಾತಶಮನವಾಗಿಯೂ ಇರುವ ಶಾಂ ತ್ಯುದಕವನ್ನು ತೆಗೆದುಕೊಂಡು ಮಹಾರಾಜನಾದ ಹರಿಶ್ಚಂದ್ರನ ಬಳಿಗೂ ಶೈಬ್ಯೆಯ ಬಳಿಗೂ ನನ್ನನ್ನು ಕಳುಹಿಸಿದರು.

ಪ್ರತೀಹಾರಿ—(ಪ್ರವೇಶಿಸಿ) ಇತ್ತ ಬಿಜಮಾಡಬೇಕು.

ಋಷಿ—(ಸಮೀಪಕ್ಕೆ ಬಂದು) ಮಹಾರಾಜನೆ! ನಿನಗೆ ಸ್ವಸ್ತಿಯಾಗಲಿ.

ರಾಜ—(ಬೇಗನೆ ಎದ್ದು) ಪೂಜ್ಯರೆ! ನಮಸ್ಕರಿಸುವೆನು.

ಶೈಬ್ಯೆ—ಪೂಜ್ಯರೆ! ವಂದಿಸುವೆನು.

ತಾಪಸ—ಎಲೈ ರಾಜನೆ! ಜಯಶೀಲನಾಗು—ಎಲೌ ಪೂಜ್ಯಳೆ! ವೀರಮಾತೆಯಾಗು.

ರಾಜ—(ತ್ವರೆಯಿಂದ) ಎಲ್ಲಿ, ಪೀಠವೆಲ್ಲಿ?

ಪ್ರತೀಹಾರಿ—(ಪೀಠವನ್ನು ತರುವಳು)

ರಾಜ—ಪೂಜ್ಯರೆ! ಇದೊ ಪೀಠವು; ಇಲ್ಲಿ ಕುಳಿತುಕೊಳ್ಳಬೇಕು.

(ಎಲ್ಲರು ಕುಳಿತುಕೊಳ್ಳುವರು).

ರಾಜ—ಎಲೆ ಹೇಮಪ್ರಭೆ! ಬಾಗಿಲಲ್ಲಿ ಕಾದಿರು ಹೋಗು.

ಪ್ರತೀಹಾರಿ—ಅಪ್ಪಣೆ (ಎಂದು ಹೋಗುವಳು).

ತಾಪಸ—ಎಲೈ ರಾಜನೆ! ರಾತ್ರಿ ಜಾಗರಣಾನಂತರದಲ್ಲಿ ಸಪತ್ನೀಕನಾದ ನಿನ್ನ ಅಭಿಷೇಚನಕ್ಕಾಗಿ ಪೂಜ್ಯರಾದ ಕುಲಪತಿಗಳು ಆಶೀರ್ವಚನಗಳಿಂದತಿಶಯಪ್ರಭಾವವನ್ನು ಪಡೆದ ಸ್ವಸ್ತ್ಯಯನಕ್ರಿಯಾಶೇಷವಾದ ಈ ಶಾಂತ್ಯುದಕವನ್ನು ಕಳುಹಿಸಿರುವರು.

ರಾಜ—(ಸಂತೋಷದಿಂದ ಬದ್ಧಾಂಜಲಿಯಾಗಿ) ಮಹಾಪ್ರಸಾದ.

ತಾಪಸ—ವೃ॥ ಕಲುಷಪ್ರಧ್ವಂಸಿಮಂತ್ರಪ್ರಪಠನಪರಿಪೂತಂ ಪರಂ
ಕ್ಷತ್ರತೇಜೋ। ಬಲದಂ ಮೇಣುದ್ಯದಾಪತ್ಕುಲಶಮನವಿಧಾನ
ಕ್ರಿಯಾಶೇಷಮೀ ಮಂ॥ ಗಳತೋಯಂ ಭೂರಿಭೂತಿಪ್ರದಮೆನಿ
ಸಿ ವಿಪದ್ವ್ರಾತಮಂ ಘಾತಿಸುತ್ತ। ಗ್ಗಳಮುಪ್ಪಾನಂದಮಂ
ನೀಡುಗೆ ನಿನಗೆ ಸಹಸ್ರಾಂಶುವಂಶಾಬ್ಧಿಚಂದ್ರಾ॥

(ಎಂದು ಅಭಿಷೇಕಿಸುವನು)

ರಾಜ—(ಸ್ಪರ್ಶಸುಖವನ್ನು ಅಭಿನಯಿಸಿ)

ಕಂ ॥ ವಸುಮತ್ಕುಲದ ನೃಪರ್ ಯ।
ತ್ಪ್ರಸಾದಸಾಮರ್ಥ್ಯದಿಂದೆ ತಲೆಯೆತ್ತಿದರೀ ॥
ವಸುಧೆಯೊಳಾ ನೃಪಬೀಜ।
ಪ್ರಸವಾಂಕುರ ಕಾರಣೈಕತೀರ್ಥಮಿದಲ್ತೆ ॥

ತಾಪಸ-ಪೂಜ್ಯಳೆ! ನೀನೂ ಕುಲಪತಿಗಳ ಆಜ್ಞಾನುಸಾರವಾಗಿ ಗೃಹದೇವತೆಗಳಿಗೂ ಬ್ರಾಹ್ಮಣರಿಗೂ ಪೂಜಾಸಂಭಾರಗಳನ್ನು ಸಿದ್ಧಪಡಿಸು.

ಶೈಬ್ಯೆ—(ಕೈಗಳನ್ನು ಮುಗಿದು) ಪೂಜ್ಯರು ಅಪ್ಪಣೆ ಕೊಡಿಸಿದಂತೆ.

ತಾಪಸ—ಎಲೈ ಮಹಾರಾಜನೆ! ನಿನಗೆ ಮಂಗಳವಾಗಲಿ. ಇನ್ನು ನಾನು ವಿವಿಧವಿಧಾನಗಳನ್ನು ಆರಂಭಿಸಿರುವ ಕುಲಪತಿಗಳನ್ನು ಸಂಭಾವಿಸಲು ಹೋಗಿಬರುವೆನು. (ಎಂದು ಹೋಗುವನು)

ಶೈಬ್ಯೆ–(ತಲೆವಾಗಿ, ರಾಜನಿಗೆ ಮರೆಯಾಗಿ) ಎಲೆ ಚಾರುಮತಿ !ಆರ್ಯಪುತ್ರನ ರಾತ್ರಿಜಾಗರಣವು ಪೂಜ್ಯರಾದ ಕುಲಪತಿಗಳ ಆಜ್ಞೆಯಿಂದಾದದ್ದು. ಅದನ್ನು ತಿಳಿಯದೆ ದುರಾಲೋಚನೆಯನ್ನು ಮಾಡಿದ ಈ ದುಷ್ಟಹೃದಯದಿಂದ ದುರ್ಜನೆಯಾದೆನಲ್ಲ! ಏನು ಮಾಡಲಿ? ಒಳ್ಳೇದು! ಹೀಗೆ ಮಾಡುವೆನು. (ಪ್ರಕಾಶ ; ಕೈಮುಗಿದು) ಆರ್ಯಪುತ್ರನೆ! ಪ್ರಸನ್ನನಾಗು.

ರಾಜ—(ಅನುರಾಗದಿಂದ ಕೂಡಿ)

ವೃ॥ ಇನಿಯಳೆ ಎನ್ನೊಳಿಲ್ಲದಪರಾಧವನಂತಿರೆ ಕಲ್ಪಿಸುತ್ತೆ ದು । ಮ್ಮ
ನವೆರಸಿರ್ದ್ದ ಮಾಪರಿಯೊಳೆನ್ನನೆ ಸಂತವಿಸುತ್ತಮಿರ್ಪ್ಪನಿ॥ ನ್ನನು
ನಯಮಿಂತಿದಂ ಪತಿಕರಿಪ್ಪೊಡೆ ಕಂಠದೆ ಹಾರಮಂ ಕದಂ।
ಪಿನೊಳೆ ವಿಚಿತ್ರಪತ್ರಚಯಮಂ ನಿನಗಾಂ ವಿರಚಿಪ್ಪೆನೊಲ್ಮೆಯಿಂ ॥

ಶೈಬ್ಯೆ—(ಲಜ್ಜೆಯನ್ನಭಿನಯಿಸುವಳು)

ರಾಜ—(ಹಾಗೆ ಸಿಂಗರಿಸುತ್ತಾ)

ವೃ॥ ಬೆವರುಂ ರೋಮಾಂಚಮುಂ ನಿನ್ನಯ ಕದಪಿನೊಳುಣ್ಮಿತ್ತು ಮೇಣೆನ್ನ ಕೈ ಕಂ। ಪಮನಾಂತತ್ತಂತರಿಂದೀ ಯುಭಯವಿಧಿ ವೃಥಾರಂಭಮಾಯಾಸಮಾತ್ರಂ॥ ರಮಣೀಕಂಠಾರ್ಪಿತಂ ಹಾರ ಮಿದುಮುರಸಿಜಾತಾಗ್ರ ಕಲ್ಲೋಲಿತಂ ತಾ। ನಮರ್ದಿಕ್ಕುಂ ಮ ತ್ಕರಾಸಂಗದೊಳಗೊದವಿದಾಕಂಪಮಂ ಮಾಣದಿನ್ನುಂ ॥

ಶೈಬ್ಯೆ—ಆರ್ಯಪುತ್ರನೆ! ಪೂಜ್ಯರಾದ ಕುಲಪತಿಗಳು ಅಪ್ಪಣೆ ಕೊಡಿಸಿದುದನ್ನು ನೆರವೇರಿಸುವುದಕ್ಕೆ ಹೋಗುವೆನು.

ರಾಜ— ದೇವಿ! ಹಾಗೆಯೆ ಮಾಡು.

(ದೇವಿಯೂ ಚಾರುಮತಿಯೂ ಹೊರಟುಹೋಗುವರು).

ರಾಜ—ಎಲೈ ಮಿತ್ರನೆ! ಕಳವಳಿಸುವ ಈಮನಸ್ಸನ್ನು ಈಗ ಹ್ಯಾಗೆ ತಾನೆ ವಿನೋದಪಡಿಸಲಿ?

ವಿದೂ—ನೀನು ದೇವಿಯ ಸಂಬಂಧಿಯಾದ ಕಥೆಯಿಂದ ಮನಸ್ಸನ್ನು ಯಾಕೆ ವಿನೋದಪಡಿಸಬಾರದು? ನಾನಾದರೊ ಭೋಜನಕಥೆಯಿಂದ ನನ್ನ ಮನಸ್ಸನ್ನು ವಿನೋದಪಡಿಸುವೆನು.

(ವನೇಚರನು ಪ್ರವೇಶಿಸುವನು)

ವನೇಚರ—ಒಡೆಯನಿಗೆ ಗೆಲವಾಗಲಿ ಗೆಲವಾಗಲಿ.

ರಗಳೆ॥ ಇದೊ ನೀಳ್ದ ಮುಸುಡಿನಿಂ ಪೋಳ್ದ ಕೊನ್ನಾರೆಯೊಳ್।
ಪುದಿದ ಸೌಸವಮ ಸೂಸುವ ಸುಯ್ಲ ಗಾಳಿಯೊಳ್॥
ಪರೆದರೆಗಡಿದ ಸಿತಕಶೇರುಕವ್ಯಾಜದೊಳ್।
ಪರವಿಜಯಯಶವನೆರಚುತ್ತ ದಶದಿಶೆಗಳೊಳ್॥
ಕಲ್ಮಳೆಯ ಕರೆವ ಪೊಸಮುಗಿಲವೊಲ್ ತೋರುತಂ।

ಗುಲ್ಮದ್ರುಮಾಳಿಯುಂ ಸೋಂಕಿನಿಂ ಕೆಡಪುತಂ ॥
ಪಿರಿದೆನಿಸಿ ಪೊರಮಡುವ ಘುರುಘುರಾಶಬ್ದದಿಂ ।
ಪರಿವ ಸಿಂಗಗಳ ತೀವಿದ ಘನಾರಾವದಿಂ ॥
ದೊಗೆದ ಬಲ್ಮೊಳಿಸಿನಿಂ ನೆಗಪುತೆ ಕೊಡಂಕೆಯುಂ ।
ನೆಗಳುತೆ ಸಟಾಕಲಾಪದೆ ತಟಚ್ಛಂಕೆಯುಂ ॥
ಮುಳಿಸು ಬೆಂಕಿಯ ಜಾಲೆಯುದೆನಿಪ್ಪ ಸಂದೆಗಂ ।
ಗೊಳಿಪ ಜಿಹ್ವೆಯ ಚಾಲಿಪುದರಿಂದ ಮಾವಗಂ ॥
ಮೊಗದಲ್ಲಿ ತಗುಳ್ದ ಕಾಳ್ಕಿಚ್ಚನುಗುಳಿಪವೊಲ್ ।
ಬಿಗುರ್ವಡಿಸಿ ನೋಳ್ಪರ್ಗೆ ಹರಿನೀಲಮಣಿಯುವೊಲ್ ॥
ಮತ್ತಮಂಜನತಮಾಲಾಸಿವಲ್ಲರಿಯವೊಲ್ ।
ಪೆತ್ತಿರ್ಪ ಮೆಯ್ವಣ್ಣದಿಂದೆ ಸಂಗಡಿಸಿ ಬಲ್ ॥
ಮಿರುಪ ಕೆಂಗಣ್ಣಿಕ್ಕುತಂ ಮುಷೀಮಾಂಸಲಂ ।
ಮೆರಗುಂ ಸ್ಫುಲಿಂಗಶೇಷದವಾಗ್ನಿವೊಲ್ ವಲಂ ।
ಅಗಿತಕಗಿದ‌ಡುಗಿದ ಮೃಣಾಳದಂಡದ ತೆರದೆ ।
ಜಗಜಗಿಪ ದಾಡೆಯಾಂತತಿಕರಾಳಾನನದೆ ॥
ಚಿರಕಾಲದಿಂದೆ ಸಂಗಡಿಸಿರ್ದ್ದ ವೈರದಿಂ ।
ಕೆರಳ್ದಣಲೊಳಡಸಿ ಕುಕ್ಕಿದ ಚಂದ್ರಬಿಂಬದಿಂ ॥
ಪೊರಮಟ್ಟ ತತ್ಕಲಾಯುಗ್ಮವೆಂಬಂದದಿಂ ।
ದರರೆ ಕಣ್ಗೊಳಿಸುತ್ತೆ ಲಯುತಿಮಿರದಂದದಿಂ ॥
ಮತ್ತಮಿಳೆಯುಳುಪಿ ನೆಗೆದಾದಿಕಿಟಿವೊಲ್ ವಲಂ ।
ಪತ್ತಿತು ಮೃಗವ್ಯಭೂಮಿಯ ಸೊಕ್ಕಿದೆಕ್ಕೆಲಂ ॥

ಆದುದರಿಂದ ಇನ್ನು ದೇವನ ಚಿತ್ತವಿದ್ದಂತೆ ನಡೆಯಿಸತಕ್ಕದ್ದು. ನಾನೂ ಅಲ್ಲಿಗೆ ಹೋಗುವೆನು. (ಎಂದು ಹೋಗುವನು)

ರಾಜ—(ಸಂತಸದಿಂದ) ತಕ್ಕ ವಿನೋದಸ್ಥಾನವು ಈಗಲೀಗ ದೊರೆಯಿತು

ವಿದೂ—(ಕೋಪದಿಂದ) ಎಲೈ ಮಿತ್ರನೆ ! ಹಳ್ಳ ತಿಟ್ಟು ಮುಳ್ಳು ಕಲ್ಲು ಮೊದಲಾದವುಗಳಿಂದ ದುರ್ಗಮವಾದ ಕಾಡುಗಳನ್ನು ಹತ್ತಿ ಯಿಳಿದು ಹಸಿವು ತೃಷೆಗಳಿಂದೆ ಕಂಗೆಟ್ಟು ಸಂಕಟಪಡುವ ಮೃಗಬೇಟೆಯು ಕೂಡ ನಿನಗೆ ವಿನೋದಸ್ಥಾನವಾದ ಮೇಲೆ ನಿನಗೆ ಇನ್ನು ಯಾವದು ತಾನೆ ಆಯಾಸಕರವಾದ ಸ್ಥಾನವಾಗುವುದು ?

ರಾಜ—ಮಿತ್ರನೆ ! ರಾಜರಿಗೆ ಮೃಗಬೇಟೆಯೆಂಬುದು ಕೇವಲ ಉಪಕಾರಿ ಯಾದದ್ದು, ಹಾಗೆಯೆ ಸರಿ.

ವೃ॥ ಬಿನದಮನಾಗಿಕುಂ ಬೆಗಡನೊಂದಿದ ಚಿತ್ತಕೆ ಮೇಣ್ ಸ್ಥಿರ
ತ್ವಮಂ । ತೊನೆವುದರಲ್ಲಿ ಮಾಡುವುದು ದೇಹದೆ ಲಾಘವಮಂ
ನಿಮಿಚ್ಛ್ರಗುಂ ॥ ಜನಿಯಿಪ್ರದುಚ್ಚಹಕ್ಕೆ ಮತಿಯುಂ ನೃಪರ್ಗಾ
ಹವಕರ್ಮಯೋಗ್ಯಮೆಂ । ದೆನಿಸಿದ ಬೇಂಟೆಯುಂ ವ್ಯಸನಮೆಂದು
ಸಿರ್ಗಂ ಜನಮೇನನೆಂದಪೆಂ ॥

(ಎಂದು ಎಲ್ಲರು ಹೊರಟುಹೋಗುವರು)

ಪ್ರಥಮಾಂಕಂ ಸಮಾಪ್ತಂ.

---

## ಎರಡನೆಯ ಅಂಕ.

---

(ತೆರೆಯಲ್ಲಿ) ಎಲೆ ಎಲೆ ವರಾಹಾನ್ವೇಷಿಗಳೇ—

ವೃ॥ ಇದೊ ಕದಡಿತ್ತು ಕೋಳ್ಕೆಸರನಬ್ಜಿನಿಯುಂ ಮುರಿದತ್ತು ಮೆ
ಲ್ದುದಿಂ। ತಿದೊ ಗುರುಗುಂದ್ರವುಂ ತಗುಳ್ದುಗುಳ್ತುದು ಮುಸ್ತೆಯ
ಕಾವನತ್ತವೈ॥ ದಿದುದದೊ ಉತ್ಕಶೇರುಗೆಡೆವಂದುದು ವಂದುದು
ಪೋಯ್ತು ಪೋಯ್ತದೆಂ। ದೊದದರ್ಗ ಕಿರಾತರಾರಯೆ ವನಾಂ
ತಮು ಪೊಕ್ಕುದು ಸೊಕ್ಕಿದೆಕ್ಕಲಂ॥

ಆದುದರಿಂದ ವನದ ಸುತ್ತಲೂ ಮುತ್ತಿಗೆ ಹಾಕಿಹಾಕಿ.

ವೃ॥ ಬಲೆಯೊರ್ಗಂ ಜಾಲಿಕರ್ ಬೀಸುಗೆ ಪೊದರ್ಗಳೊಳಾ ಶೌನಿಕರ್
ನಾಯ್ಗಳಂ ಶ್ಯಂ। ಖಲೆಯಂ ಗೋಣತ್ತಣಿಂದಂ ಕಳಚಿ ಬಿಡುಗೆ
ನೀಡುಂ ಪೊದಳ್ದಿತ್ತಲುಂ ನೇ॥ ಣ್ದಳೆದಿದರ್ಗ ಸಾದಿಗಳ್ ತೀವುಗೆ
ಬನದೆಡೆಯುಂ ಶ್ರಾಂತವಾಹಕ್ಕೆಳೆತ್ತಂ। ಬಲುಹಿಂದಾರಯ್ಗೆ
ಕಾಲಪ್ರಭವುಹಿಪಚರರ್ ದಂಡಿಗಳ್ ಕಾಡನೆಲ್ಲಂ॥

(ಅನಂತರಂ ಭೀಕರವೇಷನಾದ ವಿಘ್ನಪತಿಯು ಸಂಭ್ರಾಂತನಾಗಿ ಪ್ರವೇಶಿಸುವನು)

ವಿಘ್ನ—(ಶಂಕೆಗೂಡಿ)

ವೃ॥ ಹರನ ಸಮಾಧಿಗಂ ಬಳಿಕೆ ದಕ್ಷನ ಯಾಗಕಮದ್ರಿಕನ್ಯಕಾ।
ಗಿರಿಶರ ಕೇಳಿಗಂ ಬಗೆಯೆ ವಿಘ್ನಮನಾಗಿಸಿ ಕೋರಿದಾ ಸುರಾ॥
ಸುರನರಲೋಕಸಂಭೃತಹಿತವ್ಯವಸಾಯವಿಶೇಷಸಿದ್ಧಿಸಂ। ಹರಣ
ವಿಲಾಸಕೌತುಕಪರಂ ಪರಮಂ ಬಲಶಾಲಿವಿಘ್ನಮಾಂ॥

ಕಂ॥ ಹರಿಹರವಿಧಿಗಳ್ಗರಿದ।
ಪ್ಪುರುವಿದ್ಯಾತ್ರಯಮನುಗ್ರತಪದಿಂ ಗಳಿಪೀ॥
ಪರಮತಪಸ್ವಿಯಿನಿಂದು।
ದ್ಧರಿಪೆಂ ಧರೆಯಂ ವರಾಹರೂಪಿನ ಹರಿವೊಲ್॥

(ಹಿಂದೆನೋಡಿ ಭಯದಿಂದಕೂಡಿ)

ಆಹ! ಲೋಕದ ಕಾರ್ಯಕ್ಕೆ ಹಗೆಯೆನಿಸಿ ಪರರ ಪೌರುಷಕ್ಕೆ ವಿಘ್ನವ ನೆಸಗುವಲ್ಲಿ ಬಹುವಿಚಕ್ಷಣನೆನಿಸಿದ ನನ್ನ ಸಾಹಸಂಗಳು ಶರೀರಾ ಪೇಕ್ಷೆಯನ್ನು ಬಿಟ್ಟಿರುವುವು. ಹ್ಯಾಗೆಂದರೆ—ಕಾಲನ ದಂಷ್ಟ್ರಾಂತ ರಾಳದಲ್ಲಿ ಸಿಕ್ಕದಂತಿದ್ದ ನಾನು ಬಾಣದ ಗುರಿಯನ್ನು ಅತಿಪ್ರಯಾಸ ದಿಂದ ತಪ್ಪಿಸಿಕೊಂಡು ಮಹಾರಾಜನಾದ ಹರಿಶ್ಚಂದ್ರನನ್ನು ಈ ಅರ ಣ್ಯಪ್ರದೇಶಕ್ಕೆ ಸೆಳೆತಂದೆನು. ಮುಂದೆ ಈತನನ್ನು ವಿಶ್ವಾಮಿತ್ರನ ಆಶ್ರಮವನ್ನು ಸೇರಿಸುವೆನು. ಏತಕ್ಕೆಂದರೆ ಉಗ್ರತಪೋಬಲದಿಂದ ಕ್ಷತ್ರಿಯನಾಗಿದ್ದು ಮೊನ್ನೆತಾನೆ ಬ್ರಾಹ್ಮಣನೆನಿಸಿಕೊಂಡು ಚಂಡಾಲ ನಿಂದ ಯಜ್ಞವನ್ನು ಮಾಡಿಸಿ ಮತ್ತು ಪ್ರತಿಸೃಷ್ಟಿಯನ್ನು ಮಾಡುವ ವಿಷಯದಲ್ಲಿ ಪ್ರಥಮಪರಮೇಷ್ಠಿಯಾಗಿಮೆರೆವ ವಿಶ್ವಾಮಿತ್ರನು ಗುಣ ತ್ರಯಾತ್ಮಕವಾದ ಸೃಷ್ಟಿಸ್ಥಿತಿಸಂಹಾರಕಾರಿಗಳಾದ ವಿದ್ಯೆಗಳ ಸಿದ್ಧಿ ಗಾಗಿ ಅಸಾಧ್ಯಕರ್ಮವನ್ನು ಆರಂಭಿಸಿರುವನು.

ವೃ॥ ಧರೆಯಂ ಸೃಷ್ಟಿಪನಬ್ಜಜಂ ಸೃಜಿಯಿಸಂ ಕಂಜಾಕ್ಷನುಂ ತ್ರ್ಯಕ್ಷನುಂ। ಪೊರವಂ ಲೋಕಮನೆಲ್ಲ ಶೌರಿ ಪೊರೆಯುಂ ವಾಗೀ ಶನುಂ ಭರ್ಗನುಂ॥ ಹರನೊರ್ವಂ ತವಿಪಂ ಜಗತ್ರಯಮನಾರ ಯ್ವಲ್ಕೆ ತಾನಿಂತು ಮೂ। ವರ ಕೃತ್ಯಂಗಳದೆಂತುಟೊರ್ವನೊಳೆ ತಾಳ್ಗುಂ ಸಿದ್ಧಿಯುಂ ನೋಳ್ಪೆನಾಂ॥

(ಚಿಂತಿಸಿ) ಒಂದುಪಕ್ಷಕ್ಕೆ ಪರಮನೈಷ್ಠಿಕನಾದ ಈ ಮುನಿಯಲ್ಲಿ ಏನು

ತಾನೆ ಎಣಿಸಲಾಗದು. ಆದರೆ ಸ್ವಭಾವವಾಗಿ ಮುನಿಗಳಿಗೆ ಮುನಿಸು ಸುಲಭತರನಾದುದರಿಂದ ಶ್ರೇಯಸ್ಸಿಗೆ ಹಗೆಯಾದ ಕಾಮಕ್ರೋಧಗಳ ವೃತ್ತಿಯನ್ನು ಆಶ್ರಯಿಸಿ ಇದನ್ನು ಉಪಕ್ರಮಿಸಿದೆನು. ಈ ವಿಷಯ ದಲ್ಲಿ ಫಲಿಸುವದೇನೊ ನಾನು ಕಾಣೆ.

(ತೆರೆಯಲ್ಲಿ)

ಕಂ ॥ ಪುಗಲರಿದಾದಡವಿಯುನಾಂ ।
ಪುಗುತಂ ಮರೆಯಾದೆ ನೆಂನನೇಗೈದಪನೀ ॥
ಜಗತೀಪತಿಯೆಂದೆನುತಂ ।
ಮಿಗೆ ಬಗೆಯೊಳ್ ಸೊಕ್ಕಿದೆಕ್ಕಲನೆ ನಿಲ್ಲೀಗಳ್ ॥

ವೃ ॥ ತಳೆದುದರಂತೆವೊಲ್ ಕ್ಷಣದೆ ಕಾಣಿಸಿ ಕಾಣಿಸದಿರ್ಪ ಮಾಯೆ ಯಿಂ ॥ ಸೆಳೆದೆ ಕುತೂಹಲಂಗೊಳಿಸಿ ನಿರ್ನೆರಮೆನ್ನನಿನಿತ್ತು ದೂರಮಿಾ ॥ ಗಳುಮೆಲೆ, ದುಷ್ಟಮನ್ನಯನಮಾರ್ಗವನೈದಿದೆ ಯಾದೊಡಿನ್ನು ಕೋ। ಮಳತರಮಾದುವಂ ಮುಗುಳೆ ಮರ್ದಿಸೆ ನೀಂ ನಳಿನೀವನಂಗಳಂ ॥

ವಿಘ್ನ—(ಕೇಳಿ ಸಂತೋಷದಿಂದ) ಆಹ! ಇದೊ ರಾಯನು ಸಮಿಾಪ ದಲ್ಲಿಯೇ ಇರುವನು. ಆದುದರಿಂದ ಇಲ್ಲಿಂದ ಪೊರಮಟ್ಟು ಆ ಮಾಯೆಯನ್ನೇ ತಳೆದು ನನ್ನ ರೂಪನ್ನು ತೋರ್ಪಡಿಸುವೆನು. (ಬೇಗನೆ ಓಡಿಹೋಗುವನು)

ಇದು ಶುದ್ಧವಿಷ್ಕಂಭವು.

(ಅನಂತರ ಹಂದಿಯು ಬೆನ್ನಂಟುವುದನ್ನು ಅಭಿನಯಿಸುತ್ತ ಧನುರ್ಧಾರಿ ಯಾದ ರಾಜನೂ ಸೂತನೂ ಬರುವರು.)

ರಾಜ—''ತಳೆದುದರಂತೆವೊಲ್''(ಎಂಬ ಪದ್ಯವನ್ನು ಪುನಶ್ಚ ಹೇಳುವನು)

ಸಾರಥಿ—(ಮುಂದೆ ನೋಡಿ ಸಂತೋಷದಿಂದ) ಆರ್ಯನೆ! ಆರ್ಯನೆ! ಆ

ಹಂದಿಯು ಸಮೀಪದಲ್ಲಿಯೇ ಇರುವಹಾಗಿದೆ, ನೋಡು.

ವೃ॥ ಇದೊ ಸಮಿಪಾಗಳೊಕ್ಕ ಬಿಸದಿಂ ಪುದಿದಿರ್ಪ್ಪವನೋರ್ವಿ ಕಾ ಣ್ಬುದಿಂ। ತಿದೊ ಕದಡಿರ್ದ್ದ ನೀರೊರೆತೆಗಳ್ ಸರಸೀತಟದಲ್ಲಿ ತೋರ್ಕ್ಕುರ್ಮಿಮಿಂ॥ ತಿದೊ ಪಿರಿದುಂ ಶ್ರಮೋದ್ಗಳಿತಫೇನದೆನಾಂದ ಗರುಂಕೆದಾಣಮಿಂ। ತಿದುದರ ಸುಯ್ಗಳಿಂ ಬಲಿದ ಮುಸ್ತೆಯ ಕಂಪೊಳಕೊಂಡ ಮಾರುತಂ॥

(ಚೆನ್ನಾಗಿ ನೋಡಿ) ಆರ್ಯನೆ! ಆರ್ಯನೆ! ಇದೊ ನೋಡು.

ವೃ॥ ಭರದಿಂ ಕಿಳ್ತಾಂತ ಕಂದಾಂಕುರದ ತರಳನಾಳಾಬ್ಜಮೊಂದಾ ಸ್ಯದೊಳ್ ತ। ಳ್ತಿರೆ ಗೂಢಂ ನಾಭಿಪದ್ಮಂ ಬೆಳೆದು ವದನಮಂ ಪೊರ್ದ್ದಿದಂತಿರ್ಪ್ಪ ಲೀಲಾ॥ ಕಿರಿಪೊಲ್ ದಂಷ್ಟ್ರಾಗ್ರಲಗ್ನೋ ರ್ವಿಯ ಮುಗುಳೆ ಕರುತ್ತೆತ್ತಲಾಕಾಂಕ್ಷಿಕುಂ ನಿ। ರ್ನೆರಮಿಾ ಲೀಲಾ ಮುಹುರ್ವಲ್ಗಿತಪೃಥುಲತರಗ್ರೀವದೇಹಂ ವರಾಹಂ॥

ರಾಜ—(ಸಂತೋಷದಿಂದ ನೋಡಿ) ಆಹ! ಇದೊ ನನಗೆ ಇದಿರಾದುದು (ಎಂದು ಶರಸಂಧಾನವನ್ನು ಅಭಿನಯಿಸುವನು.)

ಸೂತ—(ಕೌತುಕದಿಂದ ನೋಡಿ) ಎಲೈ! ಆಯುಷ್ಮಂತನೆ ಇದೊ ನೋಡು.

ವೃ॥ಬಿಂಕದೊಳೈದಿ ಮೇಣ್ತಿರುಗಿ ಭೋಂಕನೆ ಕಣ್ಗೆಡೆಯಾಗಿ ಭೀತಿಯಿಂ। ಸಂಕುಚಿತಾತ್ಮಪೃಷ್ಠಮನಿರುಂಕಿಸಿ ನೀಳ್ದಿರೆ ಮುಂತಣಂಘ್ರಿ ಸು॥ ಯ್ಲಿಂ ಕವಲಾದ ಬಾಯ ಕಡೆಯಿಂದುದಿರುತ್ತಿರೆನುರ್ಗ್ಗಿದಬ್ಜ ಸೂ॥ ತ್ರಾಂಕುರಮೊಪ್ಪಿಕುಂ ನಿನಗೆ ದಾಡೆಯ ನಾಣ್ಕೆಡೆನಮ್ರಿತಾನನಂ॥

ರಾಜ—(ಬಾಣವನ್ನು ಬಿಟ್ಟಂತೆ ಅಭಿನಯಿಸಿ ಸಮೀಪಕ್ಕೆ ಹೋಗಿ ಎಲ್ಲಾ ಕಡೆಯನ್ನು ನೋಡಿ) ಅಯ್ಯೊ! ಮಾಯವಾದ ಈ ವರಾಹದಲ್ಲಿ ಸಮಯವರಿಯದೆ ಬಾಣವನ್ನು ಬಿಟ್ಟೆನಲ್ಲ. ಮಾಡತಕ್ಕದ್ದೇನು?

ವೃ ॥ ಕ್ಷಣದೊಳಡಂಗುಗುಂ ಬಳಿಕೆ ಪೊರ್ದುಗು ವಿೂಕ್ಷಣ ಗೋಚರತ್ವಮುಂ। ಕ್ಷಣದೊಳೆ ದೂರಮುಪ್ಪುದೆಡೆಯೊಳ್ ಸುಳಿಗುಂ ಪಲವುಂಬರಂ ಸಮಂ ॥ ತೆಣಿಸಿದೊಡತ್ತಮಿತ್ತ ಕೆಲದೊಳ್ ಬಲದೊಳ್ ಸಲೆಸುತ್ತಮಾಟಕುಂ। ಕ್ಷಣರುಚಿಯಂತೆ ಚೆಂಚಲಮೆನಿಪ್ಪುದನಾಂ ಗುರಿಗೈವೆನೆಂತಿದಂ ॥

(ಚೆನ್ನಾಗಿ ನೋಡಿ; ದೂರದಲ್ಲಿ ಕಂಡು ಸಂತೋಷದಿಂದ) ಇದೊ ಈ ಕಗ್ಗಾಡನ್ನು ಬಿಟ್ಟು ನಿರ್ಮಲವಾದ ಭೂಮಿಯನ್ನು ಹತ್ತಿತು. ಸೂತನೆ! ಸೂತನೆ! ಕುದುರೆಗಳನ್ನು ಬೇಗನೆ ಪ್ರೇರಿಸು. ಈಗಿನ್ನೆಲ್ಲಿ ಹೋದೀತು, ನೋಡುವೆನು.

ಸೂತ—(ಹಾಗೆಯೆ ಮಾಡಿ ರಥವೇಗವನ್ನು ಅಭಿನಯಿಸಿ) ಆಯುಷ್ಮಂತನೆ! ನೋಡು ನೋಡು.

ವೃ ॥ ಜವದಿಂದಂ ಗೆಲ್ದು ಧೂಳಿಂದೊಡವೆರಸಿದ ಬೆಂಗಾಳಿಯುಂ ಲಕ್ಷ್ಯದತ್ತಂ। ಗವಿಪೆನ್ನೀ ಚಿತ್ತಮುಂ ತಳ್ತೊಡನೆ ಪರಿವ ನಿಷ್ಕಂಪಕೇತುಚ್ಛದಾಗ್ರ ॥ ಪ್ರವಿಮುಷ್ಟಾಂಭೋದಮೀ ನಿನ್ನಯ ಕನಕವರೂಥಂ ಸಮಂತೀಗಳಾಯಾ। ಪವಣಂ ಬೆತ್ತಿರ್ಪ್ಪ ದೇಶಂಗಳೊಳರಸ ಭವದ್ಬಾಣದಂತೋವೊ ಬೀಳ್ಗುಂ ॥

ರಾಜ—(ಆಶ್ಚರ್ಯದಿಂದ ನೋಡಿ) ಹಾಗೆಯೆ ಸರಿ!

ವೃ ॥ ಪವನಂ ನಿರ್ಜಿತನಾಗೆ ವೇಗದೆ ಖುರಾಗ್ರಂ ಮುಟ್ಟಿ ಬಾನಂ ಮಹಾ। ರ್ಣವಮಂ ದಾಂಟುವವೊಲ್ ಸಮಂತು ಪರಿವುತ್ತಿರ್ಪ್ಪೀ ರಥಾಶ್ವಂಗಳಿಂ ॥ ಜವದಿಂ ಪಾಯ್ವಿನಗಿಂತಿದಚ್ಚರಿ ದಿನಾಧೀಶಂಗೆ ಬೆಂಗೊಟ್ಟ ಮು। ಬರ್ಪವೊಲೈದುತ್ತಿದೆ ದೂರಮಂ ಕಿಟ ವಿನಿರ್ಭಿನ್ನಾಂಜನಶ್ಯಾಮಲಂ ॥

(ಮುಂದೆ ನೋಡಿ ಖೇದದಿಂದ) ಇನ್ನೇನು ಮಾಡಲಿ? ಮಹಾರಣ್ಯದಲ್ಲಿ ಮರಗೊಂಡ ಹಂದಿಯು ಹೆಜ್ಜೆಯೂ ಕೂಡ ಕಾಣಿಸದಿರುವುದು. ಒಳ್ಳೇದು ! ಮುಂದೆ ಕಾಣುವ ರಮಣೀಯವಾದ ಈ ಅರಣ್ಯಪ್ರದೇಶ ದಲ್ಲಿ ಹುಡುಕಿನೋಡುವೆನು. (ಹುಡುಕಿ ಸಂತೋಷದಿಂದ) ಭಾಪು ! ಭಾಪು ! ಇದು ತಪೋವನದ ಸಮೀಪಭೂಮಿಯಾಗಿರ ಬಹುದು. ಹಾಗೆಯೆ ಸರಿ.

ವೃ ॥ ಉಡಿದತ್ತೀ ಯೆಡೆಯಲ್ಲಿ ಬೇರ್ವೆರಸು ಕೀಳ್ದತ್ತಿಲ್ಲಿದರ್ಭೋರ್ಣೀರ್ವಿ
ಪ್ರೂ । ಗುಡಿಯಿಂ ಬಾಗಿದೆ ಮೆಲ್ಲನೀಳ್ದ ಕೊನೆಯಿಂ ತಳ್ತಿರ್ಪ್ಪವಲ್ಲೀ
ವ್ರಜಂ ॥ ಇಡಿದಿಕ್ಕುರ್ಗಂ ವ್ರಣದಿಂದೆ ಮುಂ ಸುಲಿಯೆ ನಾರಂ
ತೋರುವೀಶಾಖಿ ಯಿಾ । ಗಡೆ ಕೊಯ್ದಿರ್ದ್ಧ್ಮವು ಸೂಚಿಕುಂ ಪಿರಿದು
ಪಾಲಂ ಸೂಸುವೀಪಾದಪಂ ॥

(ಎಲ್ಲಾ ಕಡೆಯನ್ನೂ ನೋಡಿ ಕಿವಿಗೊಟ್ಟಂತೆ ಅಭಿನಯಿಸಿ ಕೌತುಕದಿಂದ) ಆರ್ಯನೆ ! ನೋಡು.

ವೃ ॥ ಗಿಳಿಗಳ್ ನೀಪ ಮಹೀಜಕೋಟರದೆ ಮಾಳ್ಕುಂ ಸ್ವಾಗತಾಲಾ
ಪಮಂ । ಬಳಿಯಂ ಘ್ರಾಣಿಸೆ ಹವ್ಯಗಂಧಿಪವನಂ ನೀಳ್ದೊಂಡಪಂ
ಚಿತ್ತಮಂ॥ ಪುಳಿನೋಪಾಂತದೆ ತಳ್ತ ದರ್ಭೆಗಳಿನೊಪ್ಪಂಬೆತ್ತ
ಶೈಲಾಪಗಾ । ಜಳಮಂ ಸೇವಿಪವೆಮ್ಮ ನೋಡಿ ಚಕಿತಾಕ್ಷಂ
ಕೃಷ್ಣಸಾರವ್ರಜಂ ॥

ಆದುದರಿಂದ ಇನ್ನು ಆಶ್ರಮದೆಡೆಯಲ್ಲಿ ಸಂಚರಿಪ ಆ ಹಂದಿಯನ್ನು ಅರಸುವುದು ಹಾಗಿರಲಿ ಸೂತನೆ ! ಈಗ ಕುದುರೆಗಳನ್ನು ನೀರಿಗೆ ಬಿಟ್ಟು ದಣುವನ್ನು ಕಳೆಯುವನಾಗು. ನಾನು ಧನುರ್ಮಾತ್ರ ಸಹಾಯನಾಗಿ ಆಶ್ರಮವನ್ನು ಪ್ರವೇಶಿಸಿ ಮುನಿಗಳನ್ನು ವಂದಿಸಿ ಬರು

ವೆನು. ಪೂಜಿಸತಕ್ಕವರನ್ನು ಪೂಜಿಸದೆ ಹೋಗತಕ್ಕದ್ದು ಶ್ರೇಯಸ್ಕರ ವಲ್ಲವು. (ಎಂದು ರಥವನ್ನು ಇಳಿಯುವುದನ್ನು ಅಭಿನಯಿಸುವನು.)

ಸೂತ—ಅಪ್ಪಣೆ. (ಎಂದು ಹೋಗುವನು.)

ರಾಜ--(ಯೋಚನೆಯನ್ನು ಅಭಿನಯಿಸಿ) ಆಹ! ತಪೋವನವಾಸಿಗಳ ಸುಖವು ಯಾವದೊಂದು ಪ್ರತಿಬಂಧವಿಲ್ಲದುದರಿಂದ ಅತ್ಯಂತ ಮನೋಹರವಾಗಿರುವುದು. ಹ್ಯಾಗೆಂದರೆ.

ವೃ॥ ಬಗೆಯೊಳ್ ಕಾಂತಾದಿಭೋಗಕ್ಕೆಳಸದೆ ಗತಸಂಕಲ್ಪರಾದಂತರಿಂ
ಮೇ। ಣಗಲಲ್ ಸ್ನೇಹಂಗಳಂ ತಾಳದೆ ಮಮತೆಯ ಮಾಣ್ದಂ
ತರಿಂದಂತಹಂ ಭಾ॥ ವಗಳಂ ನೀಡುಂ ಪರಿತ್ಯಾಗಿಸಿ ತಮತು
ಪೆರತ್ತೆಂಬುದಂ ನೀಗಿ ತಾಂ ಶಾಂ। ತಿಗೆ ಸಂದಿರ್ಪ್ಪರ್ ಗಡಾ
ಸಂಯಮಧನರಮಲಜ್ಞಾನನಿಷ್ಠಾಗರಿಷ್ಠರ್॥

(ವಿನಯದಿಂದೈದಿ ಭಯವನ್ನಭಿನಯಿಸಿ ಶಂಕೆಯಿಂದ ಕೂಡಿ) ವೋವೋ! ಬಳಕೆಯಿಲ್ಲದವರಿಗೆ ನೋಡಲರಿದಾದ ಈ ತಪೋವನವು ಎಂದೂ ನೋಡದ್ದರಿಂದ ಅಪರಾಧಮಾಡಿದವನ ಹಾಗೆ ನನಗೆ ಭೀತಿಯನ್ನುಂಟು ಮಾಡುತ್ತಿದೆ. ಅಥವಾ ಸಕಲತೇಜಸ್ಸನ್ನೂ ಪರಿಭವಿಸುವ ಬ್ರಹ್ಮತೇಜಸ್ಸು ಎಲ್ಲಾ ತೇಜಸ್ಸುಗಳಿಗೂ ಮೇಲಾದುದಲ್ಲವೆ? ಏಕೆಂದರೆ.

ಕಂ॥ ಅಡಿಗಡಿಗೆ ಭಯಮನಾಗಿಪು
ದಡವಿಯಿದುಪಶಾಂತಮಾಗಿಯುಂ ತೇಜಂಗಳ್।
ಪಡೆಗುಂ ಮೆಲ್ಪಂ ಸಲಿಲವ।
ನೆಡೆಗೊಂಡ ಕೃಪೀಟಜಾತನಂತಿರೆ ಜಗದೊಳ್॥

(ಎಂದು ಭಯದಿಂದ ನಡಿಯುವನು.)

(ತೆರೆಯಲ್ಲಿ) ಆರ್ಯರೆ! ರಕ್ಷಿಸಿ, ರಕ್ಷಿಸಿ. ರಕ್ಷಕರಿಲ್ಲದೆ ಅನಾಥೆಯರಾದ ಈ ಮಂದಭಾಗ್ಯೆಯರನ್ನು ತಪ್ಪಿಲ್ಲದೆ ಅಗ್ನಿಯಲ್ಲಿ ಕೆಡಹುವನು. ಆದುದರಿಂದ ಆರ್ಯರೆ! ರಕ್ಷಿಸಿ, ರಕ್ಷಿಸಿ.

ರಾಜ—(ಕಿವಿಗೊಟ್ಟು) ಓಹೊ! ಇದೇನು? ಸ್ವಲ್ಪದೂರದಲ್ಲಿ ಭಯಪೀಡಿತೆಯರಾದ ಸ್ತ್ರೀಯರು ಗೋಳಿಡುವಂತೆ ಕೇಳಿಬರುವುದು. (ಆಶ್ಚರ್ಯದಿಂದ) ಹೋಹೊ! ಇದು ತಪೋವನವು: ಇಲ್ಲಿ ಇಂತಹ ದುರುಳರು ಇರುವುದೆಂದರೇನು? ಆಗಲಿ, ಸಮೀಪಕ್ಕೆ ಹೋಗುವೆನು.

(ಸಮೀಪಕ್ಕೆ ಹೋಗುವನು. ತೆರೆಯಲ್ಲಿ ಮೊದಲಂತೆ ಹೇಳುವರು.)

ರಾಜ—(ಕೇಳಿ ಕೋಪಗೊಂಡು) ಎಲೌ ಭಯಾರ್ತೆಯರೆ! ಹೆದರಬೇಡಿ; ಹೆದರಬೇಡಿ. (ಕೋಪದಿಂದ) ಅಃ!

ವೃ ॥ ಆವನಿವಂ ಕಠೋರನತಿನಿರ್ದಯಮಾನಸನಾಚರಿಪ್ಪನೋ ।
ವೋ ವೊ ತಪೋವನಕ್ಕನುಚಿತಮಲ್ಲದ ಘೋರನೃಶಂಸಕರ್ಮಮಂ ಈ
ವಿಶಿಖಾಗ್ರದಿಂದವನ ಕಂಧರಮಂ ಪರಿದೆಲ್ಲಮಂಗಮಂ । ಪಾವಕ
ನೊಳ್ ಜ್ವಲಚ್ಛಿಖನೊಳಾನಿರದಾಗಿಪೆನಿಂದು ಹೋಮಮಂ ॥

(ಎಂದು ಮುಂದೆ ಹೋಗಿ ತೆರೆಯ ಕಡೆ ನೋಡಿ ಆಶ್ಚರ್ಯದಿಂದ)

ಆಹ! ಇವನು ಯಾರು? ಅಗ್ನಿಮಧ್ಯದಲ್ಲಿ ಭಯಾರ್ತೆಯರಾಗಿ ಹಂಬಲಿಸುತ್ತ ಕುಳಿತಿರುವ ದಿವ್ಯರೂಪಿಣಿಯರಾದ ಮೂವರು ಸ್ತ್ರೀಯರಿಂದ ಕೂಡಿ ಹೋಮಸಾಧನಗಳೊಡನೆ ಅಗ್ನಿಶಾಲೆಯಲ್ಲಿ ಇರುವನು. ನಿಜವಾಗಿ ಇವನು ತಾಪಸವೇಷವನ್ನು ಧರಿಸಿದ ಪಾಷಂಡನಾಗಿರಬಹುದು.

(ಅನಂತರ ಹೋಮಮಾಡುವುದನ್ನು ಅಭಿನಯಿಸುತ ವಿಶ್ವಾಮಿತ್ರನೂ ಸ್ತ್ರೀರೂಪಿನ ಮೂರು ವಿದ್ಯೆಗಳೂ ಪ್ರವೇಶಿಸುವರು.)

(ವಿದ್ಯೆಗಳು ಸಂಭ್ರಾಂತೆಯರಂತೆ ಅಭಿನಯಿಸುತ್ತ ಮೊದಲಂತೆ ಕೂಗಿಡುವರು.)

ವಿಶ್ವಾಮಿತ್ರ—(ಆಶ್ಚರ್ಯದಿಂದ) ಒಹೋ! ಇದೇನು? ಆಶ್ಚರ್ಯವಾಗಿದೆ!

ಪೃಥ್ವಿ—ವೃ॥ ಉಪಾಂಶು ಮನುಪೂತಮಂ ಹವಿಯನಾಂತುಮಾದಂ
ತನೂ। ನಪಾತಮಿದು ದಕ್ಷಿಣಾರ್ಚಿಯನೊಡರ್ಚದಿಕ್ಕುರ್ಗಂ
ಮಹಾ। ತಪಸ್ಸ್ಫುರಿತ ಸತ್ಕ್ರಿಯಾ ಬಲದಿ ನೈದಿಯುಂ ಸಾರ್ಕೆಗೆಂ
ನ ಪಾಣಿವಶಮಾಗದಿರ್ದಪುದಿದೇಕೆ ವಿದ್ಯಾತ್ರಯಂ॥

(ಎಂದು ಧ್ಯಾನಿಸುವಂತಭಿನಯಿಸುವನು.)

(ವಿದ್ಯೆಗಳು ಮೊದಲಂತೆ ಮೊರೆಯಿಡುವರು.)

ರಾಜ—(ಬೇಗನೆ ಬಂದು) ಭಯಾರ್ತೆಯರೆ! ಹೆದರಬೇಡಿ, ಹೆದರಬೇಡಿ. ಎಲವೋ ದುರಾತ್ಮನಾದ ಪಾಷಂಡಾಧಮನೆ! ನಿಲ್ಲು ನಿಲ್ಲು. ಇದೇನು? ಪ್ರಚ್ಛನ್ನರಾಕ್ಷಸನಾದ ನಿನ್ನ ಮಾಯಾಪ್ರಪಂಚ? ಹಾಗೆಯೆ ಸರಿ.

ವೃ॥ ಉಡೆಯೊಳ್ ವಲ್ಕಲಮಕ್ಷಸೂತ್ರವಲಯಂ ಹಸ್ತಾಗ್ರದೊಳ್
ನೆತ್ತಿಯೊಳ್। ಜಡೆಗಳ್ ನೋಳ್ಪಡೆ ಶಾಂತಿದಾಂತಿವಡೆದಿರ್ಪ್ಪೀ
ವೇಷಮೇಂ ನಿಕ್ಕುವಂ॥ ನುಡಿ ದುರ್ಮೇಧಸಧೂರ್ತಪೇಳ್ಗೊಲಿಗೆ
ನೀಡುಂ ಪೇಸದೀ ನಿನ್ನ ಕೀಳ್। ನಡೆಯೇಂ ತಾವಕಕರ್ಮಕಿಂದು
ಫಲಮಂ ಸಾರ್ದಪ್ಪೆ ತಾಳ್ ತಕ್ಕುದಂ॥

ವಿಶ್ವಾಮಿತ್ರ—(ಸಂವರಣವನ್ನು ಅಭಿನಯಿಸಿ ಕೋಪದಿಂದ)

ವೃ॥ ಶ್ರವಣಕಟೂಕ್ತಿಘಟ್ಟನದೆ ಪುಟ್ಟಿದ ಮಾಮಕ ರೋಷವಹ್ನಿಯಂ।
ಗವಿಸಿದ ಕಾಷ್ಠದಿಂದುರದೆ ಪೊತ್ತಿ ಸಮಾಧಿವಿಭೇದನಾಯುವಿಂ॥
ದೆ ವಿಲಯವಾತಧೂತವಿಲಯಾಗ್ನಿಯ ಲೀಲೆಯನಾಂತು ಮೂ

ರುವುಂ । ಭುವನವುನೊರ್ಮ್ಮೆ ತುತ್ತುಗೊಳು ವಾಸೆಯು ಪೊರಿ ಪುದಕ್ಕೆ ನಿಕ್ಕುವಂ ॥

ವಿದ್ಯೆಗಳು—(ಸಂತೋಷದಿಂದ) ನವುಗಿದು ಪ್ರಿಯವು! ನವುಗಿದು ಪ್ರಿಯವು! ಎಲೈ ಮಹಾರಾಜ ಹರಿಶ್ಚಂದ್ರನೆ! ವಿಜಯಿಸು. ವಿಜಯಿಸು.

(ಎಂದು ಹೋಗುವರು.)

ವಿಶ್ವಾಮಿತ್ರ—(ಕೋಪದಿಂದ) ಎಲಾ ದುರಾತ್ಮನಾದ ಹರಿಶ್ಚಂದ್ರನೆ! ನೀನು ನಮ್ಮ ಶ್ರೇಯಸ್ಸಿಗೆ ವಿಘ್ನಕಾರಿಯಾದೆಯಾ? ಒಳ್ಳೇದು! ನಿಲ್ಲೆಲಾ ಕ್ಷತ್ರಿಯಾಧವುನೆ! ನಿಲ್ಲು.

ಕಂ ॥ ಹರಿಯಾಗು ಚಂದ್ರನಾಗೆಲೆ ।
ದುರುಳನೆ ಮೇಣ್ ಹರನೆ ಆಗು ವಿದ್ಯಾಕ್ಷತಿಯಿಂ ॥
ದುರಿವೆನ್ನಯು ಕೋಪಾನಲ ।
ನುರುಬೆಗೆ ನೀನಿಂದು ಕಾಷ್ಠವೆಂದೆನಿಸೆಯು ಪೇಳ್ ॥

ಮತ್ತು ಎಲಾ ಮೂಢನೆ!

ವೃ ॥ ಸ್ತ್ರೀಲೋಲಂ ಪಿರಿದುಂ ಕೃಪಾಢ್ಯನತಿಶಾಂತಂ ದಾಂತನಾಗಿ ರ್ಪ್ಪೊಡಂ । ಲೀಲಾರೂಢಸಮಾಧಿ ಭಂಗದೆ ಕರಂ ಭೀಷ್ಮಾನನಂ ಶೂಲಿ ಪೂ ॥ ಗೋಲಿಂದೆಚ್ಚಲರಂಬನಂ ಮುಳಿದದೇಗೆಯ್ದಂ ನಿಟಾಲಾಕ್ಷಿಯಿಂ । ದೀ ಲೋಕೋದ್ಧತಕೌಶಿಕಂ ನಿನಗದಂ ತಾಂ ಮಾಡದೇಂ ಮಾಣ್ಬನೇ ॥

ರಾಜ—(ಸಂಭ್ರಾಂತನಾಗಿ ಆತ್ಮಗತಂ) ಅಯ್ಯೋ! ಇವರು ಪೂಜ್ಯರಾದ ವಿಶ್ವಾಮಿತ್ರರೆ! ಆ ಸ್ತ್ರೀಯರು ಪೂಜ್ಯಗಳಾದ ವಿದ್ಯೆಗಳೆ! ಅವರ ಸಿದ್ಧಿಗಾಗಿ ಉಜ್ಜುಗಿಸಿದ ಇವರಿಗೆ ಪಾಪಿಯಾದ ನಾನು ವಿಘ್ನಕಾರಿ

ಯಾದೆನೆ! ಹೋ! ತೆಗೆ ತೆಗೆ! ಕುರುಡನಂತೆ ವಿಚಾರವಿಲ್ಲದೆ ನಾನು ಉರಿವ ಕಿಚ್ಚನ್ನು ಕಾಲ್ಗಳಿಂದ ಮೆಟ್ಟಿದವನಂತಾದೆನು.

ವಿಶ್ವಾಮಿತ್ರ—(ಕೋಪದಿಂದ)

ಕಂ ॥ ಕರವಿದು ಶಾಪಂಗುಡಲಾ ।
ತುರಿಪುದು ಸಾಧನವಿನಾಶಭವಕೋಪದೆ ಮುಂ ॥
ಚಿರಕಾಲವುಳಿದ ಕುಲಮುಂ ।
ಸ್ಮರಿಸಿ ತುಡುಂಕುವುದು ಬಿಲ್ಲನೀ ಯೆಡದಕರಂ ॥

(ಎಂದು ಏಳುವನು.)

ರಾಜ—(ಭಯದಿಂದ) ಪೂಜ್ಯರೆ! ಅಭಿವಂದಿಸುವೆನು.

(ವಿಶ್ವಾಮಿತ್ರನು ಕೋಪವನ್ನು ಅಭಿನಯಿಸುವನು.)

ರಾಜ—(ಪುನಶ್ಚ ಅಡಿಗೆರಗಿ) ಪೂಜ್ಯರೆ! ಸೈರಿಸಿ, ಸೈರಿಸಿ. ಸ್ತ್ರೀಜನರ ಆರ್ತಪ್ರಲಾಪವೆಂದು ಮೋಸಹೋದ ನನ್ನ ಅಜ್ಞಾನಕೃತವನ್ನು ಕ್ಷಮಿಸಬೇಕು.

ವಿಶ್ವಾಮಿತ್ರ—ಎಲವೋ! ದುರಾತ್ಮನೆ! ಏನು ಹೇಳಿದೆ? "ಅಜ್ಞಾನಕೃತವನ್ನು ಕ್ಷಮಿಸಬೇಕು." ಎಲಾ ಕ್ಷುದ್ರಕ್ಷತ್ರಿಯನೆ! ನಮ್ಮನ್ನು ನೀನು ತಿಳಿದಿಲ್ಲವಲ್ಲವೆ? ಕೇಳು.

ವೃ ॥ ಜಾತಿಯೆ ಬಂದು ತಾಂ ವರಿಸಿದುದ್ಧತವಿಪ್ರನನಂತು ದುರ್ಮ
ದೋ । ಪೇತವಸಿಷ್ಠಸೂನುವನಪಾವಕನಂ ಪ್ರತಿಸರ್ಗಕಲ್ಪನಾ ॥
ಭೀತಜಗತ್ಕೃತಾಂತನುಮನಂತ್ಯಜನಿಂದಮೆ ಸಪ್ತತಂತುವಂ ।
ಭೂತಲದಲ್ಲಿ ಮಾಡಿಸಿದ ಕೌಶಿಕನೆಂದರಿಯೈ ಗಡೆನ್ನನೀಂ ॥

ರಾಜ—ಪೂಜ್ಯರೆ! ಪ್ರಸನ್ನರಾಗಬೇಕು. ಪ್ರಸನ್ನರಾಗಬೇಕು! ತಾವು ಹೀಗೆ ತಿಳಿಯತಕ್ಕದ್ದಲ್ಲ.

ಕಂ ॥ ಅರಸರ ದಾನವು ನೊಲ್ಲದೆ।
ಬರದೊಳವಮಾತೆರದೆ ಬಾಳ್ದುಮಾಡೀಬಕಸಂ ॥
ಗರದೆ ನೆಲನದಿರಿಸಿದ ನಿ।
ಮ್ಮುರುತಪಮುಮನಧಿಕತೇಜಮುಮನಾರರಿಯರ್ ॥

ಆದರೆ ಸ್ತ್ರೀಜನದ ಆರ್ತಪ್ರಲಾಪವನ್ನು ಆಲಿಸಿ ಆರ್ತರನ್ನು ಪೊರೆಯುತಕ್ಕದ್ದು ಸ್ವಧರ್ಮವೆಂದೆಣಿಸಿ ಇಂತು ನಡೆದ ನನ್ನ ಅಜ್ಞತೆಯನ್ನು ಕ್ಷಮಿಸಬೇಕೆಂದು ಬಿನ್ನವಿಸಿದೆನು.

ವಿಶ್ವಾ—ಎಲಾ ದುರಾತ್ಮನೆ ! ಹೇಳು ಹೆಳು ! ಏನೇನು ನಿನ್ನ ಧರ್ಮವು.

ರಾಜ—ಪೂಜ್ಯರೆ ! ಕೇಳಬೇಕು.

ಕಂ ॥ ಈವುದು ಯುದ್ಧಂ ಗೆಯ್ವುದು ।
ಕಾವುದು ಮೂರುಮಿವು ರಾಜಧರ್ಮಮೆನುತ್ತಂ ॥
ತಾವುಸಿರ್ವರ್ ಸಕಲಾಗಮ।
ಕೋವಿದರೆಂದೆನಿಸಿ ನೆಗಳ್ದ ಮುನ್ನಿನ ಮುನಿಗಳ್ ॥

ವಿಶ್ವಾ—ಏನು ? '' ಈವುದು ಯುದ್ಧಂ ಗೆಯ್ವುದು ಕಾವುದು.''

ರಾಜ—ಹೌದು.

ವಿಶ್ವಾ—ಹಾಗಾದರೆ ಹೇಳು. ಯಾವನಿಗೆ ಈವುದು ? ಯಾವನೊಡನೆ ಯುದ್ಧಂ ಗೆಯ್ವುದು ? ಯಾವನನ್ನು ಕಾವುದು ?

ರಾಜ—ಪೂಜ್ಯರೆ ! ಕೇಳಬೇಕು.

ವಿಶ್ವಾ—ಹೇಳು.

ರಾಜ—ಕಂ ॥ ಗುಣವಂತರೆನಿಸಿದಾ ಬ್ರಾ।
ಹ್ಮಣರ್ಗೀವುದು ಕಾವುದತಿಭಯಾರ್ತರನೊಲವಿಂ ॥
ರಣಮಂ ಗೆಯ್ವುದು ಶಾತ್ರವ।
ಗಣದೊಡನೆಂದೆನ್ನಂ ಮನದೆ ನಿಶ್ಚಯಿಸಿರ್ಪೆಂ ॥

ವಿಶ್ವಾ—ದುರಾತ್ಮನೆ! ಹೀಗೆ ನೀನು ತಿಳಿದಿರುವುದಾದರೆ ಎಲ್ಲಿ ನಮ್ಮ ವಿದ್ಯಾ ತಪಸ್ಸುಗಳಿಗೆ ಸರಿಯಾಗಿ ಏನನ್ನು ಕೊಡುವೆ, ಕೊಡು.

ರಾಜ—(ಸಂತೋಷದಿಂದ) ಪೂಜ್ಯರೆ! ಹಾಗಾದರೆ ಸೂರ್ಯವಂಶವು ತಮ್ಮಿಂದ ಅನುಗ್ರಹಿಸಲ್ಪಟ್ಟಿತು. ಆದುದರಿಂದ ಪೂಜ್ಯರೆ! ಪ್ರಸನ್ನರಾಗಬೇಕು.

ವೃ॥ ಭುವನಮಿದೆಲ್ಲಮುಂ ತಗದು ನಿಮ್ಮಯ ದಕ್ಷಿಣೆಗೆಂದೊಡೀವೆನೇ । ನವನಿಯೊಳಾನಶಕ್ತನೆನಗಿರ್ದ್ದಪುದಂ ಕುಡಲಾರ್ಪೆನಂತರಿಂ ॥ ದ್ರವಿಣದೆ ತುಂಬಿದೀ ಸಕಲಭೂತಲಮುಂ ಕುಶಿಕಾಂಕಗೋತ್ರಸಂ ॥ ಭವ ಭವದಂಘ್ರಿಪದ್ಮಯುಗಳಕ್ಕೊಲಿದೊಪ್ಪಿಪೆನೊಪ್ಪಿಕೊಳ್ವುದೈ ॥

ವಿಶ್ವಾ—(ಆಶ್ಚರ್ಯದಿಂದ) (ಆತ್ಮ) ಆಗಲಿ ಹೀಗೆ ಹೇಳೋಣ. (ಪ್ರ) ಎಲೈ ರಾಜೇಂದ್ರನೆ! ನಿನಗೆ ಸ್ವಸ್ತಿಯಾಗಲಿ. ಆದರೆ ದಕ್ಷಿಣಾಹೀನವಾದ ದಾನವನ್ನು ಮುನಿಗಳು ಅಭಿಮತಿಸಿಲ್ಲ. ಆದುದರಿಂದ ಇದಕ್ಕೆ ತಕ್ಕ ದಕ್ಷಿಣೆಯನ್ನು ನಮಗೆ ಈಗ ಕೊಡಬೇಕು.

ರಾಜ—(ನಾಚಿಕೆಯಿಂದ ಆತ್ಮ) ಇದಕ್ಕೇನು ಪ್ರತಿಯಾಗಿ ಹೇಳಲಿ, (ಬಹಳವಾಗಿ ಚಿಂತಿಸಿ ಸಂತೋಷದಿಂದ) ಆಗಲಿ ಹೀಗೆ ಹೇಳುವೆನು. (ಪ್ರಕಾಶಂ) ಪೂಜ್ಯರೆ!

ಕಂ ॥ ಗಳಿಸುತ್ತ ಮಾವೆನಾಂ ಪೊಂ ।
ಗಳಲಕ್ಷಮ ದಕ್ಷಿಣಾರ್ಥಮಿಂದು ಮೊದಲ್ ತಿಂ ॥
ಗಳವರೆಗಂ ಗಡಬಂ ಮುನಿ ।
ತಿಳಕನೆ ನೀ ಮದನೊರಲ್ಪು ಸೈರಿಸವೇಳ್ಕುಂ ॥

ವಿಶ್ವಾ—ಗಡಬನ್ನು ಒಪ್ಪಿಕೊಂಡೆವು. ಆದರೆ ನೀನು ಈ ಭೂಮಿಯ ನುಳಿದು ಅನ್ಯತ್ರ ತೆಗೆದುಕೊಂಡು ಬಂದು ಕೊಡಬೇಕು.

ರಾಜ -(ಶಂಕೆವೆರಸಿ) (ಆತ್ಮ) ಈ ವಿಷಯದಲ್ಲಿ ಏನುಮಾಡತಕ್ಕದ್ದು? (ಯೋಚಿಸಿ ಸಂತೋಷದಿಂದ) ಆಹ! ಪ್ರತೀಕಾರವನ್ನು ಪಡೆದೆನು. ಏತರಿಂದೆಂದರೆ? ಭಗವಂತನಾದ ಪರಮೇಶ್ವರನಿಂದ ಪರಿಗ್ರಹಿಸಿದ ಕಾಶೀಕ್ಷೇತ್ರವಿದೆಯಷ್ಟೆ?

ಕಂ॥ ನೆಲನಂಟಿದ ಬಾನೂರೆಂ।
ನುಲಿವರಿದಂ ಮುನಿಗಳವನಿಯೊಳ್ ತೆರಪಂ ಕೂ॥
ದಲ ಮೊನೆಗಂ ಸಾಸಿರ್ವ್ಮಡಿ।
ಪಲೆ ಪಣ್ಡಿತನಾಗಮುಜ್ಜರಿದಪರಲ್ತೆ॥

ಆದುದರಿಂದ ಅಲ್ಲಿಂದ ತೆಗನುಕೊಂಡು ಬಂದು ಕೊಡುವೆನು. (ಪ್ರಕಾಶ) ಪೂಜ್ಯರೆ! ಏನಾಜ್ಞಾಪಿಸುವಿರಿ? (ಆಭರಣಗಳನ್ನು ತೆಗೆದು) ಪೂಜ್ಯರೆ!

ಕಂ॥ ಇದುನೆಲಸೈಸಿರಿಯಿದು ಮೇ।
ಣಿದಸ್ತ್ರಯಿಧು ರಾಜಲಾಂಛನಂ ಮಕುಟಂ ನೋ॥
ಳ್ಪದನಿಂದು ನೀಮನುಗ್ರಹಿ
ಪುದು ನಿಮ್ಮಡಿಗರ್ಪಿಸಿದ ನೆಲೆ ಮುನಿವರ್ಯಾ॥

(ಎಂದು ಎರಗಿ ಮೇಲಕ್ಕೆ ಎದ್ದು ಸಂತೋಷದಿಂದ ತನ್ನಲ್ಲಿತಾನೆ)

ಆಹ! ದೈವಯೋಗದಿಂದ ಆಯಾಸಭೂಯಿಷ್ಠವಾದ ರಾಜ್ಯಭಾರವು ಈಗ ಫಲಿಸಿದ ಹಾಗಾಯಿತು. (ಆನಂದದಿಂದ)

ಕಂ॥ ಮನದೊಳದಾವುದನಾಂ ಬಿ।
ರ್ರನೆ ಬೀಳ್ವ ಸಿಡಿಲ್ಗೆ ಸಾಟಿಯೆಂದೆಣಿಸಿದೆನಾ॥
ಮುನಿಯು ಮುನಿಸ್ಸೆನ್ನ ಮುಡಿಯೊಳ್।
ನನೆಮಲ್ಲಿಗೆಮಾಲೆಯೆನಿಪಿ ಬೀಳ್ದುದು ಸೈಪಿಂ॥

ಎಲೌ! ಮಾನ್ಯಳಾದ ಭೂದೇವತೆಯೆ! ನಿನ್ನನ್ನು ಇದೊಂದನ್ನು ಕೇಳಿ ಕೊಳ್ಳುವೆನು.

ವೃ ॥ ಎಲೆ ವಿಶ್ವಂಭರೆ ಲೋಕಧಾತ್ರಿ ರವಿಸಂಶೋದ್ಭೂತಭೂಪಾಲರಿಂ।
ಸಲಹಲ್ಪಟ್ಟಿ ಗಡಾ ತ್ರಿಲೋಕವಿದಿತಶ್ರೀವಿಕ್ರಮಖ್ಯಾತರಿಂ ॥
ನೆಲದೊಳ್ ದುರ್ಲಭಪಾತ್ರವೊಂದು ದೊರೆದತ್ತೆಂಬಾಸೆಯಿಂ ನಿನ್ನ
ನಾ । ನುಳಿದೀ ದುರ್ನಯವೊಂದನಂಬ ಕೃಪೆಯಿಂ ಸರ್ವಂ ಸಹೇ
ಸೈರಿಸೌ ॥

ಇನ್ನು ಅಯೋಧ್ಯೆಯನ್ನು ಕುರಿತು ಹೋಗಿ ಪೂಜ್ಯರಿಗೆ ಒಪ್ಪುಗೊಟ್ಟು ದ್ದನ್ನು ಒಪ್ಪಿಸಿಬಿಟ್ಟು ದಕ್ಷಿಣೆಯನ್ನು ಸಂಪಾದಿಸುವುದಕ್ಕೆ ವಾರಾಣಸಿಗೆ ಹೋಗುವೆನು. (ಪ್ರಕಾಶವಾಗಿ) ಪೂಜ್ಯರೆ! ಇನ್ನು ಅಯೋಧ್ಯೆಗೆ ದಯ ಮಾಡಿ ತಮ್ಮ ಕಾರ್ಯವನ್ನು ನೆರವೇರಿಸಿಕೊಂಡು ದಕ್ಷಿಣೆಯನ್ನು ಸಂಪಾದಿಸುವುದಕ್ಕಾಗಿ ನನಗೆ ಆಜ್ಞೆಯನ್ನು ಕೊಡಬೇಕು.

ವಿಶ್ವಾ—(ಆಶ್ಚರ್ಯದಿಂದ ಆತ್ಮ) ಆಹ ! ದುರಾತ್ಮನ ಸ್ಥೈರ್ಯವನ್ನು ಇವನ ಮಹಾನುಭಾವತೆಯನ್ನು ಎಷ್ಟೆಂದು ಹೇಳಲಿ. ಅತ್ಯಾಶ್ಚರ್ಯಕರವಾದದ್ದು. (ಪ್ರ) ಎಲಾ ದುರಾತ್ಮನೆ! ನಿನ್ನ ದಿಟ್ಟತನವನ್ನು ಸ್ವಲ್ಪ ಕಾಲದಲ್ಲಿ ನೋಡುವೆನು. ಹಾಗೆಯೇ ಸರಿ.

ಕಂ ॥ ಎಂತಾದೆ ರಾಜ್ಯವಿಚ್ಯುತ ।
ನಂತಿರೆ ನೀಂ ಸತ್ಯವಿಚ್ಯುತನೆನಿಪ್ಪನ್ನಂ ॥
ಶಾಂತಿಯನ್ನೈದದು ಮತ್ಕೋ ।
ಪಂ ತಾವಕದುರ್ನಯಪ್ರದೀಪಿತತೇಜಂ ॥

(ಪ್ರಕಾಶ) ಎಲೈ ರಾಜನೆ ! ಹಾಗೆಯೆ ಆಗಲಿ. ದೋಷವೇನು ?

(ಎಂದು ಹೋಗುವರು)

ದ್ವಿತೀಯಾಂಕಂ ಸಮಾಪ್ತಂ.

———

## ಮೂರನೆಯ ಅಂಕ

ಬೀದಿ

ಅನಂತರ ಭೀಭತ್ಸಕರವಾದ ವೇಷವುಳ್ಳ ಪಾಪಪುರುಷನು ಪ್ರವೇಶಿಸುವನು.

(ಡೊಂಕುಡೊಂಕಾಗಿ ನಡೆದು ಗಟ್ಟಿಯಾಗಿ ನಕ್ಕು)

ಕಂ ॥ ಕಡುಸೀಯೆನಿಪೆಂ ಮೊದಲೊಳ್ ।
ನಡುವೆ ವಿಯೋಗಾದಿದುಃಖದಿಂ ಕೈಯ್ಯೆನಿಪೆಂ ॥
ಕಡೆಯಲ್ಲಿ ನರಕದುಃಖವ ।
ನೊಡುಚುವುದರಿನಧಿಕದಾರುಣಂ ನಾನಲ್ತೆ ॥

(ಮುಂದೆ ನೋಡಿ ಭಯದಿಂದ ಕೂಡಿ) ಅಯ್ಯೋ! ಅಮ್ಮ! ಹೆಸರೆತ್ತುವದಕ್ಕೂ ಅಶಕ್ಯವಾದ ಈ ದುಷ್ಟನಗರಿಯು ನನ್ನನ್ನು ಹೊರಡಿಸಿಬಿಟ್ಟಿತು. ಕೊಂದುಬಿಟ್ಟಿತು. ಹೋಗುವುದು ಹಾಗಿರಲಿ, ಈ ನಗರಿಯನ್ನು ನೋಡಲೂ ಆರೆನು, ನಾನೇನು ಮಾಡಲಿ? ಆಗಲಿ, ಮರೆಯಾಗಿರುವೆನು. ಇಲ್ಲಿಗೆ ಬಂದು ತಮ್ಮ ಜನ್ಮಾಂತರ ಸಂಚಿತ ಪಾಪಗಳನ್ನು ಕಳೆದುಕೊಂಡು ಪುನಶ್ಚ ಹಿಂತಿರುಗಿಹೋಗುವ ಜನರನ್ನು ಬೆನ್ನಂಟುವೆನು.

(ತೆರೆಯಲ್ಲಿ)

ವೃ ॥ ಶಿರದೊಳ್ ಶಂಭುಪದಾಬ್ಜಮುದ್ರೆ ಪಿರಿದೀಶಾನುಗ್ರಹಂ ತನ್ನೊಳೀ । ಶ್ವರಿಯೆನ್ನಂ ಮಗನೆಂಬಳೆಂನರಿವುಮುಂತಿರ್ಕ್ಕುಂ ತಪೋನಿಷ್ಠೆಯುಂ ॥ ತಿರೆಯುಂ ತನ್ನೊಡಲಸ್ಥಿಶೇಷಶಿಥಿಲತ್ವಗ್ಬದ್ಧಮಾಗಿರ್ಪುದೇ । ನೊರೆವೆಂ ನೋಳ್ಪೆಡೆ ಪೂರ್ವಕರ್ಮಪರಿಪಾಕಂ ದುರ್ವಿಲಂಘ್ಯಂ ನಿಜಂ ॥

ಪಾಪಪುರುಷ—ಅಃ! ಇದೇನೊ ಇದ್ದೇ ಇದೆ. ಆದರೆ ಈ ದುಷ್ಟನಗರಿಯಲ್ಲಿ ಆ ಹರಿಶ್ಚಂದ್ರರಾಜನು ದುರಾಚಾರನಾಗದೆ ಇದ್ದರೆ—

ಇವನು ಯಾರು ಮಾತಾಡುವವನು? ಓಹೋ! ಇವನು ಭಗವಂತನಾದ ಫಾಲಲೋಚನನ ಸಮೀಪದ ಸೇವಕನಾದ ಭೃಂಗಿರಿಟಿಯು. ಈ ಕಡೆಯೇ ಬರುತ್ತಿರುವನು. ಆದುದರಿಂದ ಬೇಗ ಪಲಾಯನ ಮಾಡುವೆನು.

(ಪಾಪಪುರುಷನು ಹೋಗುವನು. ಅನಂತರ ಭೃಂಗಿರಿಟಿಯು ಪ್ರವೇಶಿಸುವನು.)

ಭೃಂಗಿ—"ಶಿರದೊಳ್ ಶಂಭುಪದಾಬ್ಜಮುದ್ರೆ" (ಎಂಬ ಪದ್ಯವನ್ನು ಪುನಶ್ಚ ಪಠಿಸುವನು. ಯೋಚಿಸಿ) ಹಾಗಲ್ಲದ ಪಕ್ಷಕ್ಕೆ ರಾಜಋಷಿಯಾದ ಹರಿಶ್ಚಂದ್ರನ ದುರ್ದಶೆಯನ್ನು ಈಗತಾನೆ ಪರಮೇಶ್ವರನು ದೇವಿಗೆ ಏತಕ್ಕೆ ತಿಳಿಸಿದನು?

ವೃ॥ ತತಪುಳಕಪ್ರಭಿನ್ನಕಣಮಾಗೆ ವಿಲೇಪಿಸಿದಂಗಭೂತಿಯ। ದ್ಭುತ
ರಸಮುಣ್ಮೆಯಾವನ ಚರಿತ್ರೆಯ ಸೊಲ್ಲಿಸುತಿರ್ಪ್ಪ ಶೈಲಜಾ॥ ಪತಿಯ
ವಿಲೋಚನತ್ರಯಮುಮಶ್ರುಗಳಂ ತುಳುಕಿತ್ತು ಮೇಣ್ ಪ್ರಕಂ।
ಪಿತವಿಲಸತ್ಸುಧಾಂಶುಶಕಲಂ ತೊನೆದತ್ತು ಜಟಾಮುಲಮುಸ್ತಕಂ॥

ಆ ಮಹಾತ್ಮನು ಈಗ ಇಲ್ಲಿಗೆ ಪ್ರವೇಶಿಸುವನೆಂದು ದೇವಿಯೊಡನೆ ದೇವನಾದ ಚಂದ್ರಮೌಳಿಯೂ ಕೂಡ ಉತ್ಸಾಹಪಡುತ್ತಿರುವನು. ಆದುದರಿಂದ ನಾನೂ ಕೂಡ ಭಗವಂತನಾದ ಪರಮೇಶ್ವರನ ಪೂಜೆಯನ್ನು ನೆರವೇರಿಸಿಕೊಂಡು ಸಿದ್ಧನಾಗುವೆನು.

(ಅನಂತರ ಚಿಂತೆಯಿಂದ ಹರಿಶ್ಚಂದ್ರನು ಪ್ರವೇಶಿಸುವನು)

ರಾಜ—ವೃ॥ ನಲನಾಂತುಂ ದ್ವಿಜಸತ್ತಮಂಗಿಳೆಯನಿತ್ತೆನ್ನೀಮನಂ
ಚಿಂತಿಸು। ತ್ತಲೆಯುತ್ತಿರ್ದ್ದಪುದೀಯದಿರ್ಪ್ಪ ಪಿರಿದಾದಾ ದಕ್ಷಿಣಾ
ದ್ರವ್ಯಮಂ॥ ಗಳಿಸಲ್ಕಾಗದು ಪೊನ್ನನಾತನಿಳೆಯೊಳ್ ಶಾರ್ವಂ

ಪದಂಕಾಶಿ ತಾ। ನಿಳೆಯಲ್ಲೆಂದುಸಿರ್ವರ್ ಮುನೀಂದ್ರರದರಿಂದಾ
ಕಾಶಿಗಾಂ ಪೋದಪೆಂ ॥

ಮತ್ತಂ

ವೃ ॥ ವನಿತೆಯುವಳ್ ತನೂಜನಿವನಂಗವಿದಿಂತಿವೆ ಕೊಟ್ಟು ಮಿಕ್ಕು
ವಿ। ನ್ನನುಗತಮಾದುದಾಂತ ಗಡಬಂ ಬಿಡತಕ್ಕುದುಮಲ್ತು
ಸತ್ಯಮಾ। ಮುನಿ ಮುನಿಸುಳ್ಳನೀ ದ್ವಿಜಧನೋಪಹತಾಂಗ
ಮುಮಂ ವಿಸರ್ಜಿಸ। ಲ್ಕನುಮತಿಸೆಂ ವಿಚಾರಜಡನಾದೆನಗೀ
ಕ್ಷಿಸೆ ತೋರದಾವುದಂ ॥

(ಮುಂದೆ ನೋಡಿ ಸಂತೋಷದಿಂದ ಕೂಡಿ)

ಆಹ! ಇದೊ ವಾರಾಣಸಿಯು—ಎಲೈ ಪೂಜ್ಯಳಾದ ವಾರಾಣಸಿಯೆ!
ನಿನಗೆ ವಂದಿಸುವೆನು—(ಚಿಂತಿಸಿ ಆಶ್ಚರ್ಯದಿಂದ ಕೂಡಿ)

ವೃ ॥ ತಪದಿಂ ಮೇಣ್ ಬ್ರಹ್ಮಚರ್ಯಾವ್ರತದಿನಖಿಲಸನ್ಯಾಸದಿಂದಾ
ವುದಂ ಕಾಂ। ಕ್ಷಿಪರಾದಂ ಬ್ರಹ್ಮನಿಷ್ಠರ್ ಕ್ಷಪಿತತಮುಸರಾ ತಾರಕ
ಜ್ಞಾನಮಂ ಸಾ ॥ ರ್ದುಪದೇಶಿಪ್ಪಂ ಶರೀರಾಂತದೊಳೆ ಗಿರಿಶ
ನೊಲ್ದಂತರಿಂದಿಲ್ಲಿ ಮರ್ತ್ಯಂ। ವಪುವಂ ತಾಂ ತ್ಯಾಗಮಂ
ಗೆಯ್ದೊಡೆ ಮಗುಳೆ ಭವಂ ಬಾರದಾತಂಗೆ ಸತ್ಯಂ ॥

ಮತ್ತಂ

ವೃ ॥ ಕಳೆಗುಂ ತಾನಿಲ್ಲಿ ಜೀವಿವ್ರಜಕೆ ನಿಬಿಡಸಂಸಾರರೂಪಂ ಮಹಾ
ಶ್ಮಂ। ಖಲೆ ಬೀಳ್ದತ್ತಿಲ್ಲಿ ಕೈಯತ್ತಣಿನಭವನ ವೈರಿಂಚ ಶೀರ್ಷಂ
ಸಮಂತಾ ॥ ಗಳೆ ತತ್ಪಾಪಪ್ರಮುಕ್ತಂ ತಳೆಯುತಮು ವಿಮುಕ್ತಾ
ಖ್ಯೆಯಂ ಶರ್ವನೆಲ್ಲಾ। ಗಳುಮಿಾ ಸುಕ್ಷೇತ್ರದೊಳ್ ವಾಸಿಸಿದಪ
ನದರಿಂ ಶೈಲಜಾತಾಸಮೇತಂ ॥

ಆದುದರಿಂದ ಯಾವ ಉಪಾಯದಿಂದೀ ಮುನಿವರನ ಋಣವನ್ನು ಕಳೆದು ಕೊಳ್ಳಲಿ ? (ಚಿಂತಿಸಿ)

ವೃ ॥ ಸಲೆಗೆಲ್ದರ್ಥಪನಂ ಧನಂಬಡೆವೆನೇಂ ಶ್ರೀತ್ಯಾಗಿಗೇಂ ಗೆಲ್ಲದಿಂ ।
ಸುಲಭಂ ಬೇಡುವುದಾ ದ್ವಿಜನ್ಮಕುಲಕೆಂದುಂ ಯಾಚಿಸರ್ ಕ್ಷತ್ರಿಯರ್ ॥ ನೆಲದೊಳ್ ಬೇಹರವರ್ಥಮೂಲ ಮಧನಂ ನಾನೆಲ್ಲಮುಂ ಕಾಲದಿಂ । ದಲೆ ಸಾಧ್ಯಂ ಗಡ ಕಾಲಮಾದೊಡೆನ ಗಿಲ್ಲಂ ನೋಡೆ ದೈವೇಚ್ಛೆಯಿಂ ॥

ಆದುದರಿಂದ ಮಂದಭಾಗ್ಯನಾದ ನಾನೇನು ಮಾಡಲಿ ? (ಚೆನ್ನಾಗಿ ನಿರ್ಧರಿಸಿ ಸಂತೋಷದಿಂದ) ಲೇಸು ! ಲೇಸು ! ಈಗ ನಾನು—

ಕಂ ॥ ಪೊರೆವೆಂ ಸತ್ಯಮನೆನ್ನಯ ।
ಶರೀರಮಂ ಮಾರ್ರಿ ಮುನಿಯ ದಕ್ಷಿಣೆಗೀಗಳ್ ॥
ಧರೆಯೊಳ್ ಸತ್ಯಂ ಪೊರೆಯದ ।
ನರನಿಂದಂ ಪೊರೆದುದಲ್ಲಮಿಹಮುಂ ಪರಮುಂ ॥

(ಧೈರ್ಯದಿಂದ ನೋಡಿ) ಆದುದರಿಂದ ಬಹುದೂರ ನಡೆದು ಬಳಲುತ್ತ ಕಂದನಾದ ರೋಹಿತಾಶ್ವನ ಬರವಂ ಕಾದುಕೊಂಡು ನಿಂದ ದೇವಿಯು ಬರುವದರೊಳಗಾಗಿ ಹೋಗಿ ಬೇಗನೆ ನನ್ನ ಇಷ್ಟವನ್ನು ನೆರವೇರಿಸಿ ಕೊಳ್ಳುವೆನು. (ಮೇಲೆ ನೋಡಿ) ಓಹೋ ! ಸೂರ್ಯನು ನಡುವ ಗಲನ್ನು ಹತ್ತಿದನು, ಹಾಗೆಯೆ ಸರಿ—

ವೃ ॥ ಉರಿವನತಿಪ್ರಚಂಡತಪನಂ ಮುಳಿಸಿಂ ದುರಿವಂತೆ ಕೌಶಿಕಂ ।
ಧರೆ ಪರಿತಾಪಮಂ ವಹಿಸುಗುಂ ವಹಿಪಂತವೊಲೆನ್ನ ಮಾನಸಂ ॥
ನೆರಳಿದು ತಾಳ್ದು ದೀನದಶೆಯಂ ಬಳಿಸಾರ್ದಪುದಿಂದು ದೇವಿಯಂ ।
ತಿರೆ ಧರಣೀರುಹಂಗಳಡಿಯಂ ಹತನಿರ್ಘೃಣದೈವಯೋಗದಿಂ ॥

ಇದೊ ! ಗಡಬಕ್ಕೆ ಕೊನೆಯಾದದು ಅಥವಾ ಹರಿಶ್ಚಂದ್ರನಿಗೆ. ಮಂದ ಭಾಗ್ಯನಾದ ನಾನು, ಹಾ ! ಕೆಟ್ಟೆನು. (ಎಂದು ಬಿದ್ದು ಬೇಗನೆ ಪುನಶ್ಚ ಎದ್ದು ದುಃಖದಿಂದ ಕೂಡಿ) ಎಲಾ ! ದುರಾತ್ಮನಾದ ಹರಿಶ್ಚಂದ್ರಹತಕನೆ !

ಕಂ ॥ ಅಂದೊಪ್ಪಿದ ದಕ್ಷಿಣೆಯಂ ।
ತಂದೀಯದೆ ತದ್ವಿಜೋತ್ತಮಂಗೀಗಳ್ ನೀಂ ॥
ಬೆಂದುಂ ಬ್ರಹ್ಮಸ್ವದೆ ಸಲೆ ।
ಸಂದುಮಸತ್ಯಕ್ಕದೆತ್ತ ಪೋದಪೆ ಧೂರ್ತಾ ॥

ಆದುದರಿಂದ ಅಂಗಡಿಬೀದಿಗೆ ಹೋಗಿ ಪ್ರಕೃತಕಾರ್ಯವನ್ನು ಸಾಧಿಸುವೆನು. ಆ ವಿಶ್ವಾಮಿತ್ರರು ಬಂದಹಾಗೆ ತೋರುವುದು.

(ಎಂದು ಬೇಗನೆ ಹೋಗಿ ಏಕಾಂತದಲ್ಲಿ ನಿಂತಿರುವನು)

(ಕೋಪವನ್ನು ಅಭಿನಯಿಸುತ್ತ ಕೌಶಿಕನು ಪ್ರವೇಶಿಸುವನು)

ವಿಶ್ವಾಮಿತ್ರ—ವೃ ॥ ಬಲುಹಿಂ ಕೈಸಾರ್ದ ವಿದ್ಯಾತ್ರಯದ ವಿಲಯದಿಂ ವೃದ್ಧಿಯಂ ಪೊರ್ದಿರ್ದವೇಣ್ ದು । ರ್ಲಲಿತತ್ವಂಬೆತ್ತ ದುರ್ಬುದ್ಧಿಯ ವಿನಯ ಚರಿತ್ರಂಗಳಿಂ ರುದ್ಧವಾದು ॥ ಜ್ವಲ ಕೋಪಂ ನೀಡುಮಂತರ್ಜ್ವಲಿತನಿಬಿಡಶುಷ್ಕೇಂಧನೋದ್ಬುದ್ಧದಾವಾ । ನಲನಾಸಾರಾಂಬುಸಿಕ್ತಾಟವಿಯ ಸುಡುವವೊಲ್ ಚುಚ್ಚುರ್ಗುಂ ಕೆನ್ನವೆನ್ನಂ ॥

(ಹರ್ಷದಿಂದ ಕೂಡಿ) ಎಲಾ ದುರಾತ್ಮನಾದ ಹರಿಶ್ಚಂದ್ರಹತಕನೆ !

ಕಂ ॥ ಎಂತಾದೆ ರಾಜ್ಯವಿಚ್ಯುತ ।
ನಂತಿರೆ ನೀಂ ಸತ್ಯವಿಚ್ಯುತನೆನಿಪನ್ನಂ ॥
ಶಾಂತಿಯನೈದುದು ಮತ್ಕೋ ।
ಪಂ ತಾವಕದುರ್ನಯಪ್ರದೀಪಿತತೇಜಂ ॥

(ನೋಡಿ ಆಶ್ಚರ್ಯದಿಂದ) ಭಾಪು! ದುರಾತ್ಮನಾದ ಹರಿಶ್ಚಂದ್ರನು ಬಂದೇ ಬಂದನು. ಅಥವಾ ಮಹಾತ್ಮನೇ ಸರಿ. ಒಳ್ಳೇದು! ಆಗಲಿ. ಸಮೀಪಕ್ಕೆ ಹೋಗುವೆನು. (ಸಮೀಪಕ್ಕೆ ಬಂದು ಕೋಪದಿಂದ) ಏನು? ನಮ್ಮ ದಕ್ಷಿಣಾದ್ರವ್ಯವನ್ನು ಇನ್ನೂ ತರಲಿಲ್ಲವೆ?

ರಾಜ—(ತ್ವರೆಯಿಂದ) ಓಹೊ! ಪೂಜ್ಯರಾದ ವಿಶ್ವಾಮಿತ್ರರು! ಪೂಜ್ಯರೆ! ನಿಮಗೆ ವಂದಿಸುವೆನು.

ವಿಶ್ವಾಮಿತ್ರ—ತೆಗೆ! ನೀಚನೆ ತೆಗೆ! ಇನ್ನೂ ನಿನ್ನ ಮಿಥ್ಯಾವಚನಮಾಧುರ್ಯದಿಂದ ನನ್ನನ್ನು ವಂಚಿಸಲಿಚ್ಛೈಸುವೆಯ?

ರಾಜ—(ಕಿವಿ ಮುಚ್ಚಿ) ಪೂಜ್ಯರೆ! ಸೈರಿಸಿ, ಸೈರಿಸಿ.

ವಿಶ್ವಾಮಿತ್ರ—(ಕೋಪವನ್ನು ಅಭಿನಯಿಸಿ) ಛಡ ದುರಾತ್ಮನೆ! ಮಿಥ್ಯಾದಾನಸಂಭಾವನೆಯಿಂದ, ವೃಥಾ—ಪೌರುಷಪ್ರಪಂಚವನ್ನು ಮೆರೆಯಿಸುವೆ. ನಿಲ್ಲು, ನಿಲ್ಲು.

ವೃ ॥ ತುಂಬಿಯುಂ ಮಾವ ನಿನ್ನಗಡಬಂ ನಮಗೀಯದೆ ದಕ್ಷಿಣಾರ್ಥಮಂ । ನಂಬಿಸುತಿರ್ಪೆ ಶುಷ್ಕಮಧುರಂಗಳೆನಿಪ್ಪ ವೃಥಾವಚಂಗಳಿಂ ॥ ಕುಂಬಿಡುತಿತ್ತುದಂ ಕುಡದ ಕಾರಣದಿಂದೊಗೆತಂದ ಕೋಪದಿಂ । ದಾಂ ಬಿಡದಿಂದು ನಿನ್ನನಿದೊ ಶಾಪಹುತಾಶನನಿಂದೆ ಚುಚ್ಚುರ್ವೆಂ ॥

(ಎಂದು ಶಾಪಜಲವನ್ನು ಕೈಯಲ್ಲಿ ತೆಗೆದುಕೊಳ್ಳುವನು.)

ರಾಜ—(ಬೇಗನೆ ವಂದಿಸಿ) ಪೂಜ್ಯರೆ! ಪ್ರಸನ್ನರಾಗಿ ಸ್ವಲ್ಪ ಸೈರಿಸಬೇಕು, ಸೈರಿಸಬೇಕು.

ಕಂ ॥ ರವಿಮುಳಗದ ಮುನ್ನಮೆ ನೀ ।
ಡುವೆನಾದಕ್ಷಿಣೆಯನದಕೆ ತಪ್ಪಿದೊಡಾಂ ನೀ ॥
ಮವಿತಥಮೆನ್ನಂ ಶಪಿಸಿಂ ।
ತವಿಸಿಂಮೇಣ್ ನಿಮಗಧೀನಮಿಾಜನಮಲ್ತೇ ॥

ಅದುವರೆಗೆ ಪ್ರಸನ್ನರಾಗಬೇಕು. ಅಂಗಡಿಯ ಬೀದಿಗೆ ಹೋಗೋಣ್ಣ ಬನ್ನಿ.

ವಿಶ್ವಾಮಿತ್ರ—(ಶಾಪಜಲವನ್ನು ಉಪಸಂಹರಿಸಿ) ಒಳ್ಳೇದು! ಆಗಲಿ ಅಲ್ಲಿಗೆ ಹೋಗಿ ಕೊಡು. ಅಷ್ಟರಲ್ಲೆ ನಾವು ದ್ವಿತೀಯಸವನವನ್ನು ನೆರವೇರಿಸಿಕೊಂಡು ಬರುವೆವು. (ಎಂದು ಹೋಗುವನು)

ರಾಜ—(ಚಿಂತೆಗೂಡಿ, ಸ್ವಗತಂ)

ಕಂ ॥ ಋಣಮೆ ಮನುಜರ್ಗೆ ಭಯಕಾ ।
ರಣಮಿಹಪರಗಳೊಳಮುಕಟಪರಿಣತಿಘೋರಂ ॥
ಪಣಮುಳ್ಳನ ಕೆರಳ್ದಾಸ್ಯಮ ।
ನಣಮಾಲೋಕಿಸದ ನರನೆ ಧನ್ಯಂ ಜಗದೊಳ್ ॥

(ಸ್ವಲ್ಪ ನಡೆದು ನೋಡಿ ಹರ್ಷದಿಂದ ಕೂಡಿ) ಇದೆತಾನೆ ಅಂಗಡಿಯ ಬೀದಿ!

(ಶಿರದಲ್ಲಿ ತೃಣವನ್ನು ಧರಿಸಿ, ದೃಢನಾಗಿ) ಎಲೈ ಸಾಧುಗಳಿರಾ!

ಕಂ ॥ ಸಿರಿದುಂ ಕಾಣದೆ ಗತ್ಯಂ ।
ತರಮನದೇನಾನುಮೊಂದು ಕಾರ್ಯಕೆ ನೂರ್ಭಾ ॥
ಸಿರಪೊನ್ಗಳ್ಗಾನೆನ್ನಯ ।
ಶರೀರಮಿದನೀಗಳಿರದೆ ವಿಕ್ರಯಿಸಿದಪೆಂ ॥

P. Rama Krishna Mally.



I·U·C

ಅದರಿಂದಾರ್ಯರೆ ಕೊಂಡುಕೊಳ್ಳಿ. (ಆಕಾಶದಲ್ಲಿ) ಏನು ಹೇಳುವಿರಿ? "ಏತಕ್ಕಿಂತಹ ಕ್ರೂರಕರ್ಮಕ್ಕುಪಕ್ರಮಿಸಿದೆ" ಎಂದು? ಏತಕೆನ್ನನ್ನು ನಿರ್ಬಂಧಪಡಿಸುವಿರಿ? ವಿಚಿತ್ರವಾದುದಲ್ಲವೆ ಈ ಪ್ರಪಂಚವು? (ಬೇರೊಂದೆಡೆಗೆ ಹೋಗಿ "ಪಿರಿದುಂಕಾಣದೆ" ಎಂಬ ಕಂದಪದ್ಯವನ್ನು ಹೇಳುವನು.) (ಆಕಾಶದ ಕಡೆಗೆ ನೋಡಿ) ಏನು ಹೇಳುವಿರಿ? "ಏನು ನಿನ್ನ ಸಾಮರ್ಥ್ಯವು? ನೀನು ಮಾಡತಕ್ಕದ್ದೇನು? ನಿನ್ನ ಜಾಣ್ಮೆಯೇನು?" ಎನ್ನುವಿರೊ? (ನಕ್ಕು)

ಕಂ ॥ ಆಳಿದನಾಣತಿಯಿತ್ತುದ ।
ನಾಲೋಚಿಸದೆಸಪೆನಾವುದುಮನಾದೊಡಮಾಂ ॥
ಆಳಿದನಾಣತಿಗೆರಡಂ ।
ಪೇಳದುದಾಳಾದವಂಗೆ ವರಗುಣವಲ್ತೆ ॥

(ಆಕಾಶದಲ್ಲಿ) ಏನು ಹೇಳುವಿರಿ? ಹೆಚ್ಚು ಬೆಲೆಯನ್ನು ಹೇಳುವೆ! ಅದರಿಂದ ಇನ್ನೊಂದು ಸಾರಿ ಹೇಳೆಂದು ಹೇಳುವಿರೊ? (ಚಿಂತೆಗೂಡಿ) ಎಲೈ ಸಾಧುಗಳಿರಾ! ನಾವು ಕ್ಷತ್ರಿಯರು, ಎರಡುಮಾತು ಹೇಳುವದನ್ನು ಅರಿತವರಲ್ಲ. (ಮತ್ತೊಂದು ಕಡೆಗೆ ಹೋಗಿ, "ಪಿರಿದುಂ ಕಾಣದೆ" ಎಂಬ ಕಂದಪದ್ಯವನ್ನು ಹೇಳುವನು)

(ತೆರೆಯಲ್ಲಿ) ಆರ್ಯಪುತ್ರನೆ! ಆತ್ಮರಕ್ಷಣೈಕಪರನಾಗಬೇಡಾಗಬೇಡ. ಇದುವರೆಗೂ ಮಂದಭಾಗಿನಿಯಾದ ನನ್ನನ್ನು ಹಾಗೆ ಕೂಡಿದ್ದು ಈಗ ತೊರೆದುಹೋಗುವದು ನಿನಗೆ ತಕ್ಕದ್ದಲ್ಲ. ನನ್ನಲ್ಲಿ ಪ್ರಸನ್ನನಾಗು. ಈ ಕಾರ್ಯದಲ್ಲಿ ನನ್ನನ್ನೆ ನಿಯಮಿಸು. ಮೊದಲಿದ್ದ ಅನುರಾಗವು ಈಗ ನನ್ನಲ್ಲಿಲ್ಲವೋ?

ರಾಜ—(ಆಶ್ಚರ್ಯದಿಂದ ಕೂಡಿ) ಇನ್ನೇನು ಗತಿ? ದೇವಿ ಬಂದೇ ಬಂದಳು, ಆದುದರಿಂದ ನನ್ನ ಅಭಿಲಾಷೆಯು ನೆರವೇರದು.

(ಅನಂತರ ಬಾಲಕನೊಡಗೂಡಿ ಶೈಬ್ಯೆಯು ವ್ಯಾಕುಲಪಡುತ್ತ ಬರುವಳು)

ಶೈಬ್ಯೆ—(ದೈನ್ಯದಿಂದ ಆ ಪದ್ಯವನ್ನು ಹೇಳಿ ಮೆಲ್ಲನೆ ನಡೆದು) ಆರ್ಯರೆ! ಕೊಂಡುಕೊಳ್ಳಿ, ಅರ್ಧಲಕ್ಷ ದ್ರವ್ಯಕ್ಕಾಗಿ ಸಮಯದಾಸಿಯಾದ ನನ್ನನ್ನು ಕೊಂಡುಕೊಳ್ಳಿ.

ಬಾಲ—ಆರ್ಯರೆ! ನನ್ನನ್ನುಕೂಡ.

ರಾಜ—(ನಿಟ್ಟುಸುರಿನಿಂದ ತನ್ನಲ್ಲಿ ತಾನು) ಕಷ್ಟ ಕಷ್ಟ!

ವೃ ॥ ಬಿಸುಟೆಂ ಕಲ್ಯತೃಣಾಗ್ರಬಿಂದುಚಲೆಯಂ ಶ್ರೀಯಂ ಕರಂ
ನೋಡಿ ನಂ। ಬಿಸದಾದೆಂ ಪ್ರಜೆಯಂ ಸುಹೃಜ್ಜನರುಮಂ ಬಿಟ್ಟೆಂ
ಸಬಾಷ್ಪಾಸ್ಯರಂ ॥ ಸ್ವಸತೀಪುತ್ರರಮಾರೊಳಂ ಬಿರಿದುದಿಲ್ಲಂ
ಕ್ರೂರಮಾದೆನ್ನ ಮಾ। ನಸವೇನೆಂದಪೆನಂತರಿಂದೆರ್ದೆಯಿದಾದ
ತ್ತಲ್ತೆ ದಲ್ ವಜ್ರದಿಂ ॥

ಶೈಬ್ಯೆ—(ಆಕಾಶದಲ್ಲಿ ಕಿವಿಗೊಟ್ಟು) ಆರ್ಯರೆ! ಏನು ಹೇಳುವಿರಿ? "ಸಮಯವೆಂದು ಹೇಳಿದೆಯಲ್ಲ, ಅದೇನು ಸಮಯವೆಂದು" ಕೇಳುವಿರೋ? ಹಾಗಾದರೆ ಕೇಳಿ. ಪರಪುರುಷಪರ್ಯುಪಾಸನವೊಂದು, ಪರೋಚ್ಛಿಷ್ಟ ಭೋಜನವೊಂದು, ಇವೆರಡನ್ನು ಬಿಟ್ಟು ಸಕಲಕಾರ್ಯವನ್ನು ಮಾಡುವೆನು. ಇದೇ ನನ್ನ ಸಮಯವು. (ಪುನಃ ಕಿವಿಗೊಟ್ಟು) ಏನು ಹೇಳುವಿರಿ? "ಇಂತಹ ಸಮಯವುಳ್ಳ ನಿನ್ನನ್ನು ಕೊಂಡುಕೊಳ್ಳುವರು ಯಾರು" ಎನ್ನುವಿರೊ? ಹಾಗಾದರೆ ಪ್ರಸನ್ನರಾಗಿ ಹೋಗಿಬನ್ನಿ. ಇದರಿಂದ ನಿಮಗೇನು ಪ್ರಯೋಜನವು? ದೀನದಯಾಳುವಾದ ಯಾವನಾದರು ಒಬ್ಬ ದ್ವಿಜೋತ್ತಮನು ನನ್ನನ್ನು ಕೊಂಡುಕೊಳ್ಳುವನು.

(ಅನಂತರ ಉಪಾಧ್ಯಾಯನು ಪ್ರವೇಶಿಸುವನು)

(ಒಬ್ಬ ವಟುವು ಪ್ರವೇಶಿಸುವನು)

ಉಪಾ—ಎಲೈ ವತ್ಸನೆ ! ಅಂಗಡಿಬೀದಿಯಲ್ಲಿ ನಿಜವಾಗಿ ದಾಸೀವಿಕ್ರಯ ವಾಗುವುದೊ ಏನು ?

ವಟು—ಗುರುಗಳಿಗೆ ಯಾವನಾದರು ಸುಳ್ಳನ್ನು ಬಿನ್ನವಿಸುವುದುಂಟೆ ?

ಉಪಾ—ಹಾಗಾದರೆ ಅಲ್ಲಿಗೆ ಹೋಗೋಣ ಬಾ.

ವಟು—ಅಪ್ಪಣೆ ! ದಯಮಾಡಬೇಕು ದಯಮಾಡಬೇಕು.

ಉಪಾ—(ನಡೆತಂದು ಆಶ್ಚರ್ಯದಿಂದ ಕೂಡಿ) ಆಹ ! ವರ್ತಕವೀಥಿಯ ರಾಮಣೀಯಕವನ್ನು ಏನು ಹೇಳಲಿ ? ಆಶ್ಚರ್ಯಕರವಾಗಿದೆ. ಹಾಗೆಯೆ ಸರಿ.

ವೃ॥ ಸುರಗಿರಿಸಾನುವೋಲ್ ಕನಕದಿಂ ರತುನಂಗಳಿನಬ್ಧಿವೇಲೆವೋಲ್।
ಕಿರುಮುಗಿಲಂದಮಂ ತಳೆದ ದಂತಿವಿತಾನದೆ ವಿಂಧ್ಯಭೂಮಿ
ವೋಲ್ ॥ ಎರೆದರಭೀಷ್ಟವಿತ್ತು ಸುರವಲ್ಲರಿಯಂತೆ ದುಕೂಲ
ಪಲ್ಲವೋ । ತ್ಕರಗಳಿನೊಪ್ಪುವೀ ವಿಪಣಿ ಮಾಡದದಾರಮನಕ್ಕೆ
ರಾಗಮಂ ॥

ವಟು—ಉಪಾಧ್ಯಾಯರೆ ! ಎಲ್ಲಿ ವಿಶೇಷವಾಗಿ ಜನದ ಗುಂಪು ಕಾಣು ವುದೊ ಅಲ್ಲಿ ದಾಸೀವಿಕ್ರಯವಾಗಬಹುದೆಂದು ನನಗೆ ತೋರುವುದು. (ಸಮೀಪಕ್ಕೆ ಹೋಗಿ) ಆರ್ಯರೆ ! ಸ್ವಲ್ಪ ಅವಕಾಶವನ್ನು ಕೊಡಿ, ಅವಕಾಶವನ್ನು ಕೊಡಿ.

ಉಪಾ—ಓಹೋ ! ಜನಸಂಮರ್ದ ಬಹುಬಲವಾಗಿದೆ.

ಶೈಬ್ಯೆ—(ಚಿಂತೆವೆರಸಿ) ಆರ್ಯರೆ ! ನನ್ನನ್ನು ಕೊಂಡುಕೊಳ್ಳಿರಿ. ಆರ್ಯರೆ ! ನನ್ನನ್ನು ಕೊಂಡುಕೊಳ್ಳಿರಿ.

ಬಾಲ—ನನ್ನನ್ನು ಕೊಂಡುಕೊಳ್ಳಿರಿ.

ಉಪಾ—(ನೋಡಿ ಆಶ್ಚರ್ಯದಿಂದ) ಏನು ? ಈಕೆಯೊ ಆ ಪೂಜ್ಯಳು ? (ಸಮೀಪಕ್ಕೆ ಬಂದು) ಏನು ನಿನ್ನ ಸಮಯ ?

ಶೈಬ್ಯೆ—(ಪರಪುರುಷಪರ್ಯುಪಾಸನವೊದಲಾದದುಹೊರತಾಗೆಂದು ಹೇಳುವಳು.)

ಉಪಾ—(ಸಂತೋಷದಿಂದ) ನಿನ್ನ ಸಮಯವಿದು ಯೋಗ್ಯವಾದುದಲ್ಲವೆ? ಹೌದು. ಹಾಗೆಯೆ ನಮ್ಮ ಗೃಹದಲ್ಲಿ ನೆಮ್ಮದಿಯಾಗಿರು. ನನ್ನ ಪತ್ನಿಯಾದರೊ ಅಗ್ನಿಪೂಜಾಧೀನತೆಯಿಂದ ಗೃಹಕೃತ್ಯವನ್ನು ಚೆನ್ನಾಗಿ ನೋಡಿಕೊಳ್ಳಲಾರಳು. ಅದನ್ನು ನೀನು ನೋಡಿಕೊ. ಇದೊ ! ತೆಗೆದುಕೊ ಸುವರ್ಣವನ್ನು.

ಶೈಬ್ಯೆ—(ಸಂತೋಷದಿಂದ) ಅನುಗ್ರಹಿಸಲ್ಪಟ್ಟೆನು. ಅಪ್ಪಣೆಯಾದಂತೆ.

ಉಪಾ—(ಬಹಳ ಹೊತ್ತು ನೋಡಿ) (ಸ್ವಗತಂ)

ವೃ ॥ ಮುಸುಕಂ ತಾಳ್ದ ಸಿರಂ ಸಲಜ್ಜವದನಂ ಪಾದಾಗ್ರಮಂ ನಾಡೆ
ಲ । ಕ್ಷಿಸುವಕ್ಷಿದ್ವಿತಯಂ ನಿಕಾಮಮೃದುಯಾನಂ ಮಂದ
ಮಂದಾಕ್ಷರ ॥ ಪ್ರಸರಪ್ರಾಂಚಿತವುಂ ಮಿತಂ ಮಧುರಮುಂ
ತಾನಾದ ನಲ್ವಾತುಮೀ । ಯುಸಿಯುಳ್ ನನ್ನಿ ಮಹಾಕುಲಪ್ರಸವೆ
ಯೆಂಬೊಂದಂಗಮುಂ ಸೂಚಿಕುಂ ॥

(ಚಿಂತೆಯಿಂದ) ಈಕೆಯ ಆಕೃತಿವಿಶೇಷಕ್ಕೆ ಈ ದುರವಸ್ಥೆಯು ಯುಕ್ತವಲ್ಲ. ಇಂತಹ ಅವಸ್ಥೆಯನ್ನು ಹ್ಯಾಗೆ ಹೊಂದಿದಳು ! ಒಳ್ಳೇದು ಕೇಳಿ ನೋಡೋಣ ? (ಪ್ರಕಾಶ) ಎಲೌ ! ನಿನ್ನ ಪತಿಯು ಬದುಕಿರುವನೆ ?

ಶೈಬ್ಯೆ—(ಶಿರಸ್ಸಿನಿಂದ ಸಂಜ್ಞೆ ಮಾಡುವಳು)

ರಾಜ—(ನಿಟ್ಟುಸುರು ಬಿಟ್ಟು, ಆತ್ಮಗತಂ) ಎಲ್ಲಿ ಬದುಕಿದಾನೆ ? ಬದುಕಿದ್ದವನ ಪತ್ನಿಗೆ ಈ ಅವಸ್ಥೆಯೆ ?

ಉಪಾ—ಸಮೀಪದಲ್ಲಿರುವನೆ ?

ಶೈಬ್ಯೆ—(ಕಂಬನಿಯಿಂದ ಕೂಡಿ ರಾಜನನ್ನು ನೋಡುವಳು.)

ಉಪಾ—(ನೋಡಿ ಆಶ್ಚರ್ಯದಿಂದ ಕೂಡಿ) ಆಹ ! ಏನಿದು ? ಈತನು ಈಕೆಯ ಪತಿಯೆ ? (ಚೆನ್ನಾಗಿ ನೋಡಿ ಚಿಂತೆಯಿಂದ ಕೂಡಿ)

ವೃ॥ ಕರಿಕರದೀರ್ಘಪೀವರಭುಜಂ ವಿಪುಲೋರಸಮುನ್ನತಾಂಸಮಾ।
ಪುರುಷನ ದೇಹಮೇ ಕಥಿಯಿಕುಂ ಕ್ಷಿತಿರಕ್ಷಣದಕ್ಷನೀತನೆಂ॥
ಬಿರವನಿದೇಂ ಶಿಖಾಮಣಿಯನಾಂಪ ಸಿರಂ ತೃಣಮಾಂತುದಾ
ದನು। ಚ್ಚರಿಯಲೆ ದುರ್ವಿಧಂ ವಿಧಿಯದಾವನುಮಂ ಸಲೆ
ಪೊಯ್ಯದಿರ್ದಪಂ ॥

(ಸಮೀಪಕ್ಕೆ ಬಂದು ಕಂಬನಿಗೂಡಿ) ಎಲೈ ಮಹಾತ್ಮನೆ ! ನಿನ್ನ ದುಃಖವನ್ನು ನನಗೂ ಸ್ವಲ್ಪ ಹಂಚಿಕೊಡು. ಏತಕ್ಕಾಗಿ ಇಂತಹ ಕಾರ್ಯವನ್ನು ಆರಂಭಿಸಿದೆ ?

ರಾಜ—(ಯೋಚಿಸಿ ಚಿಂತೆಯಿಂದ ಕೂಡಿ) (ಸ್ವಗತಂ) ಈ ಸತ್ಪುರುಷನ ಮಾತನ್ನು ಮೀರುವುದು ಯುಕ್ತವಲ್ಲ. ಹೇಳುವೆನು. (ಪ್ರಕಾಶಂ) ಎಲೈ ಸಾಧುವೆ ! ವಿಸ್ತರಿಸುವದಕ್ಕೆ ಕಾಲವಿಲ್ಲ. ಸಂಕ್ಷೇಪವಾಗಿ ಹೇಳುವೆನು, ಕೇಳಬೇಕು. ಬ್ರಹ್ಮಸ್ವದ ಬಾಧೆಗಾಗಿ ಈ ಕಾರ್ಯವನ್ನು ಆರಂಭಿಸಿದೆನು, ಇನ್ನು ನನ್ನನ್ನು ನಿರ್ಬಂಧಪಡಿಸಬೇಡಿ.

ಉಪಾ—ಹಾಗಾದರೆ ತೆಗೆದುಕೊ ; ಹಣವನ್ನು ಕೊಡುವೆನು.

ರಾಜ—(ಕಿವಿಮುಚ್ಚಿಕೊಂಡು) ಎಲೈ ಸಾಧುವೆ ! ಹಾಗೆ ತೆಗೆದುಕೊಳ್ಳುವುದು ಬ್ರಾಹ್ಮಣರ ವೃತ್ತಿ. ನಮ್ಮಗಳಿಗೆ ಯೋಗ್ಯವಲ್ಲ. ನನ್ನಲ್ಲಿ ಕರುಣಿಸುವಪಕ್ಷಕ್ಕೆ ಬೆಲೆಯಾಗಿ ಕೊಡಿ.

ಶೈಬ್ಯೆ—(ಬೇಗನೆ ಬಳಿಗೆ ಬಂದು ಕೈ ಮುಗಿದುಕೊಂಡು) ಆರ್ಯನೆ!

ಮೊದಲು ಸೇರಿದ ನನ್ನನ್ನು ತಾವು ಬಿಡಕೂಡದು. ಆದುದರಿಂದ ಶರಣಾಗತಳಾದ ನನ್ನನ್ನು ಅನುಗ್ರಹಿಸಬೇಕು.

ಉಪಾ—(ಕಂಬನಿಗೂಡಿ) ಎಲೌ ಪೂಜ್ಯಳೆ!

ಕಂ ॥ ಐವತ್ತುಸಾಸಿರಂ ಪೊ।
ನ್ನೀವೆನಿದಂ ನಿಮ್ಮೊಳಾರ್ಗವಾದೊಡಮುದರಿಂ ॥
ದಾವುದು ಯುಕ್ತಮೆನಿಕ್ಕುಂ ।
ಗೈವುದದಂ ನಿಮ್ಮೊಡಂಬಡಿಕೆಯಿಂದೀಗಳ್ ॥

(ಎಂದು ಹಣವನ್ನು ಕೊಡುವನು.)

ಶೈಬ್ಯೆ—(ಗ್ರಹಿಸಿ ಹರ್ಷದಿಂದ) ಆಹ! ದೈವಯೋಗದಿಂದ ನನ್ನ ಪತಿಯ ಪ್ರತಿಜ್ಞಾಭಾರವು ಅರ್ಧ ಕಳೆದದ್ದಾಯಿತು. ಆದುದರಿಂದ ಕೃತಾರ್ಥಳಾದೆನು.

ಉಪಾ—(ಸ್ವಗತಂ) ಇವರಿಬ್ಬರ ದುಃಖವನ್ನು ನೋಡುವುದಕ್ಕಾಗುವದಿಲ್ಲ. (ಎಂದು ಹೊರಡುವುದಕ್ಕೆ ಯತ್ನಿಸುವನು.)

ಶೈಬ್ಯೆ—ಆರ್ಯನೆ! ಸ್ವಲ್ಪಕಾಲ ನಿಲ್ಲಬೇಕು. ಆರ್ಯಪುತ್ರನನ್ನು ಚೆನ್ನಾಗಿ ನೋಡಿ ಬರುವೆನು.

ಉಪಾ—ಪೂಜ್ಯಳೆ! ಹಾಗೆಯೆ ಆಗಲಿ. ನಮ್ಮ ಶಿಷ್ಯ ಕೌಂಡಿನ್ಯನಿರುವನು. ನಾನು ಹೋಗುವೆನು. (ಎಂದು ಹೋಗುವನು.)

ಶೈಬ್ಯೆ—(ಧನವನ್ನು ಅರಸಿನ ಸೆರಗಿಗೆ ಕಟ್ಟಿ) ಆರ್ಯಪುತ್ರನೆ! ಈ ಬ್ರಾಹ್ಮಣೋತ್ತಮನ ದಾಸೀತ್ವವನ್ನು ಅನುಮತಿಸಬೇಕು.

ರಾಜ—(ಚಿಂತೆಯಿಂದ ಕೂಡಿ) ಆವಿಧಿಗಿದು ಅನುಮತವಾಗಿಯೇ ಇಧೆ. (ತನ್ನನ್ನು ತಾನು ನಿಂದಿಸಿಕೊಂಡು ಮೇಲೆ ನೋಡಿ) ಎಲಾ ದುಷ್ಟವಿಧಿಯೆ!

✓ ಕಂ ॥ ಅರಸಿಯನಾಗಿಸಿದಿವಳಂ । V. beautiful
ಪರಗೃಹಪರಿಚಾರಿಕೆಯನೊಡರ್ಚಿದನಿನಗೇ ॥
ನೊರೆವೆಂ ಬೈತಲೆಮಣಿಯಂ ।
ಚರಣಕ್ಕಾಭರಣಮೆಸಗಿದಂತಾಯ್ತು ಲ್ತೇ ॥

(ದೈನ್ಯದಿಂದ) ಹಾ ! ಕಷ್ಟ ಕಷ್ಟ.

ಕಂ ॥ ಬಿದಿ ಪೊಡೆಯೆ ಮಂದಮತಿಯೆನಿ ।
ಸಿದನಾಂ ಸುತದಾರವಿಕ್ರಯಂ ಗೆಯ್ದುದರಿಂ ॥
ದೊದಗಿದ ಕುಲಾಪವಾದದೆ ।
ವದನಶ್ರೀ ಮಲಿನವಾದುದಲೆ ದಿನಕರನಾ ॥

(ಧೈರ್ಯದಿಂದ ಕೂಡಿ) (ಪ್ರ) ಪ್ರಿಯೆ !

ವೃ ॥ ಆರಾಧಿಸೌ ದ್ವಿಜನನಾತನ ಪತ್ನಿಯಂ ನೀ । ನೋರಂತೆ ಸೇವಿಪುದು ಕಾವುದು ನಿನ್ನಬಾಳಂ । ಆರಕ್ಷಣಂಗೊಳಿಪುದರ್ಭಕನಂ ವಿಧಾತ್ರಂ । ನಾರೀಮಣೀ ಬೆಸಪುದೆಲ್ಲವು ಮಾಡವೇಳ್ಕುಂ ॥

ಶೈಬ್ಯೆ—ಆರ್ಯನ ಅಪ್ಪಣೆಯಾದಂತೆ ನಡೆದುಕೊಳ್ಳುವೆನು. (ಹೋಗಲಿಚ್ಛೈಸಿ ರಾಜನನ್ನು ನೋಡಿ ವ್ಯಾಕುಲತೆಯನ್ನು ಅಭಿನಯಿಸುವಳು.)

ವಟು—(ಕೋಪದಿಂದ) ಉಪಾಧ್ಯಾಯರು ದೂರ ಹೋದರು. ನಡೆ, ಬೇಗನೆ ನಡೆ.

ಶೈಬ್ಯೆ—(ವಿನಯದಿಂದ) ಸ್ವಲ್ಪ ತಾಳಿ. ಆರ್ಯಪುತ್ರನ ಮುಖವನ್ನು ನೋಡಿ ಬರುವೆನು.

ರಾಜ—(ಚಿಂತೆಯಿಂದ) ಪ್ರಿಯೆ ! ಸೈರಿಸು, ಸೈರಿಸು. ದುಃಖಿಸಬೇಡ. ಬ್ರಾಹ್ಮಣನು ನಿಂತಿರುವನು.

ಶೈಬ್ಯೆ—(ರಾಜನನ್ನು ನೋಡುತ್ತ ಮೆಲ್ಲಮೆಲ್ಲನೆ ಹೋಗುವಳು.)

ಬಾಲ—ಅಯ್ಯಾ ! ಅಮ್ಮ ಎಲ್ಲಿಗೆ ಹೋಗುವಳು ?

ರಾಜ—ಮಗನೆ ! ನಿಮ್ಮಯ್ಯನ ಕೈಯನ್ನು ಹಿಡಿದದ್ದಕ್ಕೆ ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಹೋಗುವಳು.

ಬಾಲ—ಎಲಾ ವಟುವೆ ! ನಮ್ಮ ತಾಯಿಯನ್ನು ಎಲ್ಲಿಗೆ ಕರೆದು ಕೊಂಡು ಹೋಗುವೆ ?

(ಎಂದು ತಾಯಿಯ ಸೆರಗನ್ನು ಹಿಡಿಯುವನು.)

ವಟು—(ಕೋಪದಿಂದ) ತೆಗೆ ! ಗರ್ಭದಾಸನೆ ! ತೆಗೆ. (ಎಂದು ನೂಕಿ ಬೀಳಿಸುವನು.)

ಬಾಲ—(ತುಟಿಯನ್ನು ನಡುಗಿಸುತ್ತ ತಾಯಿತಂದೆಗಳನ್ನು ನೋಡುವನು) (ರಾಣಿಯೂ ರಾಜನೂ ಕಂಬನಿದುಂಬಿ ನೋಡುವರು.)

ರಾಜ—ಎಲೈ ಬ್ರಾಹ್ಮಣನೆ ! ಬಾಲಕರಲ್ಲಿ ಅಪರಾಧವನ್ನು ಎಣಿಸಬಾರದು. ಆದಕಾರಣ ನೀವು ಹೀಗೆ ಮಾಡಕೂಡದು.

(ಬಾಲನನ್ನು ಎತ್ತಿಕೊಂಡು ಮುಂಡೆಯನ್ನು ಆಘ್ರಾಣಿಸಿ ತಕ್ಕೈಸಿ ವ್ಯಸನದಿಂದ)

ವೃ ॥ ಏಕೆಲೆ ಕಂದ ಕಂದಳಿತಶೋಕದೆ ಚೆಂದುಟಿಕೆತ್ತಿ ನೀಡುವಾ ।
ಲೋಕಿಪೆ ನಿರ್ದಯಂ ಪರಮಪಾಪಿಯು ಮೆಂದೆನಿಪೆನ್ನ ವಕ್ತ್ರಮಂ ॥
ಲೋಕದೊಳಪ್ರಿಯಂಗಳೆನಿಕುಂ ಮರಿಗಳ್ ಪುಲಿಗಳ್ಗವಕ್ತ್ರಮೆಂ ।
ತೋ ಕಡುಕೂರ್ಮೆ ಪೆಣ್ಬುಲಿಗಳಲ್ಲವರಿಂ ಕಡೆಯಾದೆನಲ್ತೆನಾಂ ॥

ಆದುದರಿಂದ ಚಂಡಾಲನಾದ ನನ್ನ ಸಂಗಡ ಏತಕ್ಕೆಬರುವೆ. ನಿನ್ನ ತಾಯಿಯ ಸಂಗಡ ಹೋಗು. (ಎಂದು ವ್ಯಾಕುಲತೆಯನ್ನು ಅಭಿನಯಿಸುವನು.)

ಶೈಬ್ಯೆ—ಆರ್ಯಪುತ್ರನೆ! ಮಂದಭಾಗ್ಯಳಾದ ನನ್ನೊಡನೆ ಹಲುಬುತ್ತ ಮಹರ್ಷಿಯ ಕಾರ್ಯಕ್ಕೆ ಏಕೆ ತಡಮಾಡುವೆ? (ಎಂದು ಬಾಲಕನನ್ನು ಎತ್ತಿಕೊಂಡು ಹೋಗುವಳು.)

ಬಾಲ—ಆರ್ಯನೆ! ಕಾಪಾಡು, ಕಾಪಾಡು (ಎಂದು ಹೋಗುವನು).

ರಾಜ—(ಬಹಳ ಹೊತ್ತು ನೋಡಿ) ಹಾ! ಕೆಟ್ಟೆನು. (ಎಂದು ಬೀಳುವನು.)

(ಅನಂತರ ವಿಶ್ವಾಮಿತ್ರನು ಬರುವನು.)

ವಿಶ್ವಾ—ಏನು? ಇನ್ನೂ ನಮ್ಮ ದಕ್ಷಿಣಾದ್ರವ್ಯವನ್ನು ತರಲಿಲ್ಲವೆ?

ರಾಜ—(ಕೇಳಿ ಬೇಗನೆ ಎದ್ದು) ಪೂಜ್ಯರೆ! ಇದೊ ಅರ್ಧವನ್ನು ತೆಗೆದುಕೊಳ್ಳಿ.

ವಿಶ್ವಾ—ಆಃ! ಅರ್ಧ ನಮಗೇನು ಅವಶ್ಯಕವಿಲ್ಲ. ನೀನು ಪ್ರತಿಜ್ಞೆಮಾಡಿದ್ದನ್ನೆಲ್ಲಾ ಕೊಡಬೇಕೆಂದು ನಿನಗೆ ತೋರಿದರೆ ಎಲ್ಲವನ್ನು ಕೊಡು.

(ತೆರೆಯಲ್ಲಿ)

ಕಂ ॥ ಸುಡು ನಿನ್ನೀವ್ರತಮಂ ಸುಡು ।
ಸುಡು ನಿನ್ನೀತಪವನಂತು ನಿನ್ನಯ ತಿಳಿವಂ ॥
ಸುಡು ಮುನಿಯೆ ಹರಿಶ್ಚಂದ್ರಂ ।
ಗೊಡರ್ಚ್ಚಿದ ನಿಮಿತ್ತದಿಂದಮಿಾ ದುರ್ದಶೆಯಂ ॥

ವಿಶ್ವಾ—(ಕೇಳಿ ಕೋಪದಿಂದ) ಆಃ! ಯಾರಿವರು? ನಿಂದಾಪೂರ್ವಕವಾಗಿ ನನ್ನನ್ನು ಅಪಮಾನಿಸುವರು. (ಮೇಲೆ ನೋಡಿ) ಎಲಾ! ಇವರು ವಿಮಾನಚಾರಿಗಳಾದ ವಿಶ್ವೇದೇವತೆಗಳು. ಒಳ್ಳೇದು. (ಕ್ರೋಧವನ್ನು ಅಭಿನಯಿಸಿ ಕಮಂಡಲುವಿನಿಂದ ಶಾಪಜಲವನ್ನು ತೆಗೆದುಕೊಂಡು) ಛಡಛಡೆಲವೊ ಕ್ಷುದ್ರಕ್ಷತ್ರಿಯಪಕ್ಷಪಾತಿಗಳಾದ ಅವಿವೇಕಿಗಳೆ!

*ಕಂ ॥ ನಿವಗೈವರ್ಗಂ ಜನ್ಮಂ ।
ಸವನಿಸುಗುಂ ಕ್ಷತ್ರಜಾತಿಯೊಳಗಾಬಳಿಕಂ ॥
ಕುವರರ್ಕಳಾದ ನೀಂಗಳ ।
ನವನಿಸುರಂ ದ್ರೌಣಿಯಿರದೆ ನಿಸದಂ ಕೊಲ್ಗುಂ ॥

(ಪುನಶ್ಚ ಮೇಲೆ ನೋಡಿ)

ವೃ ॥ ಬುವಿಗಸ್ಮದ್ದೃಷ್ಟಿಪಾತಪ್ರಭಯಚಲಿತಘಂಟಾಠಣತ್ಕಾರದಿಂತೀ । ವೆ ವಿಯದ್ಭಾಗಂ ಸ್ಖಲತ್ಪುಷ್ಪಕದಿನುರುಳ್ದಪರ್ ಕಂಪಮಾನ ಧ್ವಜಾಗ್ರ ॥ ಪ್ರವಿಲಂಬಚ್ಚೀನವಾಸೋವಲಯಿತಮಕುಟೀಕೋಟಿಗಳ್ ಭ್ರಷ್ಟಮಾಣಿ । ಕ್ಯವಿರಾಜತ್ಕುಂಡಲರ್ ಭಾಪಮರರಿವರಥೋವಕ್ತ್ರರಾಗುತ್ತಮೀಗಳ್ ॥

ರಾಜ—(ಮೇಲೆ ನೋಡಿ ಭಯದಿಂದ ಕೂಡಿ) (ಸ್ವ) ತಪಃಪ್ರಭಾವವು ಆಶ್ಚರ್ಯಕರವಾದುದ್ದು. ಹರಿಶ್ಚಂದ್ರನು ಕ್ಲೇಶಪಡುವುದೆಂಬುವುದು ಯುಕ್ತವಾದುದ್ದು ತಾನೆ ? (ಪ್ರಕಾಶಂ) ಪೂಜ್ಯರೆ! ಸಾಕು, ಬೇರೆ ಎಣಿಸಕೂಡದು.

ಕಂ ॥ ಗಳಿಸಿದುದಿದು ಪೆಂಡಿರ್ಮ ।
ಕ್ಕಳ ವಿಕ್ರಯದಿಂದಮಿಂದಿದಂ ಸ್ವೀಕರಿಸಿಂ ॥
ಉಳಿದ ಧನಕ್ಕಾನಂತ್ಯಜ ।
ನೊಳಾದೊಡಂ ಮಾಳ್ಪೆನೆನ್ನ ತನುವಿಕ್ರಯಮಂ ॥

ವಿಶ್ವಾ—(ಕೋಪದಿಂದ) ಅರ್ಥದಿಂದೇನು ? ಬೇಡ. ಕೊಡುವುದಾಗಿದ್ದರೆ ನಿಶ್ಶೇಷವಾಗಿ ಕೊಡು.

ರಾಜ—ಎಲೈ ಸಾಧುಗಳಿರಾ ! (ಪಿಂದುಂ ಕಾಣದೆ ಎಂಬ ಕಂದವನ್ನು ಹೇಳುವನು. ಅನಂತರ ಚಂಡಾಲವೇಷದಿಂದ ಧರ್ಮಪುರುಷನು ಅನುಚರನೊಡಗೂಡಿ ಪ್ರವೇಶಿಸುವನು.)

ಧರ್ಮ—(ಸ್ವಗತಂ)

ಕಂ॥ ಧರಿಸಿದಪೆನಾ ಜಗತ್ತ್ರಂ ।
ಧರಿಕುಂ ಸತ್ಯಂ ಜಗತ್ತ್ರಿನೊಡವೆರೆದೆನ್ನಂ ॥
ಕರವಿಶಾಯರಸನ ಸತ್ಯವ ।
ಪರೀಕ್ಷಿಸಲ್ ತಳೆದೆನೀಗಳೀ ಜಾತಿಯುಮಂ ॥

(ಚೆನ್ನಾಗಿ ಯೋಚಿಸಿ ಆಶ್ಚರ್ಯದಿಂದ ಕೂಡಿ) ಯೋಗ ವಿಶೇಷದಿಂದ ನಾನು ಎಲ್ಲವನ್ನು ಕಾಣಬಲ್ಲವನಾದರೂ ಈ ಮಹಾರಾಜನಿಗೆ ಸಮಾನನಾದ ಮತ್ತೊಬ್ಬನನ್ನು ಕಾಣೆನು. ಆಗಲಿ; ಆತನ ಸಮಿಾಪಕ್ಕೆ ಹೋಗುವೆನು. (ಬಂದು ಪ್ರಕಾಶನಾಗಿ) ಎಲೊ ಸಾರಮೇಯಕನೆ! ಹಣದ ಪೆಟ್ಟಿಗೆಯನ್ನು ತೆಗೆದುಕೊಂಡು ಬಂದಿರುವೆಯೊ?

ಅನುಚರ—ಮಹತ್ತರಕನೆ! ನೀನು ಚಿನ್ನದ ಮನೆಯನ್ನು ಕಟ್ಟಿಸಬೇಕಾಗಿದೆಯೋ ಏನು?

ಮಹ—ಅದನ್ನೆಲ್ಲ ಕೇಳಿ ನಿನಗೇನು ಪ್ರಯೋಜನ? (ಎಂದು ಬರುವನು.)

ರಾಜ—("ಪಿರಿದುಂ ಕಾಣದೆ" ಎಂಬ ಪದ್ಯವನ್ನು ಹೇಳಿ, ಲಕ್ಷಾರ್ಥವೆಂದು ಎಲ್ಲಾಕಡೆಗೂ ನೋಡಿ) ಅಯ್ಯೊ! ಮಂದಭಾಗ್ಯನಾದ ನನ್ನನ್ನು ಕೇಳುವವರೆ ಇಲ್ಲವಲ್ಲ. ಏನುಮಾಡಲಿ? ಹಾ! ಕೆಟ್ಟೆನು (ಎಂದು ಮೂರ್ಛಿಸಿ ಬೀಳುವನು.)

ಧರ್ಮನು—(ಕೇಳಿ, ನೋಡಿ, ಸ್ವಗತಂ) ಮಹಾತ್ಮನಾದ ಈತನು ಮೂರ್ಛೆಹೊಂದಿರುವನಲ್ಲ! ಒಳ್ಳೇದು! ಆಗಲಿ! ಹೀಗೆ ಮಾಡುವೆನು. (ತ್ವರೆಯಿಂದ ಬಳಿಗೆ ಬಂದು ಪ್ರಕಾಶವಾಗಿ) ಎಲೈ ಏಳೇಳು. ನಿನ್ನನ್ನು ನಾನು ಕೊಂಡುಕೊಳ್ಳುವೆನು. ಇದೊ ತೆಗೆದುಕೊ, ನೀನು ಕೇಳಿದಷ್ಟು ಹಣವನ್ನು ಕೊಡುವೆನು.

ರಾಜ—(ಸಂತೋಷದಿಂದೆದ್ದು) ಎಲೈ ಸಾಧುವೆ! ಎಲ್ಲಿ? ತೆಗೆದ ಕೊಂಡು ಬಾ. ತೆಗೆದುಕೊಂಡು ಬಾ. (ನೋಡಿ ವಿಷಾದದಿಂದ ಕೂಡಿ) ಭದ್ರನೆ! ನನ್ನನ್ನು ಅಪೇಕ್ಷಿಸಿದವನು ನೀನೆಯೋ?

ಧರ್ಮ—ಹೌದು. ನಾನೆ ನಿನ್ನನ್ನು ಅಪೇಕ್ಷಿಸಿದವನು.

ರಾಜ—ಹಾಗಾದರೆ ನೀನು ಯಾರು?

ಧರ್ಮ—ನಾನು ಎಲ್ಲಾ ಕಾಣೆಗಳಿಗೂ ಮಸಣಗಳಿಗೂ ಒಡೆಯನಾದ ಚಂಡಾಲಮಹತ್ತರಕನು.

ರಾಜ—(ಭಯದಿಂದ ಹಿಂದಕ್ಕೆ ಹೋಗಿ ವಿಶ್ವಾಮಿತ್ರನಡಿಗಳಿಗೆರಗಿ) ಪೂಜ್ಯರೆ! ಪ್ರಸನ್ನರಾಗಿ ಪ್ರಸನ್ನರಾಗಿ.

ಕಂ॥ ಯತಿಪತಿ ನಿಮಗಾನಾಳಾ।
ಗುತೆ ಋಣಮಂ ಕಳೆದುಕೊಳ್ವುದುಚಿತಮಿದೆನಗ॥
ಶ್ರುತದೃಷ್ಟಪೂರ್ವಮೆನಿಕುಂ।
ಕ್ಷಿತಿಯೊಳ್ ಚಂಡಾಲದಾಸ್ಯಮೆನಿಪುದು ನೋಡಲ್॥

ವಿಶ್ವಾ—ತೆಗೆ ಮೂರ್ಖನೆ ತೆಗೆ! "ಸ್ವಯಂದಾಸಾಸ್ತಪಸ್ವಿನಃ" ಎಂದು ಇರುವಾಗ ನೀನು ದಾಸನಾಗಿ ನಮಗೆ ಮಾಡತಕ್ಕದ್ದೇನು?

ರಾಜ—(ವಿನಯದಿಂದ) ಪೂಜ್ಯರೆ! ಏನು ಅಪ್ಪಣೆಯಾಗುತ್ತೊ ಅದನ್ನು ಮಾಡುವೆನು.

ವಿಶ್ವಾ—ಎಲೈ ವಿಶ್ವದೇವರ್ಕಳೆ! ನೀವು ಕೇಳಿ. ನಾವು ಹೇಳಿದ್ದನ್ನು ಮಾಡುತ್ತೀಯೊ?

ರಾಜ—ನಿಜವಾಗಿ ಮಾಡುವೆನು.

ವಿಶ್ವಾ—ಹಾಗಾದರೆ ಈತನಿಗೆ ನಿನ್ನ ಆತ್ಮವನ್ನು ವಿಕ್ರಯಿಸಿ ನಮ್ಮ ದಕ್ಷಿಣಾದ್ರವ್ಯವನ್ನು ಕೊಡು.

ರಾಜ—(ಚಿಂತೆಯಿಂದ ಸ್ವಗತ) ಓಹೋ! ಇನ್ನೇನು ಗತಿ! (ಪ್ರ) ಪೂಜ್ಯರೆ! ಅಪ್ಪಣೆಯಾದಂತೆ ನಡೆದುಕೊಳ್ಳುವೆನು. (ಚಂಡಾಲನ ಬಳಿಗೆ ಬಂದು) ಎಲೈ ಸ್ವಜಾತಿಮಹತ್ತರಕನೆ! ನಿಬಂಧನೆಯಿಂದ ನನ್ನನ್ನು ಕೊಂಡುಕೊಳ್ಳಬೇಕು.

ಚಂಡಾಲ—ಆ ನಿಬಂಧನೆ ಏನು ? ಹೇಳು.

ರಾಜ—ಕೇಳಬೇಕು.

ಕಂ॥ ದೂರದೆ ನಿಲ್ವೆಂ ಭೈಕ್ಷವ ।
ನಾರೊಗಿಪೆಂ ಪೊದೆವೆನೆಡೆಯುಬಟ್ಟೆಯನಾಳ್ದಂ ॥
ಮೀರದೆ ಬೆಸಸಿದ ಕಾರ್ಯವು ।
ನೋರಂತೆ ವಿಚಾರವಿಲ್ಲದಾನಾಗಿಸುವೆಂ ॥

(ಇಬ್ಬರೂ ಸಂತೋಷಿಸಿ)

ಚಂಡಾಲ—ಎಲೈ ! ನಿನ್ನ ಸಮಯವಾದರೊ ಬಹು ಯೋಗ್ಯವಾಗಿರುವುದು. ತೆಗೆದುಕೊ ಈ ದ್ರವ್ಯವನ್ನು, (ಎಂದು ದೂರದಿಂದಲೇ ಕೊಡುವನು.)

ರಾಜ—(ಗ್ರಹಿಸಿ ಸಂತೋಷದಿಂದ ವಿಶ್ವಾಮಿತ್ರನನ್ನು ಕುರಿತು) ಪೂಜ್ಯರೆ! ನಿಮ್ಮ ಈ ದ್ರವ್ಯವನ್ನೆಲ್ಲ ಸ್ವೀಕರಿಸಬೇಕು.

ವಿಶ್ವಾ—(ಲಜ್ಜೆಯಿಂದ ಕೂಡಿ) ಕೊಡುವೆಯೋ ?

ರಾಜ—(ವಿನಯದಿಂದ) ಸ್ವೀಕರಿಸಬೇಕು.

ವಿಶ್ವಾ—(ತೆಗೆದುಕೊಂಡು, ಸ್ವಗತ) ಇನ್ನು ನಿರ್ಬಂಧದಿಂದೇನು ? ಆಗಲಿ ಹೋಗುವೆನು. (ಎಂದು ನಾಚಿಕೊಂಡು ಹೋಗುವನು.)

ರಾಜ—(ವಿನಯದಿಂದ ಕೈಮುಗಿದುಕೊಂಡು) ಪೂಜ್ಯರೆ ! ಕಾಲವಿಳಂಬದಿಂದಾದ ನನ್ನ ಅಪರಾಧವನ್ನು ಸೈರಿಸಬೇಕು.

ವಿಶ್ವಾ—ಸ್ಥೈರಿಸಿದೆವು. (ಎಂದು ಹೋಗುವನು.)

ರಾಜ—(ಸಂತೋಷದಿಂದ)

ಕಂ॥ ಅನೃಣನೆನಿಸುತ್ತೆ ಮತ್ತಾ ।
ಮುನಿಶಾಪಕ್ಕೀಡೆನಿಸದೆ ಸತ್ಯಚ್ಯುತನೆಂ ॥
ದೆನಿಸದ ಕತದಿಂದವೆ ವಲ ।
ಮೆನಗೀ ಚಂಡಾಲದಾಸ್ಯಮುಂ ವರಮಲ್ತೆ ॥

(ಚಂಡಾಲನ ಬಳಿಗೆ ಹೋಗಿ) ಎಲೈ ಸ್ವಜಾತಿಮಹತ್ತರಕನೆ! (ಎಂದರ್ಧೋಕ್ತಿಯಲ್ಲಿ ಬಾಯ ಮುಚ್ಚಿಕೊಂಡು) ಎಲೈ ಸ್ವಾಮಿಯೆ! ಆಜ್ಞಾಪಿಸಬೇಕು. ಭೃತ್ಯನಾದ ನಾನು ಮಾಡತಕ್ಕ ಕೆಲಸವೇನು ?

ಧರ್ಮಪುರುಷ—(ಸಂತೋಷದಿಂದ ಕೂಡಿ ಆತ್ಮಗತ) ಯಾವಾಗಲೂ ಕಂಡು ಕೇಳದ ಕೆಲಸ.

(ಪ್ರಕಾಶ) ಎಲವೊ ದಕ್ಷಿಣಶ್ಮಶಾನಕ್ಕೆ ಹೋಗಿ ಮೃತರಾದವರ ಬಟ್ಟೆಯನ್ನು ಸೆಳೆಕೊಳ್ಳುತ್ತ ಹಗಲಿರಳು ಜಾಗರದಿಂದಿರು. ಹೋಗು, ನಾನು ಕೂಡ ಮನೆಗೆ ಹೋಗುವೆನು.

ರಾಜ—ಅಪಣೆ ಸ್ವಾಮಿ ! (ಎಂದು ಎಲ್ಲರೂ ತೆರಳುವರು.)

ತೃತೀಯಾಂಕಂ ಸಮಾಪ್ತಂ.

---

## ನಾಲ್ಕನೆಯ ಅಂಕ.

---

(ಅನಂತರ ಚಂಡಾಲರಿಂದೊಡಗೂಡಿ ಚಿಂತಾಕ್ರಾಂತನಾದ ರಾಜನು ಪ್ರವೇಶಿಸುವನು)

ಚಂಡಾಲರು—ಆರ್ಯರೆ ! ದಾರಿಬಿಡಿ ದಾರಿಬಿಡಿ. ಈತನು ವಧ್ಯನಲ್ಲ. ಏತಕಿಲ್ಲಿ ನೋಡುತ್ತೀರಿ. (ಕಿವಿಗೊಟ್ಟು) ಆರ್ಯರೆ ! ಏತಕ್ಕಿವನನ್ನು ತೆಗೆದುಕೊಂಡು ಹೋಗುತ್ತೀರೆಂದು ಕೇಳುವಿರೊ ? ದೀನನಾದ ಇವನು ಸ್ವಾಮಿಯಾದ ಮಹತ್ತರಕನಿಂದ ಬಹಳ ದ್ರವ್ಯವನ್ನು ತೆಗೆದು ಕೊಂಡು ಭೃತ್ಯತ್ವವನ್ನೊಂದಿರುವನು. ಆದುದರಿಂದ ಕಾಪಾಡುವ ನಿಮಿತ್ತ ದಕ್ಷಿಣಶ್ಮಶಾನಕ್ಕೆ ಇವನನ್ನು ಕರೆದುಕೊಂಡು ಹೋಗುವೆವು.

ರಾಜ—(ನಿಟ್ಟುಸಿರನ್ನು ಬಿಟ್ಟು ಆತ್ಮಗತ) ನನಿಗೆ ಅವಧಿಯಿಲ್ಲದೆ ಮೇಲೆ ಮೇಲೆ ಅತಿ ದಾರುಣವಾಗಿ ವ್ಯಸನಪರಂಪರೆಯು ಬರುತ್ತಲಿಥೆ. ಹಾಗೆಯೇ ಸರಿ !

ಕಂ॥ ಪೊಲೆಯನೊಳಿನಗಾಳ್ಗೆಲಸಂ ।
ನೆಲೆ ಘೋರತರಂ ಶ್ಮಶಾನವಕಟಾ ಮೃತಕಂ ॥
ಬಳವಿಾಳ್ವ ಕೆಲಸವಿಂತಾ ।
ಕುಲಿತೆಯೊಳಂ ಶಾಂತಿವಡೆಯದಹಹಾ ದೈವಂ ॥

(ವ್ಯಸನದಿಂದ) ''ದುಃಖಂ ದುಃಖೈಸ್ತಿರೋಧೀಯತೇ'' ಎಂದೊರೆವುದು ಸುಳ್ಳಲ್ಲ. ಏತಕ್ಕೆಂದರೆ ಋಣವಿಮುಕ್ತನಾದೆನೆಂದು ನೆಮ್ಮದಿಯಾಗಿದ್ದ ನನಗೆ ಕೂಡಲೆ ಆಳ್ಗೆಲಸದ ದುಃಖವು ಬಾಧಿಸುವುದಕ್ಕೆ ತೊಡಗಿತು. ಏನುಮಾಡಲಿ ?

ವೃ॥ ಅಳಲುವೆನಾರ್ಗೆ ನಂಟುಮಿಗಲೆನ್ನನೆ ಸೇರ್ದ್ದಕಟೇಗನಾಥ ರಾ ।
ಗಳಲುವ ನಾಡಿಗರ್ಗೆ ಪ್ರಿಯಬಂಧುಜನರ್ಗೆ ಶರಣ್ಯರಿಲ್ಲದಾ ॥

ಒಂದು ದುಃಖವು ದುಃಖಾಂತರದಿಂದ ಮರೆಯಾಗುತ್ತದೆ

ಕುಲಿಸುವ ಸೇವಕಗೊರ್ಗ್ ಬುಧಸದ್ಮದೆ ತೊೞ್ತಿನಿಸಿಪ್ಪ್ ದೇವಿ ಗೋ। ಎಳೆಗುವರಂಗೊ ನೋಡ್ಪೊಲೆಯನಾಳಿನಿಸೆನ್ನಯ ಕೇಳು ಬಾಳ್ವೆಗೋ॥

(ಸ್ಮರಣೆಯನ್ನಭಿನಯಿಸಿ ವ್ಯಸನದಿಂದ)

ವೃ॥ ಉಪಚರಿಸಲ್ಕೆ ಶಕ್ಯನೆ ತಪೋನಿಧಿ ಗಾಧಿತನೂಜನಾ ಮಹಾ।
ತಪನೊಳಗಾಂತೆನಾಂ ಋಣವಿಮುಕ್ತಿಯನಂತಧಿಕಪ್ರಯಾಸದಿಂ॥
ಕುಪಿತಮಹೀಸುರಂ ಕೆಡಪಲಂದಳುತಿರ್ದ್ದೆಳಗೂಸಕಂಡಳಲ್। ತಪಿ
ಸುಗುಮೆನ್ನನಿಂದಕಟ ಮುಳ್ಳುಡಿದುರ್ವಿದಗಾಯದಂತೆವೋಲ್॥

(ಚಿಂತಿಸಿ ಖೇದದಿಂದ ಕೂಡಿ ಸ್ವಗತ) ಹಾ! ಇವಲ್ಲದೆ ಅದು ಬೇರೆ ನನ್ನನ್ನು ಬಲವಾಗಿ ಪೀಡಿಸುವುದು.

ವೃ॥ ತ್ವರೆಗೆಯ್ಯಲ್ ಗುರುಭಕ್ತಿಯಿಂದೆ ವಟು ತನ್ನೊಳ್ ನೀಡು
ಮಾಕ್ರೋಶದಿಂ। ಸೆರಗಂ ಬಂಧಿಸಿ ರೋದಿಸುತ್ತಿರೆ ಕರಂ ಬಾಲಂ
ತದಾಕ್ಷೇಪದಿಂ॥ ಮರುಗುತ್ತಾಕೆ ನಿರುದ್ಧಬಾಷ್ಪ ಜಲದಿಂದಂ
ನಾಡೆ ನಾಂದಿರ್ಪ್ಪ ಕೇ। ಕರದಿಂ ಕ್ರೂರನನೆನ್ನ ನೋಡಿದುದೆ ತಾಂ
ಮಚ್ಚಿತ್ತಮಂ ಪೀಡಿಕುಂ॥

(ಚಿಂತೆಯಿಂದ) ಹಾ ದೇವಿಯೆ!

ಕಂ॥ ಸಸಿಕುಲದೊಳೊಗೆದು ಮತ್ತಾ।
ಬಿಸಜಸಖಾನ್ವಯಕೆ ತಕ್ಕಸತಿಯೆನಿಸಿದ ನೀಂ॥
ಅಸಿಯುಳೆ ಕೇಳಾಜ್ಯಾಹುತಿ।
ಭಸಿತವೆ ಕೆಡೆದಂತೆ ಕೆಡೆದೆಯೆಂತಕಟೆನ್ನೊಳ್॥

ಇದಲ್ಲದೆ ಎಲೌ ರಾಜಪುತ್ರಿಯೆ!

ಕಂ॥ ಬಳಲುತ್ತಮಿರ್ದೆಯುಪವನ ।
ದಲರಂ ಸರಗೊಳಿಪೊಡಕಟ ಕೋಮಳೆ ದಾಸೀ ॥
ಕುಲಕುಚಿತಮೆನಿಪ ಕಾರ್ಯ್ಯಂ ।
ಗಳನೆಂತೆಸಗಿದಪೆಯಾವಗಂ ಮಾಡದುವಂ ॥

ಚಂ—ಎಲೈ ಬೇಗ ನಡೆ. ಅದೊ! ಅಲ್ಲಿ ಕಾಣುವುದೆ ದಕ್ಷಿಣಶ್ಮಶಾನವು.

ರಾಜ—(ನೋಡಿ ದಿಟ್ಟತನದಿಂದ ಕೂಡಿ) ಓಹೊ! ಇದೇಯೇ ಮಹಾ ಶ್ಮಶಾನ? ಹೌದು.

ವೃ॥ ಉಡುಪಥದೊಳ್ ವಲಂ ಬಳಕೆಗೊಂಡುರುಮಂಡಲಚಾರದಿಂ ದಣಂ। ಮಿಡುಕದೆ ಬಿತ್ತರಂಬಡೆದೆರಂಕೆಗಳಿಂ ಕಡುದೂರದ ತ್ತಣಿಂ ॥ ಕೆಡದಪುವಾಸಯಿಂ ಪೆಣದಬಾಡಿಗೆ ಬಿರ್ಚ್ಚಿದ ಬಾಯ್ಗ ಳತ್ತಣಿಂ । ಬಿಡದುಗುತಿರ್ಪ್ಪ ಜೊಲ್ಲಿಡಿದ ಚಂಚುಪುಟಂಬ ಡೆದಿರ್ದ್ದ ಪರ್ದ್ದುಗಳ್ ॥

ತೆರೆಯಲ್ಲಿ ಕಲಕಲವಾಗುವುದು.

ರಾಜ—(ಕಿವಿಗೊಟ್ಟು ನೋಡಿ) ಆಹ! ಮಹಾಶ್ಮಶಾನವು ನೋಡುವು ದಕ್ಕೆ ಭೀಭತ್ಸವಾಗಿಯೂ ರೌದ್ರವಾಗಿಯೂ ಕಾಣುವುದು. ಹಾಗೆಯೇ ಸರಿ.

ವೃ॥ ಅಡಿಗಡಿಗೊಳ್ವ ಜಂಬುಕವಿರಾವಮಮಂಗಳತಂಬಟಾರವಂ । ಕೊಡಕೆಯನಾಕುಲಿಪ್ಪುದೆಡೆಯೊಳ್ ಸಲೆ ಮಾರ್ದ್ದನಿಗೊಂಡದೆ ತ್ತಲುಂ ॥ ಒಡೆದ ಕರೋಟಿಯಿಂದುಗುವ ಬಲ್ಮಿದುಳಿಂದವೆ ನಾಂದು ಬಲ್ವಲಂ । ಕಿಡೆ ಜಟಿಲಾಗ್ರಮುಜ್ವಲಿಸುತಿರ್ದ್ದಪುವೀಕ್ಷಿ ಪೊಡೀ ಕೃಶಾನುಗಳ್ ॥

(ಮುಂದೆ ನೋಡಿ ಶ್ಲಾಘಿಸಿ) ಆಹ! ಭೀಭತ್ಸಕರನಾದರೂ ಸ್ಪೃಹಣೀ ಯವಾಗಿದೆ. ಎಲೈ ಭದ್ರಕುಣಪವೆ! ಸರ್ವಸ್ವವನ್ನು ಗ್ರಹಿಸುವ

ಶುನಕಶ್ವಾಪದಗಳಿಂದ ಉಪಭೋಗಿಸಲ್ಪಡುವ ನೀನೇ ಧನ್ಯನು
ಹಾಗೆಯೇ ಸರಿ.

ಕಂ॥ ಕರಟಂ ಕೀಳ್ಗಂ ಕಣ್ಗಳ ।
ನರಿ ನೊಣೆಗುಂ ಸುರುಳ್ದರಸನೆಯಂ ಮೇಣ್ ಸೊಣಕಂ ॥
ಪರಿಗುಂ ಗುಹ್ಯಮನಿದೆ ಬಿ ।
ತ್ತರಿಕುಂ ನಿನ್ನಂತ್ಯವಿವರಮಂ ಪರ್ದ್ದದರಿಂ ॥

ಆಹ ! ಶರೀರದ ನಿಸ್ಸಾರತೆಯನ್ನು ಏನು ಹೇಳಲಿ ?

ಕಂ॥ ಆನಡುವಾಯೆರ್ದೆಯಾ ಪು ।
ರ್ಬ್ಬಾನಯನಾನನಮುಮಸ್ಥಿಮಲಮಾಂಸವಸಾ ॥
ದ್ಯಾನಿಚಿತಂ ಕಾಮುಕರಭಿ ।
ಮಾನಿಪರದನರಿದರಂತು ಪೇಸುವರಲ್ತೇ ॥

ಚಂ—(ಮುಂದೆ ನೋಡಿ ಮತ್ತೊಬ್ಬನನ್ನು ಕುರಿತು) ಎಲವೋ ! ಈ
ದೊಡ್ಡಮರದ ತುದಿಯಲ್ಲಿರುವ ಪೂಜ್ಯಳಾದ ಚಂಡಕಾತ್ಯಾಯನಿಯನ್ನು
ನಮಸ್ಕರಿಸುವ.

ಚಂ—(ಇನ್ನೊಬ್ಬನು) ಹಾಗೆ ಮಾಡುವ. (ಎಂದು ನಮಸ್ಕರಿಸಿ)

ಕಂ॥ ಅಸಿಯಿಂ ಚಂಡನ ಖಂಡಿಸಿ ।
ತಿಸುಳದಿನಿರಿದೆತ್ತಿ ಮಹಿಷನಂ ತೊವಲುಡೆ ರಂ ॥
ಜಿಸೆ ಸೊಗಯಿಪ ಕಾತ್ಯಾಯನಿ ।
ಸಸಿದಲೆಯನ ಮಡದಿ ದೇವಿ ಕಾಪಾಡೆಮ್ಮಂ ॥

ರಾಜ—(ಎಲ್ಲಾಕಡೆಗೂ ನೋಡಿ,) ಆಹ ! ಕಾತ್ಯಾಯನಿಗೆ ಭೀಭತ್ಸೋಪ
ಚಾರದಲ್ಲಿ ಎಷ್ಟು ಪ್ರೀತಿ !

ವೃ॥ ಪಳೆದಂ ನಿರ್ಮಾಲ್ಯಮಂ ತಾಳ್ದಳಿದ ಮಹಿಷಗೋಕಂಠದಿಂದಂ
ಪಡಲ್ವಿ । ಟ್ಟೆಳಲುತ್ತಿರ್ಕ್ಕಂ ನಿಕಾಮಂ ಶ್ರವಣ ಕಟುಠಣತ್ಕಾರ

p. R. R. Mally.



ಬಲಿವಿಲೋಲಂ ವಲಂ ಕೂಗೆ ತನ್ನೊಳ್। ಮಿಳಿರ್ದಿರ್ಕ್ಕುಂ ಸಾಸ್ರ
ಪಂಚಾಂಗುಳಿದಳಮಿದೋ ದೇವೀ ತರುಸ್ತಂಭಮಾದಂ ॥

(ವಂದಿಸಿ ಕೈಮುಗಿದು)

ಗೀತಿ॥ ಪ್ರೇತೇ ಪ್ರೇತ ವಿಮಾನ।
ಪ್ರೀತೇ ಪ್ರೇತಾಸಿ ರೌದ್ರತರರೂಪೇ ॥
ಪ್ರೇತಾಶಿಲಸತ್ಪ್ರೀತೇ।
ಮಾತರ್ಭೈರವಿ ನಮೋಸ್ತು ತೇ ಚಂಡೀ ॥

(ತೆರೆಯಲ್ಲಿ ಕಲಕಲವಾಗುವುದು ರಾಜನು ಕೇಳಿ)

ಓಹೋ ! ಇದು ಸಂಧ್ಯಾಕಾಲದಲ್ಲಿ ತಮ್ಮ ತಮ್ಮ ಗೂಡಿಗೆ ಹೋಗಲೆಳಸಿದ ಪಕ್ಷಿಗಳ ಕಲಕಲವು. (ಪಡುವಲಕಡೆ ನೋಡಿ) ದೈವ ಪರಿಪಾಟಿಯು ಯಾರಿಂದಲೂ ಮೀರಲಸಾಧ್ಯವು.

ಕಂ॥ ತಾರಾಪಥದೀಪಂ ಕಾ।
ಲೋರಗರಾಜತ್ಫಣಾಲಸನ್ಮಾಣಿಕ್ಯಂ ॥
ವಾರಿಧಿಯೊಳ್ ಕೆಡೆದಪನೀ।
ಸೂರಂ ಬಾಡಬವಿಡಂಬಿಪನ್ತು ವಿಧುರತೆಯಿಂ ॥

(ಎಲ್ಲಾ ಕಡೆಗೂ ನೋಡಿ ಆಶ್ಚರ್ಯದಿಂದ ಕೂಡಿ)

ವೃ॥ ನವಸಂಧ್ಯಾಮಧ್ಯರಕ್ತಾರುಣಮಹಹ ! ಚಿತಾಂಗಾರಮುಂದಾರ್ಕ
ವೃಕ್ಷಾ । ಸ್ಥಿವಿಕೀರ್ಣಂ ನಿಷ್ಪತನ್ಮಾಸವವಿಶದಕರಂಕೇಂದು
ಸಾನಂದರಕ್ಷೋ ॥ ನಿವಹಂಗಾಡಾಂಧಕಾರಪ್ರಸೃಮರಸುಮಹ
ದ್ಧೂಮಧೂಮ್ರಾನುಕಾರಂ । ಭುವನಂ ಲೀಲಾಶ್ಮಶಾನಂ ಮಲ
ಮೆನಿಸಿದುದಾ ಕಾಲಕಾಪಾಲಿಗೀಗಳ್ ॥

ಚಂ—(ನೋಡಿ) ಇದೇನು ?

ಕಂ॥ ಕೊಲೆದಾಣವನ್ನೈದಿದವೊಲ್ ।
ಕೊಲೆಗೀಡಾಗಿರ್ಪ ಜಂತು ಭಾಸ್ಕರನಸ್ತಾ ॥
ಚಲವಂ ಪೊರ್ದ್ದಲ್ ಬಲ್ಲ ।
ತ್ತಲೆಯೆತ್ತಂ ಪೊಲೆಯರಂತೆ ಸುಳಿಯುತ್ತಿರ್ಕ್ಕುಂ ॥

ರಾಜ—(ನೋಡಿ ಧೈರ್ಯದಿಂದ) ಅಹ! ಈ ಶ್ಮಶಾನವೃಕ್ಷಗಳು ಅತಿ ಭಯಂಕರವಾಗಿರುವುವು.

ವೃ॥ನೆಗೆದಾಸ್ಕಂಧಂಬರಂ ವಿಸ್ತೃತಕುಹರಗೃಹದ್ವಾರದೊಳ್ ಕೂಗುಗುಂಗೂ । ಗೆಗಳಾದಂ ಪದ್ದುಗಳ್ ಪೊಯ್ದ್ದರಕೆಯನುಲಿಯುತ್ತಗ್ರದೊಳ್ ಬೀಳುತಿರ್ಕುಂ ॥ ಮಿಗೆ ಶಾಖಾಲಂಬಿಶೀರ್ಯತ್ಕುಣಪಘನವಸಾಗಂಧವಂ ವಾಸಿಸುತ್ತಂ । ಬಿಗುರಪ್ಪಂತಾಗಿಕುಂ ಫೇತ್ಕೃತಿಗಳನುರಿಯಂ ಕಾರುವೀ ಫೇರವಂಗಳ್ ॥

ಒಬ್ಬಚಂ—ಎಲಾ! ದಕ್ಷಿಣಶ್ಮಶಾನವು ಅನೇಕ ಬೇತಾಳಗಳಿಂದ ಆಕ್ರಾಂತವಾಗಿರುವುದು. ಆದುದರಿಂದ ಬೇಗಬೇಗ ಹೋಗುವ.

ಮತ್ತೊಬ್ಬ—ಹಾಗೆಯೇ ಮಾಡುವ. (ರಾಜನನ್ನು ನೋಡಿ) ಎಲೈ? ಮಹತ್ತರಕನ ಆಜ್ಞೆಯಾದಂತೆ ಈ ಶ್ಮಶಾನವನ್ನು ಹಗಲಿರುಳು ಕಾದುಕೊಂಡು ಇರತಕ್ಕದ್ದು. ಎಚ್ಚರ ಎಚ್ಚರ.

ರಾಜ—(ಸಂತೋಷದಿಂದ) ಹಾಗೆಯೇ ಆಗಲಿ. ಒಡೆಯನಾಜ್ಞೆಯಾದಂತೆ.

(ತೆರೆಯಲ್ಲಿ ಕಲಕಲವಾಗುವುದು)

ಚಂ—(ಭಯದಿಂದ) ಅಯ್ಯೊ! ಅಮ್ಮ! ಭೂತಗಳಿದ್ದುವು ಬೇಗ ಬೇಗ ಓಡಿಹೋಗುವ. (ಎಂದು ಹೋಗುವರು)

ರಾಜ—(ಧೈರ್ಯದಿಂದ ಮುಂದೆ ಹೋಗಿ ನೋಡಿ) ಅಹ! ಈ ಪಿಶಾಚಗಳನ್ನು ನೋಡುವುದು ಬಹು ಭೀಭತ್ಸಕರವಾಗಿರುವುದು.

ವೃ ॥ ನಯನಂ ಪಾಳ್ಬಾವಿಯಂ ಪೋಲ್ತಪುದು ತನುಸಿರಾಭೀಕರಂ
ಘೋಣಮಾದಂ । ಭಯಮಂ ಮಾಳ್ಕುಂ ಮೊಗಂ ಪಲ್ ಕು
ಟಿಲಮುರುತರಸ್ನಾಯುಸಂಛನ್ನಮಂಗಂ ॥ ನಿಯತಂ ಕುಕ್ಷಿ
ಸ್ಥಲಂಭೂರುಹಕುಹರತಟೀನಿಮ್ನಮಾಗಿರ್ಕುಮಂತಾ । ರಯೆ
ನಾಡೀಜಂಘಸಂಘಂ ಬಿಗುರ್ವಡಿಸದದಾರ್ಗೀಕ್ಷಿಸಲ್ ತಾನ
ಳುಂಬಂ ॥

(ಕೌತುಕದಿಂದ ನೋಡಿ)

ಅಹ ! ಪಿಶಾಚಗಳಿಗೆ ಕ್ರೀಡಾಕಲಹದಲ್ಲಿ ಎಷ್ಟು ಕೌಶಲ !

ವೃ ॥ ಸುರಿಗುಮದೊಂದರಿಂ ರುಧಿರಪೂರಿತಪಾತ್ರವನೀಳ್ದುಕೊಂಡ
ದೊಂ । ದುರಿಪೆರತೊಂದುದೀಪ್ರರಸನಂ ನೊಣೆಗುಂ ಮೊಗದಿಂದ
ಮೊಕ್ಕುದಂ ॥ ತಿರೆಯೊಳಗೊಕ್ಕಶೋಣಿತಕಣಂಗಳನಾಕ್ಷಣ
ಮಂತದೊಂದು ನೀ । ಳ್ದಿರೆ ರಸನಾಂಚಲಂ ಸವಿಗುಮಾಸೆಮಿಗಲ್
ವಲಮುಚ್ಚಕಂಧರಂ ॥

(ಕೌತುಕದಿಂದ ನೋಡಿ ನಕ್ಕು) ಓಹೋ ! ಏನಾಶ್ಚರ್ಯ ! ದುರ್ವಿದ
ಗ್ಧರ ಪರಿಹಾಸದಂತೆ ಈ ರಾಕ್ಷಸರ ಕ್ರೀಡೆಯೂ ಕೂಡ ವಿಪರೀತ
ವಾಗಿ ಪರಿಣಮಿಸುವುದು.

ವೃ ॥ ಎರ್ದೆನೆಳಲೆಂಬಿನಂ ಬಿಗಿದವಂಚುರ್ವ ತಳ್ಕೆಯುದೆತ್ತ ದಾಡೆಗು।
ಟ್ಟಿದ ಬಿರಿಸಿಂಗೆ ಕೇಸುರಿಯ ಸೂಸುವ ಚುಂಬನದಂಗಮೆತ್ತ
ಕ॥ ಲ್ಪದ ತರಿಗೆಂಡದಂತಿರೆ ಪರಸ್ಪರವಿಕ್ಷಿಪ ನೋಟಮೆತ್ತಸ।
ನ್ಮೃದುಮಧುರಾಂಗಸಂಗತಿಯಿನಾಟಿಪ ಕೂಟಮುದೆತ್ತಮಾರ
ಯಲ್ ॥

(ಜಿಗುಪ್ಸೆಯೊಡನೆ ನೋಡಿ) ತೆಗೆ, ಇದತ್ಯಂತ ಭೀಭತ್ಸಕರವಾದದ್ದು.

ಕಂ॥ ಚಿತಿಶಿಖಿಯಿನೀಳ್ದು ಮುಖಮಂ।
ತ್ಕೃತವಾತದೆ ನಂದೆ ಪೊಯ್ದು ನರಶಿರಮಂ ನುಂ॥
ಗುತೆ ಸುಡೆ ಗಂಟಲ್ ತೃಷ್ಣಾ।
ನ್ವಿತಮೊಡನೆ ಮಗುಳ್ಚುಗುಂ ಪ್ರಭೀತಂ ಪ್ರೇತಂ॥

(ಸ್ಮರಣೆಯನ್ನಭಿನಯಿಸಿ) ಇವುಗಳನ್ನು ನೋಡುವ ಕುತೂಹಲವಿನ್ನು ಸಾಕು. ಒಡೆಯನ ಆಜ್ಞೆಯನ್ನು ಅನುವರ್ತಿಸಿಕೊಂಡು ಶ್ಮಶಾನದಲ್ಲಿ ಚರಿಸುತ್ತಿರುವೆನು. (ಮುಂದೆ ನಡೆದು ನೋಡಿದಂತೆ ಅಭಿನಯಿಸಿ) ಆಹಾ! ಈ ಇರುಳು ಕವಿದಿರುವುದನ್ನು ಏನು ಹೇಳತಕ್ಕದ್ದು ?

ವೃ॥ ತಮಂ ಮುಷ್ಟಿಗ್ರಾಹ್ಯಂ ತವಿಪುದು ದಿಶಾಭಾಗದರಿವಂ। ಸ
ಮಂತಂಘ್ರಿನ್ಯಾಸಂ ಸ್ಖಲಿಪುದಫಲಂ ದೃಷ್ಟಿಪತನಂ॥ ವಿಮೃ
ಷ್ಟಾನ್ಯದ್ವರ್ಣಂ ಝುರಪತನಭಿನ್ನಾಂಜನಕುಭೃ। ತ್ಸಮಂತಾ
ನದ್ವೈತಂಬಡೆದು ಮೆರೆಗುಂ ಕಾಳಿಮೆ ಕರಂ॥

ಆಗಲಿ ಗಟ್ಟಿಯಾಗಿ ಕೂಗಿ ಹೇಳುವೆನು. ಯಾರಲ್ಲಿ? ಶ್ಮಶಾನಾಧಿಪತಿಯಾದ ನನ್ನ ಸ್ವಾಮಿಯ ನಿಬಂಧನೋಕ್ತಿಯನ್ನು ಕೇಳಿರಿ.

ಕಂ॥ ತಿಳಿಸದೆನಗೀವ ಮೃತಕಂ।
ಬಳಮಂ ತಾಂ ಕುಡದೆ ಜನಮುದಾರಾದೊಡಮಿಾ॥
ಇಳೆಯೊಳ್ ಶ್ಮಶಾನಯೋಗ್ಯಂ।
ಗಳೆನಿಪ ಕಜ್ಜಗಳನುಜ್ಜುಗಿಸದಿರವೇಳ್ಕುಂ॥

ಕಂ॥ ನಿರವಿಸಿದುದನಾಗಿಪುದೆ।
ಚ್ಚರದಿಂ ಪತಿಯಾಜ್ಞೆಮಿಾರೆ ಸೈರಿಪನಲ್ಲಾಂ॥
ಸುರಪಾಗ್ನಿಯುಮುಗ್ರೋರೆಯಾ।
ಗಿರೆಯುಂ ಮಿಾರ್ದಂಗಿದೆನ್ನತೋಳ್ ಪ್ರತಿಭಟಿಕುಂ॥

ಇದೇನು! ಯಾರೂ ಮಾತಾಡುವದಿಲ್ಲ! ಒಳ್ಳೇದು. ಇನ್ನೊಂದು ಕಡೆ ಆಡಿ ನೋಡುವೆನು. (ನಡೆದು) ಯಾರಲ್ಲಿ ?

ತೆರೆಯಲ್ಲಿ—ಎಲೈ ! ನಾನು ನಾನು.

ರಾಜ—ಏನೋ ಪ್ರತಿಮಾತಾಡುವಂತಿದೆ. ಆಗಲಿ. (ಆ ಶಬ್ದದ ಬಳಿ ವಿಡಿದು ಹೋಗಿ) ಅದು ಯಾರು? ಚನ್ನಾಗಿ ತಿಳಿಯುವೆನು. (ಹೋಗಿ ತೆರೆಯಕಡೆ ನೋಡಿ ಆಶ್ಚರ್ಯದಿಂದ) ಯಾರಿವನು !

ಕಂ॥ ಕಲಿತಕಪಾಲಂ ಭಸ್ಮಾ।
ನುಲೇಪಿ ಖಟ್ವಾಂಗಧಾರಿಯಸ್ಥಿವಿಭೂಷಾ ॥
ಮಳಕಾಯಂ ನೃಕರಂಕೋ।
ಜ್ವಳಮೌಳಿ ಗಿರೀಶನಂತೆ ತೊಳಗುತ್ತಿರ್ಪಂ ॥

(ಅನಂತರ ಕಾಪಾಲಿಕ ವೇಷದಿಂದ ಧರ್ಮನು ಪ್ರವೇಶಿಸುವನು)

ಕಾಪಾ—ಎಲೈ ! ನಾನು ನಾನು.

ಕಂ॥ ಎರೆಯದೆ ದೊರೆದಶನಮುಮಂ।
ಡಿರದಿಂದ್ರಿಯತತಿಯನಿಕ್ಕಿ ದಾಂಟಿಮಹಾಸಂ ॥
ಸರಣಶ್ಮಶಾನಮುಂ ಸಂ।
ಚರಿಪೆನಭೀಭತ್ಸಮಿಾ ಶ್ಮಶಾನದೊಳಾದಂ ॥

(ಯೋಚಿಸಿ) ಭಗವಂತನಾದ ಆ ರುದ್ರಮೂರ್ತಿಯು ಈ ಮಹಾ ವ್ರತವನ್ನಾಚರಿಸಲಿಲ್ಲವೆ ? ಆದುದರಿಂದ ಸ್ವಚ್ಛಂದಚಾರಿಗಳಿಗೆ ಇದು ಉತ್ಕೃಷ್ಟವಾದದ್ದೇ ಸರಿ. ಆದರೆ—

ಕಂ॥ ಮಾತೇಂ ಬಗೆವೊಡೆ ಭೈಕ್ಷ್ಯಾ।
ದ್ವೈತ ತಪೋದ್ವೈತ ಸತ್ಕ್ರಿಯಾದ್ವೈತಂಗಳ್ ॥
ಭೂತಲದೆ ಸುಲಭಮಾತ್ಮಾ।
ದ್ವೈತಂ ತಾನೊಂದೆ ಪಡೆಯಲಸದಳಮಲ್ತೇ ॥

(ಎಲ್ಲಾಕಡೆಗೂ ನೋಡಿ ಶಂಕೆಯಿಂದ ಕೂಡಿ)

ಕಂ॥ ಧರಿಸಿದಪೆನಾಂ ಜಗತ್ತಂ ।
ಧರಿಪುದು ಸತ್ಯಂ ಜಗತ್ತಿನೊಡವೆರೆದೆನ್ನಂ ॥
ಕರಮಿಾಯರಸನ ಸತ್ಯವ ।
ಪರೀಕ್ಷಿಸಲ್ ತಾಳ್ದಿಸೀಗಳೀವೇಷಮನಾಂ ॥

(ಯೋಚಿಸಿ ಆಶ್ಚರ್ಯದಿಂದ ಕೂಡಿ) ಎಷ್ಟು ದುಃಖಗಳು ಬಂದರೂ ವ್ಯಸನಪಡದೆ ಇರುವ ರಾಜರ್ಷಿಯಾದ ಹರಿಶ್ಚಂದ್ರನ ಚರಿತ್ರವು ವಿಚಿತ್ರವಾದುದ್ದು. ಅಥವಾ ಮಹಾನುಭಾವರ ಸ್ವಭಾವವೇ ಹೀಗೆ.

ಕಂ॥ ಸೊಗವೇಂ ದುಗುಡಮದೇನೀ ।
ಜಗದೊಳ್ ಸುಖದುಃಖಸಂಗಮಜ್ಞಾಗ್ರ್ಗಕ್ಕುಂ ॥
ಬಗೆಯಲ್ಕರಿವುಳ್ಳಗ್ಗಿರ್ಗೀ ।
ಸೊಗಮುಂ ಸೊಗಮಲ್ಲ ದುಗುಡಮಲ್ಲಂ ದುಗುಡಂ ॥

ಒಳ್ಳೇದು ಆತನ ಬಳಿಗೆ ಹೋಗುವೆನು. (ಹೋಗಿ, ನೋಡಿ, ಶ್ಲಾಘಿಸಿ) ಆಹ ! ಈತನನ್ನು ನೋಡಲು ಮಹಾತ್ಮನಾಗಿ ತೋರುವನು. ಆದುದರಿಂದ ಸಮಿಾಪಕ್ಕೆ ಹೋಗುವೆನು. (ಬಳಿಗೆ ಬಂದು) ಎಲೈ ಮಹಾರಾಜನೆ ! ಸಿದ್ಧಿಗಳಿಗೆ ಭಾಜನನಾಗು.

ರಾಜ—ಮಹಾವ್ರತವನ್ನು ಆಚರಿಸುವ ನೈಷ್ಠಿಕರಾದ ತಮಗೆ ಸುಖಾಗಮನವೆ ?

ಕಾಪಾ—ಎಲೈ ! ರಾಜನೆ ! ನಿನ್ನನ್ನು ಕುರಿತು ನಾವು ಅರ್ಥಿಗಳಾಗಿ ಬಂದಿರುವೆವು.

ರಾಜ—(ಲಜ್ಜೆಯನ್ನು ಅಭಿನಯಿಸುವನು)

ಕಾಪಾ—ಸಾಕು ! ಏತಕ್ಕೆ ಲಜ್ಜೆಪಡುವೆ ? ಯೋಗದೃಷ್ಟಿಯಿಂದ ನಿನ್ನ ವೃತ್ತಾಂತವನ್ನೆಲ್ಲಾ ತಿಳಿದಿರುವೆವು. ಇಂತಹ ಅವಸ್ಥೆಯನ್ನು ಹೊಂ

ದಿರುವನಾದರೂ ನಮ್ಮ ಇಷ್ಟವನ್ನು ನೆರವೇರಿಸುವ ವಿಷಯದಲ್ಲಿ ನೀನೇನೂ ದರಿದ್ರನಲ್ಲ.

ಕಂ॥ ಪೆರರ್ಗುಪಕರಿಪೆಡೆಯೊಳ್ ಸ।
ತ್ಪುರುಷರ್ ವಲಮಾರ್ತರಲ್ಲವೆಂಬುದದಿಲ್ಲಂ॥
ಪರಿಪೋಷಿಸದಿಪ್ಪರ್ನೆ ಪೇಳ್।
ಪೆರೆ ಕುಹುವಂ ಪೊರ್ದ್ದಿಯುಂ ವನಸ್ಪತಿಕುಲವುಂ॥

ರಾಜ—ಆದುದರಿಂದ ಅವಧಾನದೊಡನೆ ಕೇಳು. ಅವಹಿತನಾಗಿರುವೆನು.

ಕಾಪಾ—ವೃ॥ ಬೇತಾಳವಜ್ರಘುಟಿಕಾಂಜನಲೇಪದೈತ್ಯ। ಶಾತೋದರೀವಿಧಿರಸಾಯನಧಾತುವಾದಂ॥ ಮಾತೇಂ ಕರಸ್ಥಿತವು ದೆಂದೆಣಿಸೆಂದು ವಿಘ್ನ! ವ್ರಾತಂ ಪಟಂಬೊಲವನಾವೃತಿಗೆಯ್ಯದಿರ್ಕ್ಕುಂ॥

ಆದುದರಿಂದ ಕವಿಯಕೂಡದೆಂದು ವಿಘ್ನಗಳಿಗೆ ಆಜ್ಞಾಪಿಸು.

ರಾಜ—ಎಲೈ ಸಾಧಕನೆ! ನಾನು ಅಸ್ವತಂತ್ರನೆಂಬುದನ್ನು ಯೋಗಬಲದಿಂದ ತಿಳಿದೇ ಇರುವೆ. ಆದುದರಿಂದ ಸ್ವಾಮಿಪ್ರಯೋಜನಕ್ಕೆ ವಿರೋಧಬರದಂತೆ ಪ್ರಯತ್ನಿಸುವೆನು.

ಕಾಪಾ—ಎಲೈ ರಾಜನೆ! ಇದರಿಂದ ಸ್ವಾಮಿಪ್ರಯೋಜನಕ್ಕೆ ವಿರೋಧವೆಲ್ಲಿಂದುಂಟಾಗುವುದು? ನಿನ್ನ ಆಜ್ಞಾಮಾತ್ರದಿಂದ ನಮ್ಮಭೀಷ್ಟವು ನೆರವೇರತಕ್ಕದ್ದಾಗಿದೆಯಲ್ಲವೆ? ಇಲ್ಲಿಗೆ ಸ್ವಲ್ಪದೂರದಲ್ಲೇ ಸಿದ್ಧರಸವಿರುವುದು. ಅದನ್ನು ನಾವು ಸಾಧಿಸುವೆವು. ನೀನು ಇಲ್ಲಿ ಇದ್ದುಕೊಂಡು ವಿಘ್ನನಿವಾರಣವನ್ನು ಮಾಡು. (ಹೋಗುವನು)

ರಾಜ—(ದಿಟ್ಟತನದಿಂದ) ವಿಘ್ನಗಳಿರಾ! ನೀವು ಹಿಂಜರಿವುದು ಹಿಂಜರಿವುದು. ಸರ್ವಪ್ರಕಾರದಿಂದಲೂ ನಿಮ್ಮುರವಣೆ ಮುರಿಯಿತು.

(ತೆರೆಯಲ್ಲಿ) ರಾಜನೆ! ನಿನ್ನ ಅಪ್ಪಣೆಯಾದಂತೆ.

ಕಂ॥ ಲೇಸಿನ ಪಡಿ ತೆರೆದುದು ವಿ।
ದ್ಯಾಸತಿಯರ್ ತಾವೆ ವರಿಸುವರ್ ಸಿದ್ಧಿಗಳೊ॥
ಲ್ದಾಸೆವಿಂಗಲ್ಲೈದುಗುಂ ನೃಪ।
ವಾಸವ ನಿನ್ನಾಣತಿಯನದಾವಂ ಮಿರ್ವಂ॥

ರಾಜ—(ಕೇಳಿ) ಭಾಪು! ದೈವಯೋಗದಿಂದ ವಿಘ್ನಗಳು ನ
ಮಾತನ್ನು ಮೀರಲಿಲ್ಲ. ಇದು ನನಗೆ ಪ್ರಿಯವು.

(ಅನಂತರ ವಿಮಾನಚಾರಿಗಳಾದ ವಿದ್ಯೆಗಳು ಪ್ರವೇಶಿಸುವರು)

ವಿದ್ಯೆ—(ಬೇಗನೆ ಬಳಿಗೆ ಬಂದು) ಎಲೈ ರಾಜೇಂದ್ರನಾದ ಹರಿಶ್
ದ್ರನೆ! ದೈವಯೋಗದಿಂದ ವರ್ಧಿಸುವೆಯಾ? ಕೇಳು.

ಕಂ॥ ಜನಪತಿನಿನ್ನೊಳ್ ಮುನಿದಾ।
ಮುನಿ ದಾರುಣನಾಗಿ ನಡೆದನಾರಿಂದಾನಿ॥
ನ್ನಿನಿತುಮೆಡರ್ಗ್ಗೆ ನಿಮಿತ್ತಗ।
ಳೆನಿಸಿದ ವಿದ್ಯೆಗಳೆ ನಾವು ಬಳಿವೊರ್ದ್ದಿದೆವೈ॥

ರಾಜ—(ನೋಡಿ ಆಶ್ಚರ್ಯದಿಂದ ಆತ್ಮಗತ) ಏನು? ಇವು ಪೂಜ
ಗಳಾದ ಆ ವಿದ್ಯೆಗಳೆ? ಇವುಗಳಿಗೋಸ್ಕರವಾಗಿಯೇ ಪೂಜ್ಯರಾ
ವಿಶ್ವಾಮಿತ್ರರ ಅತ್ಯುಗ್ರವಾದ ತಪಸ್ಸೆಲ್ಲಾ ವ್ಯರ್ಥವಾಯಿತೇ? (ಪ್ರಕಾಶ
(ಕೈಮುಗಿದು) ತ್ರಿಲೋಕವಿಜಯಿನಿಗಳಾದ ವಿದ್ಯೆಗಳೆ! ನಿಮಗೆ ವಂ
ಸುವೆನು.

ವಿದ್ಯೆ—ಎಲೈ ರಾಜನೆ! ನಾವು ನಿನಗಧೀನರು, ಆದುದರಿಂದ ನಮಗೆ
ನೀನೇನು ಆಜ್ಞಾಪಿಸುವೆಯೋ ಆಜ್ಞಾಪಿಸು.

ರಾಜ—ನನ್ನನ್ನು ಅನುಗ್ರಹಿಸುವುದು ನಿಮಗಭಿಮತವಾಗಿದ್ದರೆ, ಪೂಜ್ಯ
ರಾದ ವಿಶ್ವಾಮಿತ್ರರನ್ನು ಸೇರುವರಾಗಿ. ಅದರಿಂದ ಮುನಿಯ ವಿಷ
ಯದಲ್ಲಿ ನಾನು ಅನಪರಾಧಿಯೆನಿಸಿಕೊಳ್ಳುವೆನು.

ವಿದ್ಯೆ—(ಆಶ್ಚರ್ಯದಿಂದ ಒಬ್ಬರನ್ನೊಬ್ಬರು ನೋಡಿ) ಎಲೈ ರಾಜನೆ! ಹಾಗೆಯೇ ಆಗಲಿ. (ಎಂದು ಹೋಗುವರು)

(ಅನಂತರ ಕಾಪಾಲಿಕನು ನಿಧಿಯನ್ನು ಹೆಗಲಿನಮೇಲೆ ಹೊತ್ತು ಕೊಂಡಿರುವ ವೇತಾಳನೊಡನೆ ಪ್ರವೇಶಿಸುವನು.)

ಕಾಪಾ—(ಬಳಿಗೆ ಬಂದು) ಎಲೈ ಮಹಾರಾಜನೆ! ರಸಸಿದ್ಧಿಯಿಂದ ದೊರೆತ ಈ ನಿಧಿಯ ಲಾಭಾಭ್ಯುದಯದಿಂದ ವರ್ಧಿಸುವೆ. ಪೂಜ್ಯವಾದ ಈ ರಸವನ್ನು ಉಪಯೋಗಿಸಿಕೊ.

ಕಂ ॥ ಆವುದರುಪಯೋಗದೆ ಸಿ।
ದ್ಧಾವಳಿ ಗೆಲ್ದುಳಿವನೈದಿ ಸುರಲೋಕವನಾ ॥
ದೇವದ್ರುಮಮಂಜರಿಯಿಂ।
ತೀವಿರ್ದ್ದ ಸುಮೇರುಶಿಖರದೊಳ್ ವಿಹರಿಸುಗುಂ ॥

ರಾಜ—ಇದು ಭೃತ್ಯಭಾವಕ್ಕೆ ವಿರುದ್ಧವಲ್ಲವೆ? ಇದನ್ನು ಸ್ವೀಕರಿಸಿದಲ್ಲಿ ಒಡೆಯನನ್ನು ವಂಚಿಸಿದಂತಾಗುವುದು.

ಕಾಪಾ—(ಆಶ್ಚರ್ಯದಿಂದ ಕೂಡಿ, ಆತ್ಮಗತ) ಒಳ್ಳೇದು ಹೀಗೆ ಹೇಳುವೆನು. (ಪ್ರ) ಹಾಗಾದರೆ ಸಪತ್ನೀಕನಾದ ನಿನ್ನ ಕ್ರಯಪರಿಹಾರಾರ್ಥವಾಗಾದರು ಈ ನಿಧಿಯನ್ನು ತೆಗೆದುಕೊ.

ರಾಜ—ಅದುತಾನೆ ಹ್ಯಾಗಾಗುವುದು? ಭೃತ್ಯಭಾವವು ಧನರಹಿತವಾದುದಲ್ಲವೆ? ಆದುದರಿಂದ ಇದನ್ನು ಒಡೆಯನಿಗೆ ಸೇರಿಸಬೇಕೆಂಬ ಸಂಕಲ್ಪವು ನಿನಗೆ ಇದ್ದಲ್ಲಿ ಈ ಮಹಾನಿಧಿಯನ್ನೆಲ್ಲಾ ಒಡೆಯನಿಗೆ ನೀನೆ ಸೇರಿಸು.

ಕಾಪಾ—(ಆತ್ಮಗತ) ಆಹ! ಈ ಧೈರ್ಯವೂ, ಈ ಜ್ಞಾನವೂ, ಈ ಮಹಾನುಭಾವತೆಯೂ ಆಶ್ಚರ್ಯಕರಗಳಾಗಿರುವುವು. ಅಥವಾ

ಕಂ ॥ ಚಲಿಸುಗುಮಾಕುಲಶೈಲಂ ।
ಗಳುಮೊರ್ವೆ ಯುಗಾಂತಸಮಯಪವನಾಹತಿಯಿಂ ॥
ಚಲಿಸದು ಗಡ ಧೀರರ ನಿ ।
ಶ್ಚಲಮೆನಿಸಿದ ಹೃದಯಮುಡಸಿದಾಪತ್ತಿನೊಳಂ ॥

ಆದುದರಿಂದ ನಾನುತಾನೆ ಈತನನ್ನು ಏತಕ್ಕೆ ವಿಶೇಷ ನಿರ್ಬಂಧ ಪಡಿಸಲಿ. (ಪ್ರಕಾಶ, ವೇತಾಳನನ್ನು ಕುರಿತು) ಎಲೈ ಭದ್ರನೆ! ಈ ರಾಜನ ಅಭೀಷ್ಟವನ್ನು ನೆರವೇರಿಸು.

ವೇತಾಳ—(ವಂದಿಸಿ) ಸಾಧಕರ ಅಪ್ಪಣೆ. (ಎಂದು ಹೋಗುವನು)

ಕಾಪಾ—(ಎಲ್ಲಾ ಕಡೆಗೂ ನೋಡಿ) ಎಲೈ ರಾಜನೆ ! ಬೆಳಗಾಗುವಂತೆ ತೋರುವುದು. ಇನ್ನು ನಮ್ಮ ಕಾರ್ಯವನು ಸಾಧಿಸುವೆವು.

ರಾಜ—ಎಲೈ ಸಾಧಕೋತ್ತಮನೆ ! ದುಷ್ಕಥೆಗಳಲ್ಲಾದರೂ ನನ್ನನ್ನು ತಾವು ಸ್ಮರಿಸಬೇಕು.

ಕಾಪಾ—ದೇವತೆಗಳೇ ನಿನ್ನನ್ನು ಸ್ಮರಿಸುವರು.

ರಾಜ—(ಪೂರ್ವದಿಕ್ಕನ್ನು ನೋಡಿ, ಪ್ರಸನ್ನಮನಸ್ಕನಾಗಿ) ಓಹೊ !

ಕಂ ॥ ಕವಿದ ತಮಸ್ಸಂಚಯಮಂ ।
ತವಿಸುತ್ತಂ ಸಕಲಜನದನುಗ್ರಹಣಾರ್ಥಂ ॥
ತವಕಂ ಮಿಗಲುದಯಿಪನೀ ।
ನವಸಂಧ್ಯಾರುಣಪುರಸ್ಸರಂ ದಿವಸಕರಂ ॥

ಆದುದರಿಂದ ನಾನು ಕೂಡ ಪೂಜ್ಯಳಾದ ಭಾಗೀರಥಿಯ ತೀರ ವನ್ನು ಸೇರಿ ಒಡೆಯನ ಅಣತಿಯನ್ನು ಅನುವರ್ತಿಸುವೆನು.

(ಎಂದು ಹೋಗುವನು)

ಚತುರ್ಥಾಂಕಂ ಸಮಾಪ್ತಂ.

---

## ಐದನೆಯ ಅಂಕ

---

(ಅನಂತರದಲ್ಲಿ ವಿಕಾರವಾದ ಮಲಿನವೇಷದಿಂದ ರಾಜನು ಪ್ರವೇಶಿಸುವನು)

ರಾಜ—(ದುಃಖದಿಂದ ನಿಟ್ಟುಸುರನ್ನು ಬಿಟ್ಟು) ಅಹಹ! ಕಷ್ಟ ಕಷ್ಟ!

ವೃ ॥ ಭುವನಸ್ತುತ್ಯನೆನಿಪ್ಪ ಸನ್ಮುನಿಪನಾವಿದ್ವೇಷಮುಂ ಮಿತ್ರಬಂ। ಧುವಿಯೋಗಂ ಸುತದಾರವಿಕ್ರಯಮುಮಿಾ ಚಂಡಾಳದಾಸತ್ವಮುಂ ॥ ಅವಿವೇಕಾಸ್ಪದನುಂ ಕಠೋರನುಮೆನಿಪ್ಪೆನ್ನಾವದುಷ್ಕೃತ್ಯದಿಂ। ದವೆ ದುರ್ವಾರಫಲಂಗಳಾದುವಹಹಾತಕ್ಕ್ರಾರ್ಯರ್ಯಮೆಂತಿಕ್ರ್ಯ್ಯವೋ ॥

(ವ್ಯಸನದಿಂದ ಕೂಡಿ) ಆಹ! ದೈವಯೋಗವು ಬಲವತ್ತರವಾದದ್ದು. ಹ್ಯಾಗೆಂದರೆ—

ವೃ ॥ ಪಲವುಂ ಸಾಮ್ರಾಜ್ಯಸಂಪತ್ತಿಯಿನಗಲಿಸಿಯುಂ ಕ್ರೋಧಸಾಂದ್ರಂ ಮುನೀಂದ್ರಂ। ತಲೆವಾಗಿರ್ದ್ದೆನ್ನೊಳಾಗಳ್ ದಯೆಯಿನುಳಿಪಿದಂ ಮೂಾವರಾದೆಮ್ಮ ನೀ ಭೂ ॥ ತಲದೊಳ್ ದುರ್ದೈವಮಿಂತೀ ವ್ಯಸನದೊಳಮುಣಂ ತೃಪ್ತಿಯಂ ಪೊರ್ದದೀಗಳ್ । ಛಲದಿಂದೆಮ್ಮೆಲ್ಲರಂ ಬಾಳ್ಗೆಡಿಸಲಹಹ ನೈಷ್ಠುರ್ಯಮುಂ ಗೆಯ್ದುದಲ್ತೆ ॥

(ಚಿಂತೆಯನ್ನು ನಟಿಸಿ ನಿಟ್ಟುಸುರನ್ನು ಬಿಟ್ಟು, ವ್ಯಸನದೊಡನೆ)

ವೃ ॥ ಶೋಕವ್ಯಾಕುಲೆಯಾಗಿ ದೈನ್ಯವಡೆವಳ್ ಮೆಯ್ಗುಂದುವಳ್ ಮತ್ತೆ ತಾ । ನೇಕಾಂತಾಶ್ರಯಳಾಗಿ ನಿಷ್ಕ್ರಿಯೆಗಳಂ ನಾಂ ಮಾಳ್ಪುವಂ ಚಿಂತಿಸು ॥ ತ್ತಾಕಾಂತಾಮಣಿ ಜೀವಿಪಳ್ ಮಗಳ್ದು

ನಿಜಾಮುತ್ಸಂಗಮಾಕಾಂಕ್ಷೆಯಿಂ । ಹಾ ಕಷ್ಟಂಗಡ ಎನ್ನದುರ್ದ
ಶೆಯುನಾರಯ್ಯಳ್ ಸರೋಜಾನನೇ ॥

ಹಾ ವತ್ಸ ರೋಹಿತಾಶ್ವನೆ !

ವೃ ॥ ಲಲನಾಂಕಸ್ಥಲತಲ್ಪದೊಳ್ ಪವಡಿಸಲ್ ಬೇಗಿರ್ದ್ದ ನೀನಿಂತು
ಭೂ । ತಲದೊಳ್ ಬಿಳ್ದು ಪೊರಳ್ದದೆಂತು ಸುಖನಿದ್ರಾಲಂಬನಂ
ಗೆಯ್ವೆ ಹಾ ॥ ತಲೆಯೊಳ್ ತಾಳ್ದುದಿಳಾಧಿಪಪ್ರಕರಮಿಾ ನಿನ್ನಾ
ಜ್ಞೆಯುಂ ಮುನ್ನಮಿಂ । ದೆಳೆದುಯ್ದಾಶ್ರಮುಕಾರ್ಯಮುಂ ಬೆಸಸು
ಗುಂ ವನ್ಯಂವಟುಪ್ರೋತ್ಕರಂ ॥

(ಬಹಳಹೊತ್ತು ಯೋಚಿಸಿ ಕರುಣದೊಡನೆ)

ವೃ ॥ ಅನುವಾಗಿರ್ಪುದು ಮೌಳಿ ಬೇಳ್ಗೆ ವಿಪದಂಗಳ್ ತತ್ಸುಖಪ್ರ
ಶ್ನಮುಂ । ಮನಮೊಲ್ದಾನೊರೆವೆಂ ಕೃತಾರ್ಥರೆನಿಪಗ್ರ್ಯಾಪತ್ತಿಯೇ
ಸಂಪದಂ ॥ ಎನಗುದ್ವೇಗಮುನೀವೆಯಲ್ತೆ ಸುತನೀನುತ್ಸಂಗ
ಶಯ್ಯಾರ್ಹನೆಂ । ದೆನಿಸುತ್ತಿಂತಕೃತಾರ್ಥನಾಗಿ ಕಡಿವಾದೈವಾ
ಹಿಗೀಡಾಗುತಂ ॥

(ಭಯದಿಂದ ಕೂಡಿ) ಆಹ ! ಇದೇನು ನಾನು ಹೇಳಿದ್ದು ? ಶಾಂತಂ
ಪಾಪಂ ! ಶಾಂತಂ ಪಾಪಂ ! ವತ್ಸನಿಗೆ ಅಮಂಗಳವಾಗದಿರಲಿ.
" ಅಕೃತಾರ್ಥನಾಗಿ ವಿಧಿಯಿಂದೀಕಷ್ಟಕೀಡಾಗುತಂ "

(ಎಡಗಣ್ಣು ಹಾರುವುದನ್ನೂ ಬಲಭುಜವು ಅದಿರುವುದನ್ನೂ ಅಭಿ
ನಯಿಸಿ ಹರ್ಷದೊಡನೆ)

ಕಂ ॥ ನಸುನಡುಗುತಿರ್ಪುದೆಡಗ ।
ಣ್ಣಸವಸದಿಂದದಿರುತಿರ್ಪುದೆನ್ನೀ ಬಲದೋಳ್ ॥
ಉಸಿರ್ವಂತೆ ವೊಲೆನಗೀಗಳ್ ।
ವ್ಯಸನಾಭ್ಯುದಯಂಗಳೆರಡುಮೆಯ್ದುವ ತೆರನಂ ॥

(ಆಲೋಚಿಸಿ) ಅಥವಾ ಇನ್ನೂ ಆ ವ್ಯಸನೋದಯಚಿಂತೆಯಿಂದೇನು ? ಈ ನೀಚ ಹರಿಶ್ಚಂದ್ರನ ಕಥೆಯು ಕೊನೆಗಂಡಿತೆಂತಲೇ ತಿಳಿಯಬೇಕು. ಹಾಗೆಯೆಸರಿ—

ಕಂ ॥ ಇನ್ನೈತರ್ಪ್ಪ್ರವ್ಯಸನವು ।
ದುನ್ನತಸುಖಮುಕ್ಕುಮೆನೆಗೆ ಭಾವಿಸಿನೋಡಲ್ ॥
ಇನ್ನೇನತಿಪಾಪಿಯೆನಿ ।
ಪ್ಪೆನ್ನ ಸುಖೋನ್ನತಿಗೆ ಹೇತು ಮರಣಮೆ ಅಲ್ತೆ ॥

(ತೆರೆಯನ್ನು ಹಾರಿಸಿಕೊಂಡು ಚಂಡಾಲನು ಪ್ರವೇಶಿಸುವನು)

ಚಂಡಾಲ—ಎಲೋ ! ಈ ಹುಡುಗನ—

ರಾಜ—(ಭಯದೊಡನೆ) ಭದ್ರಕನೆ ! ಏನು ಹೇಳುವೆ ? ಈ ಹುಡುಗನ—

ಚಂಡಾಲ—ಎಲೋ ! ಕೇಳು. ಹಡುಗನ ಸಮೀಪದಲ್ಲಿ ಕುಳಿತುಕೊಂಡು ಒಬ್ಬಳು ಹೆಂಗಸು ಬಹಳ ದುಃಖದಿಂದ ಗೋಳಾಡುತ್ತಿರುವಳು. ಬೇಗನೆ ಹೋಗಿ ಅವಳಿಂದ ಮೃತಕಂಬಳವನ್ನು ತೆಗೆದುಕೊ. ನಾನು ನಮ್ಮೊಡೆಯನ ಸಮೀಪಕ್ಕೆ ಹೋಗುವೆನು.

(ಎಂದು ಹೊರಟುಹೋಗುವನು)

ರಾಜ—(ಮುಂದಕ್ಕೆ ಬರುವನು)

ತೆರೆಯಲ್ಲಿ—ಹಾ ಮಗನೆ ! ಎಲ್ಲಿರುವೆ ? ನನಗೆ ಪ್ರತ್ಯುತ್ತರವನ್ನು ಕೊಡು.

ರಾಜ—(ಕೇಳಿ ದುಃಖದೊಡನೆ) ಅಹಹ ! ಈ ಗೋಳಾಟವು ಕರ್ಣಕಠೋರವಾಗಿರುವುದಲ್ಲ !

(ಅನಂತರದಲ್ಲಿ ಮೇಲೆ ಹೇಳಿದಂತೆ ದುಃಖಪಡುತ್ತಾ ಶೈಬ್ಯೆಯು ಪ್ರವೇಶಿಸುವಳು)

ಶೈಬ್ಯೆ—ಹಾ ಮಗನೆ! ಎಲ್ಲಿರುವೆ! ನನಗೆ ಪ್ರತ್ಯುತ್ತರವನ್ನು ಕೊಡ (ಎಂದು ಮೂರ್ಛೆಹೋಗಿ ಮೆಲ್ಲನೆ ಎಚ್ಚೆತ್ತು ಕಣ್ಣೀರು ಬಿಡುತ್ತ ಹಾ! ವತ್ಸನೆ! ನಿನ್ನ ತಂದೆಯು ಮಂದಭಾಗ್ಯಳಾದ ನನ್ನನ್ನು ತೊರೆ ಹಾಗೆ ನೀನೂ ನನ್ನನ್ನು ತೊರೆವುದು ಯುಕ್ತವಲ್ಲ. (ಎಂದ ಮೂರ್ಛೆಬೀಳುವಳು)

ರಾಜ—(ಕೇಳಿ, ನೋಡಿ, ದುಃಖದೊಡನೆ) ಇವಳನ್ನೂ ಗಂಡ ತೊರೆದಿರುವನೆ? ಆಹ! ಆ ದುಷ್ಟದೈವಕ್ಕೆ ಯಾರಲ್ಲಿಯೂ ಕರುಣವಿಲ್ಲ.

ಶೈಬ್ಯೆ—(ತ್ವರೆಯಿಂದ ಮೂರ್ಛೆತಿಳಿದು ಎದ್ದು ಸುತವ್ಯಾಮೋಹದಿಂದ) ಇದೇನು? ನನ್ನ ಮಗು ಎಲ್ಲಿಹೋಯಿತು? (ನೋಡಿ ಆಲಿಂಗಿಸಿ) ವತ್ಸನೆ! ಏತಕ್ಕೆ ನನ್ನೊಡನೆ ಮಾತಾಡುವುದಿಲ್ಲ? ನಾನೊಬ್ಬಳೇ ಭಯಪಡುವೆನಲ್ಲ! ಈ ಶ್ಮಶಾನವು ನಿನ್ನ ಕಣ್ಣಿಗೆ ಘೋರವಾಗಿ ಕಾಣುವದಿಲ್ಲವೆ? ಏನು ಹೇಳುವೆ? "ಹುವ್ವನ್ನು ಉಪಾಧ್ಯಾಯರಿಗೋಸ್ಕರ ಕೊಯ್ಯುತ್ತಿರುವ ಕಾಲದಲ್ಲಿ ಹುತ್ತದಿಂದ ಒಂದು ದೊಡ್ಡ ಕೃಷ್ಣಸರ್ಪವು ಬಂದು ನನ್ನನ್ನು ಕಚ್ಚಿತು" ಎಂದು ಹೇಳುವೆಯೋ? ಆ ಕೃಷ್ಣಸರ್ಪವೆಲ್ಲಿ? ನನ್ನನ್ನೇಕೆ ಕಚ್ಚುವದಿಲ್ಲ? (ನಾಲ್ಕುಕಡೆಗೂ ನೋಡಿ). ಸುಳ್ಳುಸುಳ್ಳು! ಕೃಷ್ಣಸರ್ಪವೆಲ್ಲಿರುವುದು? ಹಾ ವತ್ಸನೆ! ಏಳುಏಳು. ಉಪಾಧ್ಯಾಯರಿಗೋಸ್ಕರ ಬಿಲ್ವಪತ್ರೆಗಳನ್ನೂ ದರ್ಭೆಗಳನ್ನೂ ತಂದುಕೊಡು. ಅವರ ಹೋಮ ಕಾಲವು ಮೀರಿಹೋಗುವುದು. ವಟುಗಳೆಲ್ಲರೂ ಹಿಂತಿರುಗಿ ನಿನ್ನನ್ನು ಹುಡುಕಿಕೊಂಡು ಬಂದಾರು. (ಎಂದು ಎಬ್ಬಿಸುವುದಕ್ಕೆ ಯತ್ನಿಸಿ ಅತಿ ದುಃಖದಿಂದ ಕೂಡಿ) ಇದೇನು? ನಿಜವಾಗಿಯೂ ಮಂದಭಾಗ್ಯಳಾದ ನನ್ನನ್ನು ತೊರೆದುಬಿಟ್ಟೆಯಾ? ಹಾ ಕೆಟ್ಟೆನು (ಎಂದು ಮೂರ್ಛೆಬೀಳುವಳು.)

ರಾಜ—(ದುಃಖದೊಡನೆ) ಹಾ ! ಕಷ್ಟಕಷ್ಟ. ನಿಷ್ಕರುಣನಾದ ಆ ದುಷ್ಟದೈವಕ್ಕೂ ಈ ಪ್ರಲಾಪಗಳು ದುಃಖಕರಗಳಾಗಿರುವಂತೆಯೇ ತೋರುವುವು.

ಶೈಬ್ಯೆ—(ಮೂರ್ಛೆತಿಳಿದೆದ್ದು ನಿಂದೆಯೊಡನೆ) ಹಾ ! ಆರ್ಯಪುತ್ರನೆ ! ಇದೊ.ನಿನ್ನ ಪ್ರೇಮಪುತ್ರನ ದುರವಸ್ಥೆಯನ್ನು ನೋಡು. ಆಹ ! ನಿರ್ಘೃಣನೆ ! ಇಂಥಾ ಕಾಲದಲ್ಲಿಯೂ ನೀನು ನಿಶ್ಚಿಂತನಾಗಿ ಎಲ್ಲಿ ರುವೆ ? ಈ ಮೊಗುವನ್ನು ಪ್ರಯತ್ನಪೂರ್ವಕವಾಗಿ ಕಾಪಾಡ ಬೇಕೆಂದು ನೀನೆ ನನಗೆ ಹೇಳಲಿಲ್ಲವೆ ? ಪರಮಪಾಪಿಯಾದ ನಾನು ಅದನ್ನು ನೆರವೇರಿಸಲಿಲ್ಲ.

ರಾಜ—(ಅತಿಕರುಣದೊಡನೆ) ಆಹ ! ಈ ಪ್ರಲಾಪಗಳಾದರೋ ಮರ್ಮ ಭೇದಕಗಳಾಗಿರುವುವು.

ಶೈಬ್ಯೆ—(ಮಗನ ಅವಯವಗಳನ್ನೆಲ್ಲಾ ನೋಡಿ) ಎಲೈ ಮಗನೆ ! ನಿನ್ನ ಈ ಹಣೆಯಾದರೊ ಬಾಲಚಂದ್ರನಂತೆ ಮನೋಹರವಾಗಿರುವುದು. ದಟ್ಟವಾದೆವೆಗಳಿಂದಲೂ ಕೆಂಪಾದ ಕಟಾಕ್ಷದಿಂದಲೂ ಕೂಡಿರುವ ನಿನ್ನೀ ನೇತ್ರಗಳಾದರೊ ಸ್ವಭಾವಶುಭ್ರಗಳಾಗಿರುವುವು. ಒತ್ತಾಗಿ ಸೇರಿರುವ ಅಸ್ಥಿಪಂಜರದಿಂದ ಶೋಭಿಸುವ ಈ ನಿನ್ನ ವಕ್ಷಸ್ಥಳವಾ ದರೋ ಕಠಿನವಾಗಿಯೂ ವಿಸ್ತಾರವಾಗಿಯೂ ಇರುವುದು. ಇಂಥಾ ಶರೀರದಲ್ಲಿ ಪಾಪಿಯಾದ ಯಮನು ಯಾವ ದುರ್ಲಕ್ಷಣಗಳನ್ನು ಕಂಡನೊ ಅಥವಾ ಸತ್ಯಸಂಧನಾದ ಆರ್ಯಪುತ್ರನ ನಡತೆಯಲ್ಲಿಯಾ ಗಲಿ ಮಂದಭಾಗ್ಯಳಾದ ನನ್ನ ನಡತೆಯಲ್ಲಿಯಾಗಲಿ ಆ ಯಮನು ತಪ್ಪನ್ನೇನಾದರೂ ಕಂಡನೊ ? ಸರ್ವಥಾ ಧರ್ಮವು ಅಕಾರಣವು. ಶಾಸ್ತ್ರಗಳನ್ನು ನಂಬಬಾರದು. ಶಾಸ್ತ್ರಜ್ಞರೆಲ್ಲರೂ ಅನೃತವಾದಿಗಳು. ಏತಕ್ಕೆಂದರೆ, ಬಹು ಸಮರ್ಥರಾಗಿರುವ ಶಾಸ್ತ್ರಜ್ಞರೇ ನನ್ನೊಡನೆ

"ಈ ನಿನ್ನ ಮಗನು ಚಕ್ರವರ್ತಿಯಾಗುವನು" ಎಂದು ಬಹ ನಂಬಿಕೆಯಿಂದ ಹೇಳಿರಲಿಲ್ಲವೆ? ಅದೆಲ್ಲವು ಪಾಪಿಯಾದ ನನ ದೌರ್ಭಾಗ್ಯದಿಂದ ಸುಳ್ಳಾಯಿತಲ್ಲವೆ?

ರಾಜ—(ಊಹಿಸಿ) ಇದೇನು ಈ ಕಥೆಯು ನನ್ನ ಸಂಬಂಧವುಳ್ಳದ್ದಾಗಿ ರುವಂತೆ ತೋರುವುದು? (ಚೆನ್ನಾಗಿನೋಡಿ ಕಣ್ಣೀರುಬಿಟ್ಟು) ಆಹ! ಇದೇನು?

ವೃ॥ ಕೊಡೆವಿಡಿದಂತೆ ತೋರ್ಪ್ಪ ತಲೆ ನೀಳ್ದ ಲಲಾಟಮುಮೊಳ್ಳ
ಲರ್ದ ಕ। ಣ್ಣಡಿಯೊಳೆ ಚಕ್ರರೇಖೆ ಕರದೊಳ್ ಕಮಲಂ ಕಡು
ನೀಳ್ದ ತೋಳ್ಗಳುಂ॥ ಬಡನಡು ಪೇರುರಂ ಪೃಥುನಿತಂಬ
ಮುಮಿಾನೃಪಚಿಹ್ನಮೆಲ್ಲಮಂ। ಬಿಡದೆ ವಿಭಾವಿಸಲ್ ನೃಪ
ಕುಲಾಂಕುರಮೇ ದಿಟಮಿಾಕಿಶೋರಕಂ॥

(ಸ್ಮರಣೆಯನ್ನು ಅಭಿನಯಿಸಿ ದುಃಖದೊಡನೆ)

ಹಾ ಹಾ! ಕಷ್ಟ ಕಷ್ಟ! ನನ್ನ ಮಗನಾದ ರೋಹಿತಾಶ್ವನು ಇದೇ ವಯಸ್ಸಿನವನು. ಇವನನ್ನು ನೋಡಿದರೆ ಅವನಂತೆಯೆ ತೋರುವು ದಲ್ಲಾ! ಅಥವಾ ವತ್ಸನಿಗೆ ಅಮಂಗಳನಾಗದಿರಲಿ.

ಶೈಬ್ಯೆ—(ಆಕಾಶವನ್ನು ನೋಡಿ ನಿಂದಾಪೂರ್ವಕವಾಗಿ) ಎಲೈ ಪೂಜ್ಯ ನಾದ ವಿಶ್ವಾಮಿತ್ರನೆ! ಈಗ ನೀನು ಕೃತಾರ್ಥನಾದೆ.

ರಾಜ—(ಅತಿ ದುಃಖದಿಂದ) ಇದೇನು? ಈಕೆ ಪೂಜ್ಯರಾದ ವಿಶ್ವಾ ಮಿತ್ರರನ್ನು ನಿಂದಿಸುವಳು? ಸರ್ವಥಾ ಈಕೆ ಹೇಳುವ ಮಾತಿನಲ್ಲಿ ವ್ಯತ್ಯಾಸವೇನೂ ಕಾಣಬರುವುದಿಲ್ಲ. ಆದಕಾರಣ ಇವಳಲ್ಲಿ ಪರಸ್ತ್ರೀ ಯೆಂಬ ಅನುಮಾನವೇಕೆ? ಇವಳು ಶೈಬ್ಯೆಯೇ ಸರಿ. (ದುಃಖ ದೊಡನೆ) ಇನ್ನೂ ಸಂದೇಹವೇ? ಏತಕ್ಕೆಂದರೆ—

ವೃ॥ ನುಡಿಬಡವಾಗಿ ತೋರಿದೊಡಮೇನದೆ ಮಂದ್ರಮನೋಹರ
ಸ್ವರಂ । ಕಡುಕೆದರಿರ್ದೊಡಂ ಮುಡಿಯುಮಂತದೆ ಭೃಂಗವಿ
ನೀಲಕೋಮಲಂ ॥ ಒಡನರಿಯಲ್ಕಸಾಧ್ಯಮೆನಿಸಿರ್ದೊಡ
ಮಂತದುವೇ ಕೃಶಾಂಗಮಿಾ । ಮಡದಿಯ ಮೆಯ್ಯೊಗರ್
ಪಳೆಯ ಚಿತ್ರದವೊಲ್ ಕುರುಪಿಂದೆ ಕಾಣ್ಬುಗುಂ ॥

ಹಾ ವತ್ಸ ರೋಹಿತಾಶ್ವನೆ ! ಎಲ್ಲಿರುವೆ ? ನನಗೆ ಪ್ರತ್ಯುತ್ತರವನ್ನು ಕೊಡು. (ಎಂದು ಮೂರ್ಛೆಬೀಳುವನು. ಮೆಲ್ಲನೆ ಎಚ್ಚತ್ತು ರೋಹಿತಾಶ್ವನ ಮುಖವನ್ನು ನೋಡಿ) ಹಾಹಾ ! ಮಂದಭಾಗ್ಯನಾದ ನನಗೆ ಹಲ್ಲು ಮೊಳೆಯದ ನಿನ್ನ ಶೈಶವವು ಸ್ಮರಣೆಗೆ ಬರುವುದು.

ಕಂ॥ ಮಂಗಳಧೂಪವನಿಕ್ಕುತೆ ।
ಸಿಂಗರಿಸಿದ ಸೂಕ್ಷ್ಮಕೇಶಸಂಹತಿಯಿಂದಂ ॥
ಭೃಂಗತತಿಲುಲಿತ ಸರಸಿಜ ।
ಭಂಗಿಯನಾಂತಿರ್ದ ವದನಮೆಸೆಯದಿದೀಗಳ್ ॥

ಹಾ ! ವತ್ಸ ರೋಹಿತಾಶ್ವನೆ ! ಹಾ ತಪನಕುಲಬಾಲಪ್ರವಾಳನೆ ! ಹಾ ! ಹರಿಶ್ಚಂದ್ರಹೃದಯಾನಂದಕನೆ ! ಅತಿಕೋಪಿಯಾದ ವಿಶ್ವಾಮಿತ್ರನ ಋಣವನ್ನು ತೀರಿಸುವುದರಲ್ಲಿ ನೀನೇ ಮುಖ್ಯಭಾಗಿಯಲ್ಲವೆ ?

ವೃ॥ ಎರೆದಗ್ಗಿಯದೆ ರಾಜಭೋಗ್ಯಮೆನಿಪಾ ಭೋಗಂಗಳಂ
ಪೊರ್ದದಾ । ದರದಿಂದಧ್ವರಮಂ ನೆಗಳ್ಚದೆ ವಲಂ ಸತ್ಕೀರ್ತಿಯಂ
ಸಾರ್ಚದೂ ॥ ಷರಭೂಗರ್ಭನಿರೂಢಮಪ್ಪ ವಟಬೀಜಾಂಕೂ
ರಮಂ ಪೋಲ್ತು ಸ । ತ್ವರದಿಂದೇರಿದೆಯಲ್ತೆ ಹಾ ಸುತನೆ ನೀಂ
ತತ್ಸ್ವರ್ಗಸೋಪಾನಮಂ ॥

ಇದಲ್ಲದೆ ಎಲೈ ವತ್ಸನೆ !

ವೃ॥ ಸಿರಮುಭಿಷೇಕತೀರ್ಥಜಲದಿಂ ಕರಮುಂ ನೆರೆ ದಾನಧಾರೆಯಿಂ ।
ದರಿಮುಕುಟಾಗ್ರಘರ್ಷಣದಿನೀ ಚರಣಂ ಶುಚಿಯಾದುದಿಲ್ಲ ಭಾ ॥

ಸುರಭುಜಮುಂ ಧನುರ್ಗುಣಕಿಣಾಂಕಿತಮಾದುದುಮಿಲ್ಲಮಿನ್ನು ।
ಮೀಪರಿಯೊಳಿಪುಟ್ಟಿಪಾಡಿವದಚಂದ್ರನವೋಲ್ ಸುತನೀನಡಂಗಿದೈ ॥

ಈಗ ಗೋಳಾಡುತ್ತಿರುವ ದೇವಿಗೆ ನಾನು ಹ್ಯಾಗೆತಾನೇ ಕಾಣಿಸಿಕೊಳ್ಳಲಿ ? ಮೊದಲೇ ಪುತ್ರಶೋಕಪೀಡಿತಳಾಗಿರುವ ಇವಳಿಗೆ ನನ್ನ ಈ ದುರವಸ್ಥೆಯನ್ನು ತೋರ್ಪಡಿಸಿಕೊಂಡು ಇನ್ನೂ ದುಃಖವನ್ನು ಹೆಚ್ಚಿಸುವುದು ಸರಿಯಲ್ಲ. (ತನ್ನನ್ನು ನೋಡಿಕೊಂಡು) ಎಲೆ ದುರಾತ್ಮನಾದ ನೀಚ ಹರಿಶ್ಚಂದ್ರನೆ ! ಇನ್ನೂ ಸಾಯುವದಿಲ್ಲವೆ ? ಇದಕ್ಕಿಂತಲೂ ನಿನಗಿನ್ನೇನಾಗಬೇಕು ? (ಎಂದು ಮೂರ್ಛೆಬಿದ್ದು, ಮೆಲ್ಲನೆ ಎಚ್ಚೆತ್ತು) ಎಲೆ ಪಾಪಿಯಾದ ಹರಿಶ್ಚಂದ್ರನೆ ! ನರಕಯಾತನೆಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಈ ನಿನ್ನ ನೀಚಪ್ರಾಣಗಳನ್ನು ಇನ್ನೂ ತೊರೆಯದೆ ಇರುವೆಯಾ ? ಛೀ ! ಮೂರ್ಖನೆ !

ಕಂ॥ ಕಲುಷಾಂಧತಮದೊಳೀಗಳೆ ।
ಮುಳುಗಿರ್ಪ್ಪುದೆ ನೋಡೆ ನಿನಗೆ ಪರಮಶ್ರೇಯಂ ॥
ವಿಳಸತ್ತನಯಮುಖೇಂದುವ ।
ನುಳಿದೀ ದಿಕ್ತಟವನಹಹ ನೋಳ್ಪುದರಿಂದಂ ॥

ಇದಲ್ಲದೆ,

ಸ್ವಾಗತಾ॥ ದಾರುಣಕ್ರಕಚಭೈರವ ವೀಚೀ ।
ರೌರವಾದಿನರಕಾಳಿಯೊಳೆಲ್ಲಂ ॥
ಘೋರಯಾತನೆಗಳಿರ್ದ್ಪೊಡಮಾ ದು ।
ರ್ವಾರಪುತ್ರವಿರಹಕ್ಕೆಣೆಯಲ್ಲಂ ॥

ಆದುದರಿಂದ ಇನ್ನು ತಡೆಮಾಡಬಾರದು. ಇರಲಿ, ಈ ಭಾಗೀರಥೀ ತೀರದಲ್ಲಿ ಶೋಕಾಗ್ನಿಯಿಂದ ಬೇಯುತ್ತಿರುವ ನನ್ನನ್ನು ಪ್ರಾಣಪರಿತ್ಯಾಗದಿಂದ ಸುಖಪಡಿಸುವೆನು. (ಎಂದು ಮೆಲ್ಲನೆ ಮುಂದಕ್ಕೆ ನಡೆದು, ಸ್ಮರಣೆಯನ್ನು ಅಭಿನಯಿಸಿ, ಬೆದರಿ ;) ಆಹ ! ಇದೇನು ?

ನಾನು ಪರಾಧೀನನೆಂಬುವುದನ್ನು ಮರೆತೆನಲ್ಲಾ ! (ಆಲೋಚಿಸಿ ದುಃಖದೊಡನೆ) ಹಾ ಕಷ್ಟಕಷ್ಟ !

ಕಂ॥ ಮೃತಿಯಾಂತು ತಳೆವರಲೆ ನಿ ।
ರ್ವೃತಿಯಂ ಸ್ವಾಧೀನವೃತ್ತರೆನಿಸಿದ ಧನ್ಯರ್ ॥
ಕ್ಷಿತಿಯೊಳಗಾತ್ಮಕ್ರಯದಿಂ ।
ದತಿಪಾಪಿಗಳೆನಿಸಿದರ್ಗ್ಗೆ ಮೃತಿಯುಮಲಭ್ಯಂ ॥

(ದುಃಖವನ್ನು ನಟಿಸಿ) ಅಹಹ ! ಮಂದಭಾಗ್ಯನಾದ ನನಗೆ ಪ್ರಾಣಪರಿತ್ಯಾಗಕ್ಕೂ ಅವಕಾಶವಿಲ್ಲವಲ್ಲ ! ಇರಲಿ.

ಕಂ॥ ಇಂತತಿದಾರುಣವೆನಿಸಿದ ।
ಸಂತಾಪಕೆ ಧೈರ್ಯಮೇ ಪ್ರತಿಕ್ರಿಯೆಯಲ್ತೇ ॥
ಇಂತೀಗಳೆರೆಯನಾಜ್ಞೆಯ ।
ನಂತರಿಸಿದೊಡದುವೆ ಘೋರದೋಷಮೆನಿಕ್ಕುಂ ॥

ಆದುದರಿಂದ ಈಗ ಸಹಿಸಲಶಕ್ಯವಾದ ದುಃಖಾಗ್ನಿಯಲ್ಲಿ ಬೇಯುತ್ತಲಿರುವ ಈ ನನ್ನನ್ನು ವಿವೇಕಜಲದಿಂದ ಸಮಾಧಾನಪಡಿಸಿಕೊಂಡು ಒಡೆಯನಾಜ್ಞೆಯಂತೆ ನಡೆಯುವೆನು. ಏಕೆಂದರೆ—

ವೃ॥ ಒದವಿದನಾದಿವಿಭ್ರಮಗಳಿಂ ನಡುವೊಳ್ ಸ್ಫುಟಮಸ್ಫುಟಂಕರಂ।
ತುದಿಮೊದಲೊಳ್ ಜಗತ್ಪ್ರಕೃತಿಯೆಂಬುದು ಪಂಚತೆ ಪಂಚ
ರೂಪಮು ॥ ಣ್ಮಿದ ಭವವಾರ್ಧಿವೀಚಿತತಿಯಿಂದೆ ವಿಯೋಗಮೆ
ಯೋಗಸನ್ನಿಭಂ । ಪುದಿದ ವಿಮೋಹದಿಂ ಪೆರತನಾನರಿಯೆಂ
ಸಲೆಶೋಕಹೇತುವಂ ॥

ಶೈಬ್ಯೆ—(ಮೂರ್ಛೆಯಿಂದೆಚ್ಚೆತ್ತು) ಇದೇನು ? ಇನ್ನೂ ಈ ಪ್ರಾಣಗಳು ನನ್ನನ್ನು ಬಿಟ್ಟುಹೋಗಲಿಲ್ಲವೆ ? ಈಗ ಮಾಡತಕ್ಕದ್ದೇನು ; (ಕಣ್ಣೀರನ್ನು ಒರಸಿಕೊಂಡು) ಇರಲಿ ಶ್ಮಶಾನದಲ್ಲಿರುವ ಈ ಮರಕ್ಕೆ ನೇಣುಹಾಕಿಕೊಂಡು ಪ್ರಾಣಬಿಡುವೆನು. (ಹಗ್ಗವನ್ನು ತೆಗೆದುಕೊಳ್ಳುವಳು)

ರಾಜ—(ತ್ವರೆಯಿಂದ) ನಾನು ಬದುಕಿದ್ದಕ್ಕೆ ಇದೊಂದು ಫಲವು ಬೇರೆ ಸಂಭವಿಸಿತು. ಮಂದಭಾಗ್ಯನಾದ ನಾನು ಈಗ ಮಾಡತಕ್ಕದ್ದೇನು? (ಆಲೋಚಿಸಿ) ಇರಲಿ! ("ವೃತಿಯಾಂತು" ಎಂಬ ಪದ್ಯವನು ಗಟ್ಟಿಯಾಗಿ ಹೇಳುವನು.)

ವೃ॥ ಕ್ಷಿತಿಯೊಳ್ಪುಟ್ಟಿದ ಜೀವರಾಶಿಯನಿತುಂ ತಂತಮ್ಮ ಸತ್ಕರ್ಮಸಂ। ತತಿಯಿಂದಂ ಪರಲೋಕಮಂ ಪಡೆದು ತಾನಾನಂದದಿಂದಿರ್ಕುಮಾ॥ ಸತಿಯಂ ವಿಕ್ರಯಿಸುತ್ತ ತನ್ನೊಡಲನನ್ಯರ್ಗೀಡುಗೆಯ್ದೆನ್ನದು। ಸ್ಥಿತಿಯಂ ನೋಡಿ ನಗುತ್ತಮಿರ್ಪರಕಟಾ ಲೋಕಾಂತರಾವಾಸಿಗಳ್॥

ಶೈಬ್ಯೆ—(ಕೇಳಿ, ಭಯದೊಡನೆ ಕೂಡಿ ಹಗ್ಗವನ್ನು ಬಿಸುಟು) ಛೀ! ಛೀ! ಮರಣಮಹೋತ್ಸವಾಸಕ್ತಚಿತ್ತಳಾದ ನಾನು ಪರಾಧೀನಳೆಂಬುದನ್ನು ಮರೆತಿದ್ದೆನು. ಮತ್ತೊಂದು ಜನ್ಮದಲ್ಲಿಯೂ ಈ ದಾಸಭಾವವನ್ನು ಅನುಭವಿಸಬೇಕಾಗುತ್ತಿತ್ತಲ್ಲಾ. (ಮೇಲೆನೋಡಿ ನಿಟ್ಟುಸುರುಬಿಟ್ಟು) ಎಲೈ ಪೂಜ್ಯವಾದ ದೈವವೆ! ನಿನ್ನಿಂದ ನಾನು ಸಾಯುವುದಕ್ಕೂ ಇಲ್ಲದಹಾಗಾಯಿತಲ್ಲ. ಹಾ! ಹಾ! ಮಂದಭಾಗ್ಯಳಾದ ನಾನು ಕೆಟ್ಟೆನು. (ಎಂದು ನೆಲದಮೇಲೆಬಿದ್ದು ಬೇಗನೆ ಎದ್ದು ಕಣ್ಣೀರನ್ನು ಒರಸಿಕೊಂಡು) ಪ್ರತೀಕಾರವಿಲ್ಲದ ಈ ದುರವಸ್ಥೆಗಾಗಿ ಎಷ್ಟು ಅತ್ತರೇನು? ಆದುದರಿಂದ ಕಾಲೋಚಿತನಾಗಿ ಈ ಶಿಶುವನ್ನು ಸಂಸ್ಕರಿಸಿ ಬಳಿಕ ಈ ನನ್ನ ದಾಸ್ಯಕ್ಕೆ ಯೋಗ್ಯವಾದ ಶುಶ್ರೂಷೆಯಿಂದ ಆ ಬ್ರಾಹ್ಮಣನನ್ನು ಆರಾಧಿಸುತ್ತ ಪುನರ್ಜನ್ಮವಿಲ್ಲದಂತೆ ಮಾಡಿಕೊಳ್ಳುವದಕ್ಕಾಗಿ ವ್ರತೋಪವಾಸನಿಯಮಗಳಿಂದ ಈ ಶರೀರವನ್ನು ದಂಡಿಸುವೆನು. (ಎಂದು ಚಿತಿಯನ್ನು ಬಿಟ್ಟುವಳು)

ರಾಜ—(ನೋಡಿ ದುಃಖದಿಂದ) ಆಹ! ಈಕೆಯು ಕಾಲೋಚಿತ ಕೃತ್ಯಕ್ಕೆ

ಉಪಕ್ರಮಿಸಿದಳು. (ಸ್ವಗತ) ದೇವಿ! ಭಾಪು! ಭಾಪು! ಈ ದುರವಸ್ಥೆಯಲ್ಲಿಯೂ ತಪ್ಪಿ ನಡೆಯಲಿಲ್ಲ. ಆದುದರಿಂದ ನಾನು ಕೂಡ ಅಲ್ಲಿಗೆ ಹೋಗಿ ಒಡಯನಾಜ್ಞೆಯನ್ನು ನೆರವೇರಿಸುವೆನು. (ಎಂದು ಸಮೀಪಕ್ಕೆ ಬಂದು ದುಃಖಲಜ್ಜೆಗಳೊಡನೆ) ಎಲೆ ದೇವಿ! (ಎಂದು ಅರ್ಧೋಕ್ತಿಯಲ್ಲಿ ಮುಖವನ್ನು ಮುಚ್ಚಿಕೊಳ್ಳುವನು) ಎಲೆ ಮಹಾತ್ಮಳೆ!

ಕಂ॥ ತಿಳಿಸದೆನಗೀವ ಮೃತಕಂ ।
ಬಳಮಂ ತಾಂ ಕುಡದೆ ಜನಮುದಾರಾದೊಡಮೀ ॥
ಇಳೆಯೊಳ್ ಶ್ಮಶಾನಯೋಗ್ಯಂ ।
ಗಳೆನಿಪ ಕಜ್ಜಗಳನುಜ್ಜುಗಿಸದಿರವೇಳ್ಕುಂ ॥

ಆದುದರಿಂದ ಮೃತಕಂಬಳವನ್ನು ಕೊಡು (ಎಂದು ಕಣ್ಣೀರನ್ನು ತಡೆದುಕೊಂಡು ಕೈನೀಡುವನು)

ಶೈಬ್ಯೆ—(ಭಯದೊಡನೆ) ಎಲೈ ಭದ್ರಕನೆ! ದೂರದಲ್ಲಿರು. ಕೊಡುವೆನು ಸ್ವಲ್ಪತಾಳು.

ರಾಜ---(ಲಜ್ಜೆಯನ್ನು ಅಭಿನಯಿಸುವನು)

ಶೈಬ್ಯೆ—(ಮಗುವಿನ ಶರೀರದಿಂದ ವಸ್ತ್ರವನ್ನು ತೆಗೆದುಕೊಡುವಕಾಲದಲ್ಲಿ ರಾಜನ ಕೈಯನ್ನು ನೋಡಿ ಆಶ್ಚರ್ಯದೊಡನೆ ತನ್ನಲ್ಲಿ ತಾನು)

ಇದೇನು? ಚಕ್ರವರ್ತಿಲಕ್ಷಣದಿಂದ ಕೂಡಿರುವ ಈ ಹಸ್ತವು ಇಂತಹ ಕೆಲಸಕ್ಕೆ ಪ್ರವರ್ತಿಸಿರುವುದು? (ಸಮೀಪಕ್ಕೆ ಬಂದು ಅವಯವಗಳನ್ನೆಲ್ಲ ನೋಡಿ ಗುರುತು ಹಿಡಿದು)

ಇದೇನು? ಆರ್ಯಪುತ್ರನಂತೆ ತೋರುವುದು? (ತ್ವರೆಯಿಂದ) ಹಾ! ಆರ್ಯಪುತ್ರನೆ! ರಕ್ಷಿಸು! ರಕ್ಷಿಸು! (ಎಂದು ಬೀಳುವಳು)

ರಾಜ—(ಹಿಂದಕ್ಕೆ ಸರಿದು) ಎಲೆ ದೇವಿ! ಚಂಡಾಲದಾಸ್ಯದಿಂದ ದೂಷಿತನಾದ ನನ್ನನ್ನು ಮುಟ್ಟಬೇಡ. ಸೈರಿಸು. ಸೈರಿಸು.

ಶೈಬ್ಯೆ—(ಸಮಾಧಾನ ಮಾಡಿಕೊಂಡು) ಹಾ! ಹಾ! ಇದೇನಿದು!

ರಾಜ—ದೇವಿ ! ಮತ್ತೇನು ? ಪೂರ್ವಜನ್ಮದಲ್ಲಿ ಮಾಡಿದ ದುಷ್ಕರ್ಮಗಳ ಫಲವು, ಆದುದರಿಂದ ಅಳಬೇಡ. ಅದನ್ನು ಕೊಡು.

ಶೈಬ್ಯೆ—(ದುಃಖದಿಂದ ಕೊಡುವಳು.)

(ಆಕಾಶದಿಂದ ಪುಷ್ಪವೃಷ್ಟಿಯಾಗುಮವುದು. ಇಬ್ಬರೂ ಆಶ್ಚರ್ಯದೊ ನೋಡುವರು)

ರಾಜ—ಇದೇನು ! [illegible] ಪುಷ್ಪವೃಷ್ಟಿ [illegible]

(ತೆರೆಯಲ್ಲಿ)

[illegible] ದ್ಯ [illegible] ನಾನಂ ನೇ
ಣದ್ಯ [illegible] ಕ್ಷಾಂ [illegible] ರ್ಯಂ ತಾ ॥
ನದ್ಯ ತಮಿಾಜ್ಞಾನಮು [illegible]
ತ್ಯದ್ಯ ತಮಿಾ ಸತ್ಯಮುಕ್ತೆ ಭೂಪೋತ್ತಮುನಾ ॥

ಶೈಬ್ಯೆ—ಇದುಯಾರು ! ಆರ್ಯಪುತ್ರನ ಗುಣಸಲ್ಲಾಪದಿಂದ ನನ್ನಮನಸನ್ನು ಸಂತೋಷಪಡಿಸುತ್ತಿರುವರು ? ಅಥವಾ ಆರ್ಯಪುತ್ರನಿಗೆ ಇಂತಹ ದುರವಸ್ಥೆ ಪ್ರಾಪ್ತವಾಗಿರುವಾಗ ಗುಣಸಲ್ಲಾಪವನ್ನು ಕೇಳಿ ಪ್ರಯೋಜನವೇನು ? ಸರ್ವಥಾ ಧರ್ಮವು ಕಾಪಾಡತಕ್ಕದ್ದಲ್ಲ. ಎಲ್ಲವೂ ಅರಣ್ಯರೋದನವೇ ಸರಿ. ತತ್ವಜ್ಞಾನವೂ ಅಂಧಕಾರನರ್ತನದಂತಾಯಿತು.

(ಧರ್ಮಪುರುಷನು ಪ್ರವೇಶಿಸುವನು)

ಧರ್ಮಪುರುಷ—ಎಲೌ ಮಹಾಪತಿವ್ರತೆಯೆ ! ಮಹಾರಾಜ ಹರಿಶ್ಚಂದ್ರನೆ! ನಾನು ಕಾಪಾಡತಕ್ಕವನಲ್ಲವೆ ? ನೋಡು.

ವೃ॥ ಅನಿಬರ್ ಪಾರ್ಥಿವರೀ ಧರಾವಲಯದೊಳ್ ಸದ್ದಾನಧರ್ಮಾಸ್ಪದಿಯಾ । ಗೆನಿತಾನುಂ ಸುಕೃತಂಗಳಂ ನೆಗಳ್ದೊಡಂ ದುಷ್ಪ್ರಾಪಮಾಗಿರ್ಪುದೆಂ ॥ ದೆನೆ ಯೋಗೀಂದ್ರಸುಗಮ್ಯಮವ್ಯಯಮೆನಿಪ್ಪಾ ಬ್ರಹ್ಮಸಾಯುಜ್ಯಮಂ । ನಿನಗೀಗಳ್ ದಯೆಗೆಯ್ವೆನೆಂಬ ನಲವಿಂ ದೆಯ್ತಂದೆ ನಾಂ ಭೂಪತೀ ॥

ಆದುದರಿಂದ ಸಾಕು ದುಃಖಿಸಬೇಡ. ಎಲೆ ವತ್ಸ ರೋಹಿತಾಶ್ವನೆ! ಏಳು, ಏಳು.

ರಾಜ—(ನೋಡಿ ಸಂತೋಷದೊಡನೆ) ಇದೇನು ಪೂಜ್ಯನಾದ ಧರ್ಮನೆ? ಪೂಜ್ಯನೆ! ನಮಸ್ಕರಿಸುವೆನು.

ಶೈಬ್ಯೆ—ಪೂಜ್ಯನೆ! ನಮಸ್ಕರಿಸುವೆನು.

ರೋಹಿತಾಶ್ವ—(ಮೆಲ್ಲನೆ ಕಣ್ಣು ತೆರೆಯುವನು.)

ಧರ್ಮ—ಕಂ॥ ಚೇತರಿಸೆಲೆ ವತ್ಸನೆ ನಿಜ।
ತಾತನ ಪರಮಪುಣ್ಯದಿಂದೆ ಪಾಲಿತನಾದೈ॥
ಭೂತಲಮಂ ಪಾಲಿಸುನೀ।
ನಾತ್ಮಾನಂ ಪೋಗಿಬಂದ ಹರಣಗಳಿಂದಂ॥

ರೋಹಿತಾಶ್ವ—(ಬೇಗನೆ ಎದ್ದು) ಅಪ್ಪ! ಇದೇನು? ಇಲ್ಲಿಗೆ ನೀನು ಏತಕ್ಕೆ ಬಂದೆ? ನಿನ್ನನ್ನು ಯಾರು ಕರೆದುಕೊಂಡು ಬಂದರು.

ಶೈಬ್ಯೆ—ವತ್ಸನೆ! ಇನ್ನು ಯಾರು? ನಮ್ಮ ಭಾಗ್ಯಗಳು.

ಧರ್ಮ—ಎಲೈ ವತ್ಸನೆ! ಬ್ರಹ್ಮಲೋಕಕ್ಕೆ ಅತಿಥಿಯಾಗಿರುವ ನಿನ್ನ ತಂದೆಯನ್ನು ನೋಡು.

ರೋಹಿ—ತಂದೆಯೆ! ರಕ್ಷಿಸು! ರಕ್ಷಿಸು! (ಎಂದು ತಬ್ಬಿಕೊಳ್ಳುವುದಕ್ಕೆ ಹೋಗುವನು)

ರಾಜ—(ಹಿಂದಕ್ಕೆ ಸರಿದು) ಚಂಡಾಲದಾಸ್ಯದಿಂದ ದೂಷಿತನಾಗಿರುವ ನನ್ನನ್ನು ಮುಟ್ಟಬೇಡ, ಮುಟ್ಟಬೇಡ.

ಧರ್ಮ—ರಾಜನೆ! ಸಾಕು. ಸಾಕು. ಈ ಕೃಪಣಾಲಾಪಗಳನ್ನು ಬಿಡು. ಕೇಳು.

ವೃ॥ ವನಿತಾಸಂಯುತನಾಗಿ ನಿನ್ನಸತಿಯುಂ ಕೊಂಡೊಯ್ದ ವಿಪ್ರೇಂದ್ರ
ನಾರ್ । ನಿನತಾರಾಜ್ಯಮುಮೆಲ್ಲ ವಿಕ್ರಯಿಸಿ ನಿನ್ನಂ ಕೊಂಡ
ಚಂಡಾಲನಾ ॥ ರನಿತುಂ ತತ್ವಮನೆಲ್ಲಮಂ ತಿಳಿವವೊಲ್ ತದ್ದಿವ್ಯ
ನೇತ್ರಂಗಳಂ । ನಿನಗೀಗಳ್ ದಯೆಗೆಯ್ವೆನಾನೊಲವಿನಿಂ ಕೈ
ಕೊಳ್ಳಿದಂ ಭೂಪತೀ ॥

ಯಾರಲ್ಲಿ ಪರಿಜನರು! ವಿಮಾನ! ವಿಮಾನ!

ಪುರುಷ—(ಪ್ರವೇಶಿಸಿ) ಪೂಜ್ಯನಾದ ಧರ್ಮನೆ! ಏನು ಅಪ್ಪಣೆ?

ಧರ್ಮ—ಇತ್ತ ಬಾ!

ಪುರುಷ—ಇದೊ ಬಂದಿರುವೆನು.

ಧರ್ಮ—ಮಹಾರಾಜನೆ ವಿಮಾನವನ್ನು ಏರಿ ದಿವ್ಯಚಕ್ಷುಸ್ಸುಗಳಿಂ ನೋಡಿ ಇದರ ನಿಜಾಂಶವನ್ನೆಲ್ಲಾ ತಿಳಿದುಕೊ.

ರಾಜ—ಪೂಜ್ಯರ ಅಪ್ಪಣೆ! (ಎಂದು ವಿಮಾನವನ್ನು ಏರಿ ಉತ್ಕೃಷ್ಟವಾದ ವೇಷವನ್ನು ತಳೆದು ಧ್ಯಾನಿಸಿ) ಆಹ! ಪ್ರಮಾದ! ಪ್ರಮಾದ! ವಿದ್ಯಾಪ್ರಾಪ್ತಿಯಿಂದ ಸಂತುಷ್ಟನಾದ ವಿಶ್ವಾಮಿತ್ರನು ನಮ್ಮ ಮಂತ್ರಿಗಳಧೀನದಲ್ಲಿಯೇ ರಾಜ್ಯವನ್ನಿಟ್ಟಿರುವನು.

ಧರ್ಮ—ಎಲೈ ರಾಜನೆ! ನಿನ್ನ ಸತ್ಯವನ್ನು ಪರೀಕ್ಷಿಸುವುದಕ್ಕಾಗಿಯೆ ಈ ಮಹರ್ಷಿಯು ಹೀಗೆ ಮಾಡಿದನೆ ಹೊರತು ರಾಜ್ಯಾಭಿಲಾಷೆಯಿಂದಲ್ಲ. ಚಿಂತಿಸಬೇಡ. ಇದನ್ನೆಲ್ಲಾ ಚೆನ್ನಾಗಿ ನೋಡು.

ರಾಜ—(ಪುನಃ ಧ್ಯಾನವನ್ನು ನಟಿಸಿ ಮುಗುಳುನಗೆಯೊಡನೆ) ಎಲೆ ದೇವಿ! ದೈವಯೋಗದಿಂದ ವೃದ್ಧಿಯೊಂದುವೆ.

ವೃ॥ ನಿಜಪತ್ನೀಯುತನಾಗಿ ನಿನ್ನನೊಲವಿಂ ಕೊಂಡೊಯ್ದವಂ
ತತ್ವದಿಂ । ದ್ವಿಜನಲ್ಲಾತನುಮಾ ಮಹೇಶನೆ ವಲಂ ಸಾರ್ತಂದ

